



# ಚಿತ್ತರಗಿ ಚಿಜ್ಜ್ಯೋತಿ

ಲೇ: ಪ್ರೊ. ಜಿ. ಎಚ್. ಹನ್ನೆರಡಮಠ

ಶ್ರೀವಿಜಯ ಮಹಾಂತೇಶ ಗ್ರಂಥಮಾಲೆ ನಂ.-೪

# ಚಿತ್ತರಗಿ ಚಿಜ್ಯೋತಿ

ಲೇಖಕರು :
ಪ್ರೊ. ಜಿ. ಎಚ್. ಹನ್ನೆರಡುಮಠ, ಎಂ.ಎ.

ಪ್ರಕಾಶಕರು :
ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಧರ್ಮಪ್ರಸಾರಕ ಮಂಡಲ
ಇಲಕಲ್ಲ

೧೯೭೬

ಪ್ರಕಾಶಕರು :
ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ
ಧರ್ಮಪ್ರಸಾರಕ ಮಂಡಲ
ಇಲಕಲ್ಲ - ೫೮೭೧೨೫, ಫೋನ : ೪೪



ಲೇಖಕರು :
ಪ್ರೊ. ಜಿ. ಎಚ್. ಹನ್ನೆರಡಮಠ, ಎಂ.ಎ.
(ರೀಡರ ಹಾಗೂ ಕನ್ನಡ ವಿಭಾಗದ ಮುಖ್ಯಸ್ಥರು)
ಶ್ರೀ ವಿಜಯ ಮಹಾಂತೇಶ್ವರ ಆರ್ಟ್ಸ ಮತ್ತು
ಸಾಯಿನ್ಸ ಕಾಲೇಜ, ಇಲಕಲ್ಲ
ಸಂಪಾದಕರು : " ಪರಂಜ್ಯೋತಿ "
ಶ್ರೀ ಜಗದ್ಗುರು ಮೂರುಸಾವಿರಮಠ, ಹುಬ್ಬಳ್ಳಿ

ಪ್ರಥಮ ಮುದ್ರಣ : ೧೯೭೧ : ೨೦೦೦ ಪ್ರತಿಗಳು
ದ್ವಿತೀಯ ಮುದ್ರಣ : ೧೬೭೬ : ೧೦೦೦ ಪ್ರತಿಗಳು

ಬೆಲೆ : ಆರು ರೂಪಾಯಿ

ಮುದ್ರಕರು :
ಎಮ್. ಎಸ್. ವಿರಕ್ತಮಠ, ಬಿ.ಕಾಂ.
ಮನೋಹರ ಪಬ್ಲಿಕೇಶನ್ಸ ಮತ್ತು ಪ್ರಿಂಟರ
೮೩/೨ ಕಿಲ್ಲೆ, ಸಿ.ಬಿ.ಟಿ. ಹುಬ್ಬಳ್ಳಿ - ೫೮೦ ೦೨೦

ಓ ಯೋಗಿ ಶಿವಯೋಗಿ ವಿಶ್ವಶಂಕರ ಯೋಗಿ
ಈ ನಾಡು ನಿನ್ನಿಂದ ಬೆಳಗಾಯಿತು
ಈ ಗಾಳಿ ಈ ಮಣ್ಣು ಈ ನೀರು ಈ ಮುಗಿಲು
ನಿನ್ನಿಂದಲೇ ಚಿರಕೆ ಚೆಲುವಾಯಿತು.

ಮಾತಿನಲ್ಲಿ ಮೌನದಲಿ ಮನದಲ್ಲಿ ಮರೆಯಲ್ಲಿ
ಬಲದಲ್ಲಿ ಕೆಲದಲ್ಲಿ ತುಂಬಿ ಬಂದೆ
ಎದೆಯಲ್ಲಿ ಎದೆಯಾತ್ಮ ವರಲಿಂಗ ಠಾವಿನಲ್ಲಿ
ಠೀವಿಯಲಿ ನೀ ನಿಂದು ತುಂಬಿ ಬಂದೆ.

ಓ ನಮನ ಗುರುಯೋಗಿ ಓಂಕರಣ ಶಿವಯೋಗಿ
ನೀ ನಿದ್ದು ಇಲ್ಲದೆಯೆ ತೋರಬೇಡ
ಹುಟ್ಟಿ ಬಾ ಮತ್ತೊಮ್ಮೆ ಈ ಯೋಗ ಕ್ಷಾಮದಲ್ಲಿ
ಬರಲಾರೆನೆನ್ನುತ್ತ ನಿಲ್ಲಬೇಡ.

— ಜಿ. ಎಚ್. ಹನ್ನೆರಡುಮಠ



ಮಹಾತಪಸ್ವಿ

ಲಿಂ. ಶ್ರೀ ನಿ. ಪ್ರ. ವಿಜಯಮಹಾಂತ ಶಿವಯೋಗಿಗಳು

ಚಿತ್ತರಗಿ ಸಂಸ್ಥಾನಮಠ : ಇಲಕಲ್ಲ

# ಪರಿವಿಡಿ

ಭಾಗ ೨

## ಭಾಗ ೩

## ಭಾಗ ೨

## ಭಾಗ ೩



## ಸಮರ್ಪಣೆ

ಅಖಿಲ ಭಾರತ ವೀರಶೈವ ಮಹಾಸಭೆಯ ಸಂಸ್ಥಾಪಕರು
ಹಾಗೂ ಶ್ರೀಮದ್ವೀರಶೈವ ಶಿವಯೋಗಮಂದಿರ ಸಂಸ್ಥೆಯ
ಸಂಸ್ಥಾಪಕರು ಆದ ಪರಮಪೂಜ್ಯ ಶ್ರೀ ಮ. ನಿ. ಪ್ರ. ಕುಮಾರ
ಶಿವಯೋಗಿಗಳು ಹಾನಗಲ್ಲ ಅವರಿಗೆ ಈ "ಚಿತ್ತರಗಿ ಚಿಜ್ಯೋತಿ"
ಭಕ್ತಿಪೂರ್ವಕ ಸಮರ್ಪಿಸಲಾಗಿದೆ.

— ಪ್ರಕಾಶಕರು

ಅಖಿಲ ಭಾರತ ವೀರಶೈವ ಮಹಾಸಭೆ ಹಾಗೂ ಶ್ರೀ ಶಿವಯೋಗಮಂದಿರ
ಸಂಸ್ಥೆಯ ಸಂಸ್ಥಾಪಕರೂ ಆದ.
ಪೂಜ್ಯ ಲಿಂ. ಶ್ರೀ ನಿ. ಪ್ರ. ಕುಮಾರ ಶಿವಯೋಗಿಗಳು, ಹಾನಗಲ್ಲ.



ಅಖಿಲ ಭಾರತ ವೀರಶೈವ ಮಹಾಸಭೆ ಹಾಗೂ ಶ್ರೀ ಶಿವಯೋಗಮಂದಿರ
ಸಂಸ್ಥೆಯ ಸಂಸ್ಥಾಪಕರೂ ಆದ

**ಪೂಜ್ಯ ಲಿಂ. ಶ್ರೀ ನಿ. ಪ್ರ. ಕುಮಾರ ಶಿವಯೋಗಿಗಳು, ಹಾನಗಲ್ಲ.**

೧೭ ಗುರುಮಹಾಂತ ಸ್ವಾಮಿಗಳು — ೧೯೩೮ ರಿಂದ ೧೯೪೯

ii) ಕೊಪ್ಪದ ಮಹಾಂತ ,, — (ಇವರಿಗೆ ಪಟ್ಟಾಭಿಷೇಕ ಆಗಲಿಲ್ಲ)

iii) ವಿಜಯ ಮಹಾಂತ ದೇವರು — (ಇವರಿಗೆ ಪಟ್ಟಾಭಿಷೇಕ ಆಗಲಿಲ್ಲ. ಹುಬ್ಬಳ್ಳಿಯ ಶ್ರೀಮೂರುಸಾವಿರ ಮಠದ ಜಗದ್ಗುರುಗಳಾದರು)

೧೮ ಗುರುಮಹಾಂತ ಸ್ವಾಮಿಗಳು — ೧೯೬೩ ರಿಂದ ೧೯೭೦

೧೯ (ಸವದಿ) ಮಹಾಂತ ,, — ೧೯೭೦

---

(ಸೂಚನೆ : ಇವರಲ್ಲಿ ಹದಿನಾರನೆಯವರೇ ಮಹಾಪವಾಡ ಪುರುಷರೂ, ಈ ಗ್ರಂಥದ ನಾಯಕರೂ ಆದ ವಿಜಯಮಹಾಂತ ಶಿವಯೋಗಿಗಳು)



ಈಗಿನ ೧೯ನೆಯ ಮಠಾಧಿಪತಿಗಳಾದ

**ಶ್ರೀ ನಿ. ಪ್ರ. ಮಹಾಂತ ಸ್ವಾಮಿಗಳವರು**

ಚಿತ್ತರಗಿ ಸಂಸ್ಥಾನಮಠ, ಇಲಕಲ್ಲ.

## ಶ್ರೀವಾಣಿ * * * *

ವಿರತಾಗ್ರಣ್ಯರಾದ ಪರಮತಪಸ್ವಿ ಲಿಂಗೈಕ್ಯ ವಿಜಯಮಹಾಂತ ಶಿವಯೋಗಿಗಳ ಜೀವನಚರಿತ್ರವನ್ನು ಬರೆಯಿಸಬೇಕೆಂಬುವ ಸತ್ಯಸಂಕಲ್ಪವು ಬಹುದಿನಗಳಿಂದ ಒಡಮೂಡಿತ್ತು. ೨೫ ವರುಷಗಳ ಹಿಂದೆ ಓತಗೇರಿಯ ಕುಲಕರ್ಣಿ ರಾಮರಾಯರು ಬರೆದ ಚಿತ್ತರಗಿ ವಿಜಯಮಹಾಂತ ಶಿವಯೋಗಿಗಳವರ ಜೀವನಚರಿತೆಯ ಪ್ರತಿಗಳು ತೀರಿಹೋದುದರಿಂದಲೂ, ಹಾಗೂ ಚನ್ನಕವಿಗಳು ಬರೆದ ವಿಜಯಮಹಾಂತೇಶ್ವರ ಪುರಾಣದ ಪ್ರತಿಗಳು ಇಲ್ಲದಿರುವದರಿಂದಲೂ, ಜಿ. ಎಚ್. ಹನ್ನೆರಡಮಠ ಅವರಿಗೆ ವಿಜಯಮಹಾಂತ ಶಿವಯೋಗಿಗಳವರ ಜೀವನಚರಿತ್ರವನ್ನು ಬರೆಯಲು ತಿಳಿಸಿದೆವು. ಕೂಡಲೇ ಅವರು ಹೃದಯಾರೆ ಒಪ್ಪಿಕೊಂಡು 'ಚಿತ್ತರಗಿ ಚಿಜ್ಜ್ಯೋತಿ' ಶಿರೋನಾಮವುಳ್ಳ ಗ್ರಂಥವನ್ನು ಬರೆದು ನಮಗೆ ಒಪ್ಪಿಸಿದರು. ನಮಗೆ ಅತಿಶಯ ಆನಂದವಾಗಿ ಸಾಧ್ಯವಾದಷ್ಟು ತೀವ್ರ ಅಚ್ಚಿನಮನೆಯನ್ನು ಸೇರಿಸಿ ಹೊರತರಬೇಕೆಂದು ಬಯಸಿದೆವು. ಹಣವಿಲ್ಲದೆ ಆದಾವ ಕಾರ್ಯವೂ ಆಗದು. ಈ ವಿಷಯವನ್ನು ಚಿತ್ತರಗಿ ಸಮಸ್ತ ಭಕ್ತರಿಗೆ ತಿಳಿದೊಡನೆಯೇ ಗ್ರಂಥದ ಅಚ್ಚಿನ ಭಾರವನ್ನು ಆನಂದದೊಡನೆ ವಹಿಸಿಕೊಂಡು ಒಂದೇ ದಿನದಲ್ಲಿ ೫,೫೦೦ ರೂಪಾಯಿಗಳನ್ನು ಕೂಡಿಸಿ ಆದರ ಕೊರತೆಯನ್ನು ನೀಗಿಸಿದರು. ವಿಜಯಮಹಾಂತೇಶನ ಕಾರ್ಯಕ್ಕೆ ಅನುಕೂಲವಾಯ್ತೆಂದು ಬಗೆದು ಆನಂದಪಟ್ಟೆವು. ಮತ್ತು ಈ ಗ್ರಂಥವನ್ನು ಹುಬ್ಬಳ್ಳಿ ಮೂರುಸಾವಿರಮಠದ ಜಗದ್ಗುರು ಗಂಗಾಧರ ರಾಜಯೋಗೀಂದ್ರರ ದ್ವಾದಶ ಪೀಠಾರೋಹಣದ ಪಟ್ಟಾಭಿಷೇಕ ಮಹೋತ್ಸವದ ಸವಿನೆನಪಿಗಾಗಿ ಪ್ರಕಟಿಸಬೇಕೆಂದು ನಿರ್ಧರಿಸಿ ಕಾರ್ಯರೂಪಕ್ಕೆ ತಂದಿದ್ದೇವೆ. ಈ ಗ್ರಂಥವನ್ನು ಇಂದಿನ ಜನಾಂಗಕ್ಕೆ ಅನುಕೂಲವಾಗುವಂತೆ ಹೊಸ ಬಗೆಯ ಶೈಲಿಯಲ್ಲಿ ಜಿ. ಎಚ್. ಹನ್ನೆರಡಮಠ ಅವರು ಬರೆದು ನಿಮ್ಮೆಲ್ಲರ ಕೈಯಲ್ಲಿ ನೀಡಿದ್ದಾರೆ.

ಅದ್ಭುತ ಪವಾಡ ಪುರುಷರಾದ ವಿಜಯಮಹಾಂತಶಿವಯೋಗಿಗಳವರ ಜೀವನ ಚರಿತ್ರವು ಭಕ್ತರ ಭಕ್ತಿಯ ಸಂವರ್ಧನೆಗೆ ದಾರಿದೀಪವಾಗಿದೆ. ಆ ತಿಳಿಬೆಳಕಿನಲ್ಲಿ ಕಂಡುಂಡವರಿಗೆ ಸಿಗುವದು ಪರಮಸುಖ. ಆ ಭಾವನೆ, ಜ್ಞಾನ, ಭಕ್ತಿ ಎಲ್ಲರಲ್ಲಿ ಒಡಮೂಡಿಬರಬೇಕೆಂಬುವ ಮಹೋದ್ದೇಶದಿಂದಲೇ ಈ ಪುಸ್ತಕವು ಪ್ರಕಾಶನ ವಾಗುತ್ತಲಿದೆ. ಮತ್ತು ಚಿತ್ತರಗಿ ಸದ್ಭಕ್ತರಿಂದ ಬಂದ ಹಣದಿಂದ ಹಾಗು ಪುಸ್ತಕ ಮಾರಾಟದಿಂದ ಬಂದ ಹಣದಿಂದ 'ಶ್ರೀವಿಜಯಮಹಾಂತೇಶ್ವರ ಧರ್ಮ ಪ್ರಚಾರಕ ಮಂಡಳ'ದ ವತಿಯಿಂದ ಪ್ರತಿವರ್ಷವೂ ಇಂಥಹ ಆಧ್ಯಾತ್ಮಿಕ ಗ್ರಂಥಗಳನ್ನು ಪ್ರಕಟಿಸಿ ಧರ್ಮಪ್ರಚಾರ ಮಾಡಬೇಕೆಂಬುವ ಸಂಕಲ್ಪ ಮಾಡಿಕೊಂಡಿದ್ದೇವೆ. ಇದೆಲ್ಲಕ್ಕೂ ವಿಜಯಮಹಾಂತೇಶ್ವರನು ಅನುಗ್ರಹಿಸಲಿ. ಸದ್ಭಕ್ತರಿಂದ ಸಹಾಯ ಸಹಕಾರ ನಿರಂತರವೂ ದೊರೆಯು ತ್ತಿರಲಿ. ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಗಂಗಾಧರ ರಾಜ ಯೋಗೀಂದ್ರ ಮಹಾಸ್ವಾಮಿಗಳು ಮೂರುಸಾವಿರಮಠ, ಹುಬ್ಬಳ್ಳಿ ಅವರು 'ಚಿತ್ತರಗಿ ಚಿಜ್ಜ್ಯೋತಿ' ಗ್ರಂಥಕ್ಕೆ ತಕ್ಕಂತೆ ಸುಂದರವಾದ, ಅನುಭವಪೂರ್ಣ ವಾದ ಆಶೀರ್ವಚನವನ್ನು ಬರೆದು ಕೃತಿಗೆ ಕಳೆಬರುವಂತೆ ದಯಪಾಲಿಸಿದ್ದಾರೆ. ಸಮಯಕ್ಕೆ ಸರಿಯಾಗಿ ಹುಬ್ಬಳ್ಳಿ ಸಂಯುಕ್ತ ಕರ್ನಾಟಕ ಅಚ್ಚುಕೂಟದವರು ಸುಂದರವಾಗಿ ಮುದ್ರಿಸಿ ನೀಡಿದ್ದಕ್ಕೆ ಅವರಿಗೆ ವಿಜಯಮಹಾಂತೇಶ್ವರನು ಮಂಗಳವನ್ನುಂಟು ಮಾಡಲೆಂದು ಹಾರೈಸುತ್ತೇವೆ.

ಶ್ರೀ ಮ. ನಿ. ಪ್ರ. ಮಹಾಂತಸ್ವಾಮಿಗಳು

ದಿ. ೨೪-೧೦-೭೧ ಚಿತ್ತರಗಿ ಸಂಸ್ಥಾನಮಠ, ಇಳಕಲ್ಲ



ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು, ಮೂರುಸಾವಿರಮಠ, ಹುಬ್ಬಳ್ಳಿ.

# ಆಶೀರ್ವಚನ

( ಹುಬ್ಬಳ್ಳಿಯ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು, ಮೂರುಸಾವಿರಮಠ ಅವರಿಂದ)

ಚಿಜ್ಜ್ಯೋತಿ ಸ್ವರೂಪರಾದ ಲಿಂಗೈಕ್ಯ ಶ್ರೀ ವಿಜಯ ಮಹಾಂತ ಶಿವಯೋಗಿಗಳು ಅರಿಷಡ್ವರ್ಗಗಳನ್ನು ಜಯಿಸಿದವರು. ಅದ್ಭುತ ಶಕ್ತಿ ಸಂಪನ್ನರು, ವೀರ ವಿರಕ್ತರು, ನಿರಾಶಾಮೂರ್ತಿಗಳು. ಬೇಕು ಬೇಡೆಂಬ ಭವ ಬೀಜಗಳನ್ನು ಹುರಿದವರು. ಆತ್ಮಶಕ್ತಿಯ ದಿವ್ಯಪ್ರತಿಭೆಯಿಂದ ಭಕ್ತೋದ್ಧಾರ ಮಾಡಿದವರು. ಮಾನವ ಕುಲಕ್ಕೆ ಧ್ಯಾನಯೋಗದ ಮಹಿಮೆಯನ್ನು ತೋರಿದವರು. ಧ್ಯಾನದ ಬಲದಿಂದ ಬೇಕಾದಂಥ ಸಾಮಾಜಿಕ ಕಾರ್ಯವನ್ನು ಮಾಡುವ ಮಹಾಶಕ್ತಿಯು ಉಂಟಾಗುವದೆಂದು ಅರುಹಿದವರು. ೨೦ ನೆಯ ಶತಮಾನದ ಪೂರ್ವಾರ್ಧದಲ್ಲಿ ಕರ್ನಾಟಕದಲ್ಲಿರುವ ವೀರಶೈವ ಸ್ವಾಮಿಗಳವರು ಜಾಗೃತರಾಗಿ ಆಧ್ಯಾತ್ಮ ದಾರಿಯತ್ತ ಸಾಗಲು ಹಾಗೂ ಸಮಾಜ ಸೇವೆಯತ್ತ ಮನಸ್ಸು ಹಾಕಲು ಲಿಂಗೈಕ್ಯ ವಿಜಯ ಮಹಾಂತ ಶಿವಯೋಗಿಗಳು ಹಾಗೂ ಲಿಂ. ಕುಮಾರ ಶಿವಯೋಗಿಗಳು ಹಾನಗಲ್ಲ ಅವರು ಕಾರಣರೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಆ ಮಹಾವ್ಯಕ್ತಿಯ ತಪಃ ಪ್ರಭಾವದ ಪ್ರಕಾಶದಲ್ಲಿಯೇ ಎನಿತೋ ಜನರು ಇಂದಿಗೂ ಬಾಳಿ ಬೆಳೆಯುತ್ತಿದ್ದಾರೆ. ಆ ಶಕ್ತಿ ಸ್ವರೂಪದ ಸೇವೆಯಲ್ಲಿ ನಿರತರಾಗಿದ್ದಾರೆ. ಲಿಂ. ವಿಜಯ ಮಹಾಂತ ಶಿವಯೋಗಿಗಳು ಮಳೆಯಿಲ್ಲದ ನಾಡಿಗೆ ಮಳೆ ನೀಡಿದ್ದಾರೆ. ಮಕ್ಕಳಿಲ್ಲದವರಿಗೆ ಮಕ್ಕಳಿಗಿತ್ತಿದ್ದಾರೆ. ಮಹಾರೋಗ ಪೀಡಿತರಿಗೆ ಪಾದೋದಕವನ್ನು ನೀಡಿ ರೋಗ ನಿವಾರಣೆ ಮಾಡಿದ್ದಾರೆ. ಅಜ್ಞಾನಾಂಧಕಾರದಲ್ಲಿ ಮಲಗಿ ಬಳಲಿದ ಎಂಥಹ ವ್ಯಕ್ತಿಯೇ ಬರಲಿ ಅವನನ್ನು ಚೇತರಿಸಿ ಜ್ಞಾನದ ಬೆಳಕನ್ನಿತ್ತು

ಸನ್ಮಾರ್ಗವನ್ನು ತೋರಿಸಿ ಅವನ ಜೀವನವನ್ನೇ ಕಲ್ಯಾಣ ಮಾಡಿದ್ದಾರೆ. ಕರ್ನಾಟಕದ ಆಧ್ಯಾತ್ಮ ಕೇಂದ್ರದಂತಿರುವ ಶ್ರೀ ಮದ್ವೀರಶೈವ ಶಿವಯೋಗ ಮಂದಿರ ಮಹಾಸಂಸ್ಥೆಯು ನಿರ್ಮಾಣವಾಗುವ ಸ್ಥಾನವನ್ನು ತೋರಿಸಿದ ಶಿವಯೋಗಿ ಕುಲಸಾರ್ವಭೌಮರು. ಲಿಂ. ವಿಜಯ ಮಹಾಂತ ಶಿವಯೋಗಿ ಗಳಿಗೆ ದ್ವಿತೀಯ ಶಂಭು ಬಸವಣ್ಣನವರಲ್ಲಿ ಅನುಪಮ ಶ್ರದ್ಧೆ ಇತ್ತಲ್ಲದೆ ಮಹಾತ್ಮಾ ಬಸವಣ್ಣನವರ ವಚನಗಳಿಗೆ 'ಅಪ್ಪನ ವಚನ' ವೆಂದು ಕರೆದು ಆ ವಚನ ಗ್ರಂಥವನ್ನು ನಿರಂತರವೂ ಉಚ್ಚಾಸನದಲ್ಲಿಟ್ಟು ಪೂಜಿಸುತ್ತಿದ್ದರಂತೆ, ಅನಾಥರಕ್ಷಕರಾಗಿದ್ದಂತೆ ಕವಿಗಳಿಗೆ, ಪಂಡಿತರಿಗೆ ಆಧಾರಸ್ತಂಭರಾಗಿದ್ದರು. ಎಂತಹ ನಾಸ್ತಿಕನೇ ಬರಲಿ, ಆಸ್ತಿಕತೆಯನ್ನು ಹುಟ್ಟಿಸಿ ತಮ್ಮ ತಪಃ ಪ್ರಭಾವ ದಿಂದ ದಾರಿಗೆ ತರುತ್ತಿದ್ದರು. ವಿಜಯ ಮಹಾಂತ ಶಿವಯೋಗಿಗಳು ಬಹಿರಂಗ ದಾಡಂಬರಕ್ಕೆ ಮೆಚ್ಚುತ್ತಿದ್ದಿಲ್ಲ. ಅಂತರಂಗದ ಆತ್ಮಸೌಂದರ್ಯವನ್ನು ಸಂಗ ಳಿಸಿಕೊಂಡು ನಿರಂತರವೂ ಧ್ಯಾನತಲ್ಲೀನರಾಗುತ್ತಿದ್ದರು. ಅವರು ನುಡಿವ ನುಡಿಯಲ್ಲಿ ಅಲೌಕಿಕ ಶಕ್ತಿ ಇರುತ್ತಿತ್ತು. ವಾಕ್ಸಿದ್ಧಿಯೆಂಬುದು ಅವರಿಗೆ ಸಹಜವಾಗಿತ್ತು. ವಾಕ್ಸಿದ್ಧಿಯಿಂದ ಸಹಸ್ರಾರು ಜನರನ್ನು ಉದ್ಧಾರ ಮಾಡಿ ದ್ದಾರೆ. ತಮ್ಮ ಆತ್ಮಶಕ್ತಿಯ ಬಲದಿಂದ ಸಹಸ್ರಾರು ಪವಾಡಗಳನ್ನು ಮಾಡಿ ಮಲಗಿರುವ ಮಾನವ ಕೋಟಿಯನ್ನು ಎಚ್ಚರಿಸಿ ಬೆಳಕು ನೀಡಿದ್ದಾರೆ. ಇಂದಿಗೂ ಅವರ ಗದ್ದುಗೆಗೆ ಶ್ರದ್ಧೆಯಿಂದ ನಡೆದುಕೊಂಡವರಿಗೆ ಇಷ್ಟಸಿದ್ಧಿ ಫಲಪ್ರಾಪ್ತಿಯೆಂಬುದು ಮನೆಮಾತಾಗಿದೆ. 'ಶೇನ ವಿನಾ ತೃಣಮಪಿ ನ ಚಲತಿ' ಎಂಬುದನ್ನು ಮನಗಂಡಿದ್ದರು. ಲಿಂ. ವಿಜಯ ಮಹಾಂತ ಶಿವಯೋಗಿಗಳ ವರ ವೈರಾಗ್ಯವನ್ನು ಕಂಡವರು ಇಂದಿಗೂ ಅವರ ಶಿಷ್ಯಕೋಟಿಯು ಅವರಂ ತಹ ಕರ್ತೃತ್ವಶಾಲಿಗಳಾದ, ತಪಸ್ಸಿನ ತೇಜೋನಿಧಿಯಾದ ಶಿವಯೋಗಿಗಳನ್ನು ನಾವು ಕಂಡಿಲ್ಲವೆಂದು ಹೇಳುತ್ತಿದ್ದಾರೆ. ವೃದ್ಧಭಕ್ತರು ಆ ವ್ಯಕ್ತಿಯ ಘನತೆ ಯನ್ನು ಹೇಳುವಾಗ ಕಣ್ಣೀರು ಸುರಿಸುತ್ತಿರುವವನ್ನು ನೋಡಿದರೆ ಆ ಮಹಾ ಮಹಿಮನಲ್ಲಿರುವ ಆಧ್ಯಾತ್ಮಿಕ ಸೌಂದರ್ಯ, ವೈರಾಗ್ಯದ ವೈಭವ ಎಷ್ಟಿತ್ತೆಂ ಬುದು ಹೇಳಲಸದಳ. ಮಹಾಕಾರಣಿಕ ಪುರುಷರಾದ ಲಿಂ. ಹಾನಗಲ್ಲ ಕುಮಾರ ಶಿವಯೋಗಿಗಳಿಗೂ ಮಾರ್ಗದರ್ಶಕರಾಗಿದ್ದರು. ಇಂತಹ ಚೈತನ್ಯ ಸ್ವರೂಪರಾದ ಯುಗಪುರುಷ ಲಿಂ. ವಿಜಯ ಮಹಾಂತ ಶಿವಯೋಗಿಗಳವರ

ಜೀವನ ಚರಿತ್ರವನ್ನು ಭಕ್ತೋದ್ಧಾರಕ್ಕಾಗಿ ಚಿತ್ತರಗಿ, ಇಲಕಲ್ಲ ಸಂಸ್ಥಾನ ಮಠಾಧಿಪತಿಗಳಾದ ಈಗಿನ ನಿ. ಪ್ರ ಮಹಾಂತಸ್ವಾಮಿಗಳು ಪ್ರೊ. ಜಿ. ಎಚ್. ಹನ್ನೆರಡಮಠ ಅವರಿಗೆ ತಿಳಿಸಿ ಸುಂದರವಾಗಿ ಬರೆಯಿಸಿರುವದು ಮೆಚ್ಚತಕ್ಕದ್ದಾಗಿದೆ. ಶ್ರೀ ಮಹಾಂತ ಸ್ವಾಮಿಗಳು ಲಿಂಗಪೂಜಾ ನಿಷ್ಠರು ಹಾಗೂ ಪ್ರವಚನ ಪಟುಗಳು. ಮಹಾಂತ ಸ್ವಾಮಿಗಳು ಮಠಕ್ಕಾದೊಡನೆಯೇ ಧರ್ಮಜಾಗೃತಿಗಾಗಿ ಅಹೋರಾತ್ರಿ ಪರಿಶ್ರಮಿಸುತ್ತಿದ್ದಾರೆ. ಧರ್ಮದ ತಿರುಳು ತಿಳಿಯದಿದ್ದರೆ ಸಮಾಜವು ಬೆಳೆಗಲಾರದೆಂಬುದೇ ಶ್ರೀಗಳವರ ಸಿದ್ಧಾಂತ. ಸಮಯಕ್ಕೆ ಸರಿಯಾಗಿ ಮಠದ ಹಾಗೂ ಸಮಾಜದ ಒಳಹೊರಗೂ ಪ್ರಗತಿಯನ್ನು ಮಾಡಬೇಕೆಂಬುವ ಮನದಿಚ್ಛೆಯುಳ್ಳ ಶ್ರೀಗಳು ಚಿತ್ತರಗಿ, ಇಲಕಲ್ಲ ಮಠಕ್ಕೆ ದೊರೆತಿದ್ದು ನಮಗೆ ಸಂತಸವನ್ನುಂಟುಮಾಡಿದೆ. ಕೆಲವೇ ದಿನಗಳಲ್ಲಿ ಭಕ್ತರ ಹೃದಯುವನ್ನು ಗೆದ್ದು, ಜನಜಾಗೃತಿ ಮಾಡುವ ಕಾರ್ಯವನ್ನು ಹಮ್ಮಿಕೊಂಡಿದ್ದಾರೆ. ಅವರವರ ಧರ್ಮದಂತೆ, ಪ್ರತಿಯೊಬ್ಬರೂ ನಡೆಯಲೇಬೇಕು. ಲಿಂಗವಂತರಾದವರು ಲಿಂಗವನ್ನು ಧರಿಸಿದರೇನೆ ಶೋಭೆಯಾದೀತು. ಎದೆಯ ಮೇಲೆ ಲಿಂಗವಿಲ್ಲದವರ ಜೀವನ ಹಾಳು ಎಂದು ಲಿಂಗವಿಲ್ಲದವರಿಗೆ ಲಿಂಗವನ್ನು ಕಟ್ಟಿಸಿ, ಅವರಿಗೆ ವೀರಶೈವ ಧರ್ಮದ ಮಹತಿಯನ್ನು ತಿಳಿಸಿ, ಕಳಿಸುತ್ತಿರುವುದನ್ನು ಕಂಡು ಹರ್ಷವಾಗುತ್ತಲಿದೆ. ಚಿತ್ತರಗಿ ವಿಜಯ ಮಹಾಂತೇಶ್ವರನ ಮಠಾಧಿಪತಿಗಳಾಗುವದಕ್ಕಿಂತ ಪೂರ್ವದಲ್ಲಿ ಅಲ್ಲಲ್ಲಿ ಪುರಾಣ ಪ್ರವಚನ ಮಾಡಿ ಧರ್ಮಜಾಗೃತಿ ಮಾಡಿದ್ದಾರೆ. ಅಷ್ಟೇ ಅಲ್ಲ, ಕಾಲು ನಡಿಗೆಯಿಂದ ಹಳ್ಳಿ ಹಳ್ಳಿಗೆ ಹೋಗಿ ಪ್ರವಚನ ಹೇಳಿ ಜನರಿಗೆ ದಾರಿ ತೋರಿಸಿದ್ದಾರೆ. ಲಿಂಗಾಂಗ ಸಾಮರಸ್ಯದ ಮಹತ್ವವನ್ನು ಅರುಹಿದ್ದಾರೆ. ವಿಜಯ ಮಹಾಂತೇಶನ ಲೀಲೆ ದೊಡ್ಡದು. ಸವದಿಯಿಂದ ಇವರನ್ನು ತನ್ನ ಹತ್ತಿರ ಕರೆದುಕೊಂಡು ತನ್ನ ಹತ್ತಿರ ಕರೆದುಕೊಂಡು ತನ್ನ ಸೇವೆಯನ್ನು ಮಾಡಿಸಲು ಹಚ್ಚಿದ್ದಾನೆ. ಚಿತ್ತರಗಿ, ಇಲಕಲ್ಲ, ಹುನಗುಂದ ಮುಂತಾದ ಊರುಗಳ ಸದ್ಭಕ್ತರ ಪುಣ್ಯ ಚೆನ್ನಾಗಿದೆ. ವಿಜಯ ಮಹಾಂತೇಶ್ವರನು ಅವರೆಲ್ಲರ ಉದ್ಧಾರಕ್ಕಾಗಿ ಕೃಪೆ ದೋರಿದ್ದಾನೆ.

ವಿಜಯ ಮಹಾಂತೇಶನ ಚೈತನ್ಯಶಕ್ತಿ ಬೆಳೆಯಬೇಕಾಗಿದೆ. ಚಿಜ್ಯೋತಿ

ಬೆಳಗಬೇಕಾಗಿದೆ. ಭಕ್ತರ ಹೃದಯ ಕಮಲಗಳು ಅರಳಬೇಕಾಗಿದೆ. ಈ ಮಹೋದ್ದೇಶದ ಸಫಲತೆಯೇ ಚಿತ್ತರಗಿ ಚಿಜ್ಜ್ಯೋತಿಯ ಪ್ರಕಾಶನ.

ಪ್ರೇರೇಪಿಸಿದವರು ಮಹಾಂತ ಸ್ವಾಮಿಗಳವರು. ನಿಧಿ ಸಂಗ್ರಹಿಸಿ ಈ ಪುಣ್ಯಕಾರ್ಯಕ್ಕೆ ನೀಡಿದವರು ಚಿತ್ತರಗಿ ಸದ್ಭಕ್ತರು. ಮೂಲ ಮಠದ ಭಕ್ತರಿಂದಲೇ ಈ ಹೆಸರಿನ ಹೊತ್ತಗೆ ಹೊರಟಿದ್ದು ಒಂದು ವೈಶಿಷ್ಟ್ಯ. ಇಲ್ಲಿಂದಲೆ ಆಗಬೇಕಾಗಿತ್ತು. ಆದದ್ದೂ ಭೂಷಣವಾಯ್ತು. ಮೊದಲು ಅದೇ ಮಠದವರಾದ ನಮಗೆ, ಇಂತಹ ಮಹತ್ಕಾರ್ಯಕ್ಕೆ ಚಿತ್ತರಗಿ ಭಕ್ತರು ಮನಸ್ಸು ಮಾಡಿದ್ದು ನೋಡಿದರೆ ಎಲ್ಲಿಲ್ಲದ ಅಭಿಮಾನ ಆನಂದಗಳೆರಡೂ ಉಕ್ಕುತ್ತಿವೆ. ಈ ಕಾರ್ಯಕ್ಕೆ ಇಷ್ಟಕ್ಕೆ ತಿಲಾಂಜಲಿ ನೀಡದೆ ಮತ್ತೆ ಮತ್ತೆ ಈ ಸದ್ಭಕ್ತರಿಂದಲೇ ಧರ್ಮಪ್ರಚಾರ ಗ್ರಂಥಗಳು ಹೊರಡಿಸುವ ವಿಷಯವನ್ನೂ ಇಟ್ಟುಕೊಂಡು ಮುಂದುವರಿಸುತ್ತಿರುವುದನ್ನು ನಮ್ಮ ಭಾಗ್ಯವೆಂದೇ ಭಾವಿಸಿದ್ದೇವೆ. ಶ್ರೀಮಹಾಂತ ಸ್ವಾಮಿಗಳವರ ಪ್ರೇರಣೆ, ಭಕ್ತರ ಸದ್ಭಾವನೆ ಇದೇ ರೀತಿ ಸದಾ ಬೆಳೆಯುತ್ತಿರಲೆಂಬುದೇ ಅಂತಃಕರಣದ ಹಾರೈಕೆ.

ನಿಧಿ ಸಂಗ್ರಹಿಸಿ ಚಿತ್ತರಗಿ ಭಕ್ತರು ಸತ್ಕಾರ್ಯಗೈದರೆ, ನಿಧಿಸಂಗ್ರಹದ ಸದುಪಯೋಗಗೊಳಿಸಿದವರು ಪರಂಜ್ಯೋತಿ ಸಂಪಾದಕರಾದ ಪ್ರೊ.ಜಿ.ಎಚ್. ಹನ್ನೆರಡಮಠರವರು. ಶ್ರೀ ಮಹಾಂತ ಸ್ವಾಮಿಗಳವರು ಹೇಳಿದೊಡನೆಯೇ ಶಿರಸಾವಹಿಸಿ ತಮ್ಮ ರಸಮಯ ಶೈಲಿಯಲ್ಲಿ "ಚಿತ್ತರಗಿ ಚಿಜ್ಜ್ಯೋತಿ" ಶೀರ್ಷಿಕೆಯ ಗ್ರಂಥವನ್ನು ಬರೆದು ವಿಜಯ ಮಹಾಂತೇಶ್ವರರ ಘನ ವ್ಯಕ್ತಿತ್ವವನ್ನು ಬೆಳಕಿಗೆ ತಂದಿದ್ದಾರೆ. ಜಿ. ಎಚ್. ಹನ್ನೆರಡುಮಠ ಅವರು ಸಹಜ ಕವಿಗಳು, ಸಾಹಿತಿಗಳು, ಭಾವಜೀವಿಗಳು, ಎಳೆ ವಯಸ್ಸಿನಲ್ಲಿಯೇ ಸಾಹಿತ್ಯ ಸರೋವರದಲ್ಲಿ ಈಸುತ್ತ ಬಂದವರು. ಕೇವಲ ಸಾಹಿತಿಗಳು ಅಷ್ಟೇ ಅಲ್ಲ . ಆಧ್ಯಾತ್ಮ ಪ್ರೇಮಿಗಳು. ಅಂತೆಯೇ ಈ ಮಹಾತ್ಮರ ಅಗಾಧ ಶಕ್ತಿಯನ್ನೂ ಕಂಡುಂಡು ಬಂದಿದ್ದಾರೆ. ಭಾವಶುದ್ಧಿಯೊಡನೆ ಭಾಷೆಯ ಬಂಧುರತೆಯಲ್ಲಿ ಚರಿತ್ರವನ್ನೂ ಚಿತ್ರಿಸಿದ್ದಾರೆ. ಸಾಮಾನ್ಯರಿಗೂ ಅರ್ಥವಾಗುವಂತೆ, ಹೃದಯ ಪವಿತ್ರವಾಗುವಂತೆ ಚಿತ್ತಾಕರ್ಷಕ ಶೈಲಿಯಲ್ಲಿ ರಚಿಸಿದ್ದಾರೆ. ಚಿತ್ತರಗಿ ಚಿಜ್ಜ್ಯೋತಿಯನ್ನು ಓದುತ್ತ ಹೋದಂತೆ, ಭಕ್ತಿಯ ಆವೇಶದಲ್ಲಿ ತನ್ಮಯರಾಗಿ ಬರೆದಂತೆ ಭಾಸವಾಗುತ್ತದೆ. ವಿಜಯಮಹಾಂತ ಶಿವಯೋಗಿಯ ಕಥೆಯನ್ನು ಅಮೃತ ಗಂಗಾ

ನದಿಯಂತೆ ಉಕ್ಕಿಹರಿಯುವಂತೆ ಪ್ರಾರಂಭಿಸಿದ್ದಾರೆ. ಕಲ್ಪನಾಲೋಕದಲ್ಲಿ ವಿಹರಿಸಿ, ಶಿವಯೋಗಮಂದಿರದಿಂದ ಕೂಗಿಸಿ, ಮಂತ್ರಶರೀರಿಯಾದ ವೃದ್ಧ ತಪಸ್ವಿಸಿಯಿಂದ ಅಪಾರ ಶಿವಯೋಗದ ವೈಭವವನ್ನು ತಿಳಿಸುತ್ತ, ವಿಜಯ ಮಹಾಂತೇಶನ ಭವ್ಯ ವ್ಯಕ್ತಿತ್ವವನ್ನು ಸ್ಮರಿಸುತ್ತ ಭಾವಕಂಪನಗಳಿಂದ ಪ್ರಾರಂಭಿಸಿದಂತಿದೆ. ಶಿವಯೋಗಿಗಳ ಬಾಲ್ಯ ಜೀವನವನ್ನು ಹೃದಯಾಕರ್ಷಕವಾಗುವಂತೆ, ವಿಷಯವನ್ನು ವಿವೇಚಿಸಿದ್ದಾರೆ. ವಿಜಯ ಮಹಾಂತ ಶಿವಯೋಗಿಗಳ ತರುಣಾವಸ್ಥೆಯಲ್ಲಿ ಕಾಣುವ ವೈರಾಗ್ಯವಂತೂ ಮನಮೋಹಕವನ್ನುಂಟು ಮಾಡುತ್ತದೆ. ಅವರ ವಿರತಿಯ ಕೆಚ್ಚೆದೆ, ಕಠೋರ ತಪಸ್ಸು, ಬೆಂಕಿಯ ಕೆಂಡದಂತಿದ್ದ ಉಗ್ರನಿಷ್ಠೆ ಕಲ್ಲೆದೆಯವರನ್ನೂ ಸಹ ಕರಗಿಸುವಂತಿದೆ. ''ಚಿತ್ತರಗಿ ಚಿಜ್ಜ್ಯೋತಿ''ಯಲ್ಲಿ ಮೊದಲು ಕಾಣಬರುವ 'ಮರುಳಸಿದ್ಧರ ದಿವ್ಯ ಸೂಚನೆ' ಕಲ್ಬುಟ್ಟಕ್ಕೆ ಪ್ರಯಾಣ, ಭಗವಂತನ ಲೀಲೆ ಅಗಾಧವಲ್ಲವೇ? ಸಂಸ್ಕೃತ ಪಾಠಶಾಲೆ, ದಾರಿಯಲ್ಲಿಯ ಸವುತೇಕಾಯಿ, ಮಳಿಯಪ್ಪಾರ್ಯ ಕರಡೆಪ್ಪನವರ ಸಂದರ್ಶನ, ಭವತಿ ಭಿಕ್ಷಾಂದೇಹಿ, ಅದೊಂದು ಅದ್ಭುತ ಚರಿತ್ರೆ, ಮಠಾಧಿಕಾರ ಸ್ವೀಕೃತಿಗೆ ಒತ್ತಾಯ, ಹೋಗುತ್ತೇನೆಂದು ಹೇಳಿಹೊರಟ, ಶಿವಪ್ರೇರಣೆಯ ನೆನಪು, ಇಲಕಲ್ಲಿಗೆ ಆಗಮನ, ಈ ಶಿರೋನಾಮದ ಲೇಖನಗಳನ್ನೂ ಹೃದಯ ತೆರೆದು ಓದುವ ಸಾಧಕರಿಗೆ ಕಣ್ಣೀರು ಬಾರದೇ ಇರಲಾರವು. ಮಳಿಯಪ್ಪಾರ್ಯನ ಹಾಗೂ ಶರಣ ಕರಡೆಪ್ಪನವರ ಮಿಂಚಿನಂತೆ ಸಂಚರಿಸುತ್ತಿರುವ ವಾಗ್ವಾದವನ್ನು ಓದುತ್ತಿರುವಾಗ ಅವರೀರ್ವರ ದೂರದೃಷ್ಟಿ, ಅಚಲನಿಷ್ಠೆ, ಗೆಲುವೆನೆಂಬ ಭಾಷೆ. ಇವೆಲ್ಲವುಗಳನ್ನೂ ನಿರುಕಿಸಿದಾಗ ಹೃದಯವೇ ಕಂಪನವುಂಟಾಗುವಂತಿದೆ. ಚಿತ್ತವು ತಲ್ಲಣಿಸಿಹೋಗಿಬಿಡುತ್ತದೆ. ವಿಷಯಗಳ ನಿರೂಪಣೆಯ ಶೈಲಿಯನ್ನು ನೋಡಿ ಭಾವುಕರು ತನ್ಮಯರಾಗಿ ಭಾವಾವೇಶದಲ್ಲಿ ಕುಳಿತುಬಿಡುವಂತಿದೆ. ಹೃದಯದಲ್ಲಿ ಕರುಣೆತುಂಬಿ ಹೊರಸೂಸುವಂತಿದೆ. ಈ ಹೃದಯಂಗಮ ದೃಶ್ಯ ಜಿ. ಎಚ್. ಹನ್ನೆರಡುಮಠ ಅವರು ಸಮಯೋಚಿತವಾಗಿ ಭಾಷೆಯನ್ನು ಬಳಸಿ, ಬೆಳಕಿನಲ್ಲಿ ಮಹಾಚೇಳಕು ಕಾಣುವಂತೆ ಅವರೀರ್ವರ ವ್ಯಕ್ತಿತ್ವದ ಒಳಗುಟ್ಟನ್ನು ಸುಮಧುರ ಶೈಲಿಯಲ್ಲಿ ಬರೆದು ಓದುಗರ ಹೃದಯವನ್ನು ಆಕರ್ಷಿಸಿದ್ದಾರೆ. ವಿಷಯವೈವಿಧ್ಯ, ವಿಚಾರಮಂಥನ ಭಾವಪೂರ್ಣವುಳ್ಳವುಗಳಾಗಿವೆ. ೨ ಮತ್ತು ೩ ನೆಯ ಭಾಗದಲ್ಲಿ ವಿಜಯಮಹಾಂತ

ಶಿವಯೋಗಿಗಳ ಅಗಾಧಲೀಲೆ, ಸಾಮಾಜಿಕ ಸುಧಾರಣೆ, ಅದ್ಭುತ ಪವಾಡಗಳು ಇವೆಲ್ಲವುಗಳನ್ನು ಮನಂಬುಗುವಂತೆ ಚಿತ್ರಿಸಿದ್ದಾರೆ. ಲೇಖಕರೇ ಒಂದೆಡೆ 'ಸತ್ಯದ ದಿಗ್ವಿಜಯ'ದ ಶಿರೋನಾಮೆಯಲ್ಲಿ "ವಿಜಯ ಮಹಾಂತ ಶಿವಯೋಗಿಗಳ ಬಹುವಿಧ ವ್ಯಕ್ತಿತ್ವವನ್ನು ಅಳತೆ ಮಾಡಿ ಹೇಳಲು ಸಾಧ್ಯವೇ ಇಲ್ಲ. ಅವರು ಅಲ್ಲಮಪ್ರಭುವಿನಂತೆ ಅನುಭಾವಯೋಗಿಗಳೂ ಅಹುದು. ಚೆನ್ನಬಸವಣ್ಣನವರಂತೆ ಜ್ಞಾನಯೋಗಿಗಳೂ ಅಹುದು. ಸಿದ್ಧರಾಮನಂತೆ ಕರ್ಮ-ಯೋಗಿಗಳೂ ಅಹುದು. ಜೊತೆಗೆ ಬಸವಣ್ಣನವರಂತೆ ಭಕ್ತಿಯೋಗಿಗಳೂ ಆಗಿದ್ದರು. ಅವರ ವ್ಯಕ್ತಿತ್ವದ ವ್ಯಾಖ್ಯೆ ಇಷ್ಟಕ್ಕೆ ಮುಗಿಯಲಿಲ್ಲ. ಅಲ್ಲಿ ಕರುಣೆಯ ಸಾಗರವಿದೆ. ಸಿದ್ಧಿಯ ಸೂರೆ ಇದೆ. ಅನುಗ್ರಹದ ಆಸರೆಯಿದೆ. ಜೊತೆಗೆ ಸತ್ಯನಿಷ್ಠತೆಯ ನಿಷ್ಠುರತೆಯಿದೆ." ಎಂದು ಮುಂತಾಗಿ ಹೇಳಿ ಆ ಮಹಾಯೋಗಿಯ ಮಹಾಮಹಿಮೆಯನ್ನು ವಿವರಿಸಿ ಪೂತಾತ್ಮರಾಗಿದ್ದಾರೆ, ಕೃತಾರ್ಥರಾಗಿದ್ದಾರೆ, ಜನ್ಮಸಾರ್ಥಕ ಮಾಡಿಕೊಂಡಿದ್ದಾರೆ. ಹನ್ನೆರಡಮಠದಿಂದ ಇಂತಹ ಆಧ್ಯಾತ್ಮಿಕ ಗ್ರಂಥಗಳು ಹೊರಬಂದು ಜನರಿಗೆ ಮಾರ್ಗದರ್ಶನ ನೀಡಲಿ. ಅವರ ಕಾವ್ಯಶಕ್ತಿಯ ತರುಲತೆಗಳು ಹೂಬಿಟ್ಟು ಸುಗಂಧ ಬೀರುವಂತೆ ಬೆಳೆಯುತ್ತಿರಲಿ. ವಿಜಯ ಮಹಾಂತೇಶನು ಅವರಿಗೆ ಅನುಗ್ರಹಿಸಲಿ. ಹಾಗೂ ಸಮಸ್ತ ಸದ್ಭಕ್ತರಿಗೆ ಸದ್ಬುದ್ಧಿ ಸನ್ಮಂಗಳನ್ನಿತ್ತು ಸಂರಕ್ಷಿಸಲೆಂದು ಹಾರೈಸೋಣವಾಗಿದೆ.

ತಾ. ೨೯-೧೧-೮೧ — ಇತಿ ಶಿವಮ್

ರವಿವಾರ

# ನನ್ನ ನುಡಿ

೩೦, ಎಪ್ರಿಲ ೧೯೭೭ರ ಸಂಜೆ! ಇಲಕಲ್ಲಿನ ಶ್ರೀ ವಿಜಯ ಮಹಾಂತ ಶಿವಯೋಗಿಗಳ ಪವಿತ್ರ ಗದ್ದುಗೆಯ ಸ್ಥಾನ!! ಎಲ್ಲೆಡೆಗೂ ಶಾಂತಿ.... ಸೌಂದರ್ಯ....ಮಂದಮಾರುತ....ಪಕ್ಷಿಗಳ ಕೂಜನ....ಆಕಾಶದ ಹೊಂಬಣ್ಣ.... ನದೀ ಸಂಗಮದ ಮಳಲರಾಶಿಯ ಕಾಂತಿ....ನೀರ ಉಯ್ಯಾಲೆಯ ಮೋಹ ಕತೆ....ತೆಂಗು-ಬಾಳೆಗಳ ಮುತ್ತೈದೆತನ....ಆಗಸದ ಮಹಾಶೂನ್ಯಕ್ಕೆ ಕೈಚಾಚಿದ ಗೋಪುರ ಕಳಸ....!!! ಆಗ ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಮಹಾ ಪೀಠದ ತೇಜೋಮೂರ್ತಿಗಳಾದ ಪೂಜ್ಯ ಮಹಾಂತಸ್ವಾಮಿಗಳು ಬೆತ್ತವನ್ನು ಊರುತ್ತ, ಭಸ್ಮ-ರುದ್ರಾಕ್ಷಿ-ಕಾವಿಯಉಡುಗರೆಯ ಚಿತ್ತಾಕರ್ಷಕ ವೈಖರಿಯಲ್ಲಿ ನನ್ನೆಡೆಗೇ ನಡೆದುಬಂದರು. ನಾನು ವಂದಿಸಿದೆ. ಆಗ ನಾನು ಮೌನವ್ರತ ಆರಂಭಿಸಿ ಒಂದುವರೆ ತಿಂಗಳಾಗಿತ್ತು. ಇನ್ನೂ ಒಂದೂವರೆ ತಿಂಗಳು ಬಾಕಿ ಉಳಿದಿತ್ತು. ಮಹಾಸ್ವಾಮಿಗಳು ಯಾವ ಪೂರ್ವ ಸೂಚನೆಯೂ ಇಲ್ಲದೇ ನೇರವಾಗಿ ನನಗೆ ಅಪ್ಪಣೆ ನೀಡಿದರು— "ಹನ್ನೆರಡಮಠರೇ, ವಿಜಯ ಮಹಾಂತ ಶಿವಯೋಗಿ ತನ್ನ ಚರಿತ್ರೆಯನ್ನು ನಿಮ್ಮ ಕೈಯಿಂದಲೇ ಬರಸಿ ಕೊಳ್ಳಬೇಕೆಂದು ಇಚ್ಛೆಪಟ್ಟಿದ್ದಾನೆ. ಆತನ ಸಂಕಲ್ಪವನ್ನು ನಿಮಗೆ ಹೇಳ ಬೇಕೆಂದು ಐದಾರು ದಿನಗಳಿಂದ ಪ್ರಯತ್ನಿಸುತ್ತಿದ್ದೇನೆ. ಇಂದು ಸಾಧ್ಯವಾ ಯಿತು. ನೀವು ಮೌನವ್ರತ ಕೈಕೊಂಡದ್ದೇ ಈ ಕಾರ್ಯಕ್ಕೆಂದು ತಿಳಿಯಿರಿ. ನಾಳೆಯೇ ಚರಿತ್ರೆ ಶುಭಾರಂಭವಾಗಲಿ."

ಎಂಥ ವಿಚಿತ್ರ ಇದು! ನನಗೆ ಏನೊಂದೂ ಪೂರ್ವಸೂಚನೆ ಇಲ್ಲದೇ ಬಂದ ಅಪ್ಪಣೆ, ಆಕಾಶವೇ ತಲೆಯ ಮೇಲೆ ಹರಿದುಬಿದ್ದಂತೆ ಅಪ್ಪಳಿಸಿತು. ನಾನು ತಾಳಬಲ್ಲೆನೇ? ಬೆಂಕಿಯ ಕೆಂಡದಂತಿರುವ ಆ ಶಿವಯೋಗಿಯ ಅಗಾಧ ಜೀವನವನ್ನು ಹೇಳಬಲ್ಲೆನೇ? ನಾನಾರು? ಅವನಾರು? .... ಗೊಂದಲದಲ್ಲಿ ಬಿದ್ದೆ. ಆದರೆ ಅಪ್ಪಣೆ ಅಪ್ಪಣೆಯೇ ಅಲ್ಲವೇ? .... ನಾನು ಅಂದೇ ರಾತ್ರಿ ಚರಿತ್ರೆಯ ಚೌಕಟ್ಟನ್ನು ಮನದಲ್ಲಿ ಊಹಿಸಿಕೊಂಡೆ.... ಮಹಾಶಿವಯೋಗಿಯ ಅಮರಜೀವನದ ಮಹಾಸಂತರ್ಪಣೆಗಾಗಿ ಮನದಲ್ಲೇ ಒಗ್ಗರಣೆಯನ್ನು ಹಾಕಿ ಕೊಂಡೆ. ಈ ಗ್ರಂಥದ ಪೀಠಿಕಾಭಾಗದಲ್ಲಿ ಬರುವ 'ಕೂಗಿತು ಶಿವಯೋಗ

ಮಂದಿರ' ಅಂದೇ ಕಲ್ಪನೆಯ ಆಗಸದಲ್ಲಿ ಭಾವಪೂರ್ಣವಾಗಿ ಅರಳಿತು. ಮರುದಿನವೇ .... ಅಂದರೆ ದಿನಾಂಕ ೧, ಮೇ ೭೧ ... ಗ್ರಂಥದ ಮೊದಲ ಮಂದಹಾಸವಾಗಿ 'ಕೂಗಿತು ಶಿವಯೋಗಮಂದಿರ' ಕೃತಿ ರಚನೆಗೆ ಇಳಿದು ಬಂದಿತು! ಅದರೊಂದಿಗೆ ಮಹಾಸಂಕಲ್ಪವೂ ಮಹಾಚೈತನ್ಯವೂ ಓತಪ್ರೋತ ವಾಗಿ ಇಳಿದುಬಂದವು!! 'ನಾನು ಬರೆಯಲು ಅಸಮರ್ಥ' ಎಂಬ ಸಂಶಯ ನಿವಾರಣೆಯಾಯಿತು; ಯಾಕೆಂದರೆ ಬರೆವವನೇ ನಾನಲ್ಲ.... ಅವನು.... ಅವನು.... 'ಆವನೇ!' .... ಅಲ್ಲವೇ?

ಆಶ್ಚರ್ಯದ ಸಂಗತಿಯೆಂದರೆ ಮೇ-೧ ರಂದು ಆರಂಭವಾದ ಗ್ರಂಥ ರಚನೆ ಮೇ-೩೦ಕ್ಕೆ ಸಮಗ್ರವಾಗಿ ಸಂಪೂರ್ಣವಾಯಿತು. ಆ ಮೂವತ್ತು ದಿನ ಗಳೆಂದರೆ ನಿದ್ರೆಯಲ್ಲೂ ನಾನು ಗ್ರಂಥರಚನೆ ಮಾಡುತ್ತಿದ್ದ ಕಾಲ! ಒಮ್ಮೊಮ್ಮೆ ಕನಸಿನಲ್ಲಿ ಕಂಡ ಚಲವನ್ನು ಎಚ್ಚತ್ತು ಮೇಲೆ ಗ್ರಂಥರೂಪದಲ್ಲಿ ಇಳಿಸುತ್ತಿದ್ದೆ. ಉಸಿರಾಡಿಸಲೂ ಬಿಡುವಿರಲಿಲ್ಲ. ವಿಜಯಮಹಾಂತಶಿವಯೋಗಿ ಚಿರವಿಶ್ರಾಂತ ವಾದ ಆ ಸುಂದರ ಪರಿಸರದ ಮಹಾಮೌನ, ಮಂದಮಾರುತ, ಪ್ರಕೃತಿಯ ಚಲುವು, ಹಕ್ಕಿಗಳ ಇಂಚರ, ತೆಂಗು-ಬಾಳೆಗಳ ತೂಗುಯ್ಯಾಲೆ, ಕಾಲುವೆಯ ನೀರಿನ ಮಂಜುಳ ನಾದ, ಆಗಾಗ ನಿಶ್ಯಬ್ದವನ್ನು ಭೇದಿಸುವ ಘಂಟಾನಾದ, ಹಿರಿಯಹಳ್ಳ-ಎರಿಯಹಳ್ಳಗಳೆಂಬ ಸೋದರಿಯರ ಒಡನಾಟ, ನಡುರಾತ್ರಿಯ ನಕ್ಷತ್ರಗಳು, ಮುಗಿಲ ಮಂದವಾಸ, ಬೆಳ್ದಿಂಗಳ ಜೇನತೊರೆ ಇವೆಲ್ಲವೂ ನನ್ನ ಗ್ರಂಥ ರಚನೆಗೆ ಸಹಾಯಕವಾಗಿ ನಿಂತವು.

ಗ್ರಂಥ ರಚನೆ ಮುಗಿಯಿತು. ಪೂಜ್ಯ ಮಹಾಂತಸ್ವಾಮಿಗಳು ಹಾಲು ಉಕ್ಕಿದಂತೆ ಉಕ್ಕಿದರು. ಹಿಗ್ಗುತ್ತ ಹೇಳಿದರು — "ಹನ್ನೆರಡಮಠರೇ — ಹೆಣ್ಣುಮಕ್ಕಳು ಹಡೆಯಬೇಕಾದರೆ ಒಂಭತ್ತು ತಿಂಗಳು ಬೇಕಾಗುತ್ತದೆ. ಆದರೆ ನೀವು ಮೂರು ತಿಂಗಳ ಮೌನದಲ್ಲಿ ವಿಜಯ ಮಹಾಂತೇಶನನ್ನೇ ಹಡೆದಿರಿ." ಪೂಜ್ಯ ಸ್ವಾಮಿಗಳು ನನ್ನ ಮೇಲಿನ ಅಪಾರ ಅಕ್ಕರತೆಯಿಂದ ವರ್ಣಿಸಿದ ಈ ವಾಕ್ಯವನ್ನು ಅವರ ಪಾದಕ್ಕೇ ಅರ್ಪಿಸಿದ್ದೇನೆ. ನಾನೊಂದು ಅರಗಿಳಿ....ಅವರು ನುಡಿಯೆಂದರು....ನುಡಿದೆ....ಅಷ್ಟೇ !

ಈ ಗ್ರಂಥ ರಚನೆಗೆ ಇಂದಿಗೆ ೩೦ ವರ್ಷಗಳ ಹಿಂದೆ ವಾರ್ಧಿಕ ಷಟ್ಪದಿ ಯಲ್ಲಿ ವಿರಚಿತವಾದ, ಶ್ರೀ ಚನ್ನಕವಿಗಳ 'ಶ್ರೀ ವಿಜಯ ಮಹಾಂತೇಶ್ವರ ಪುರಾಣ' ನೇರವಾದ ಆಕರ. ಇದಲ್ಲದೇ ಅಲ್ಲಲ್ಲಿ ಹಲವರು ಅನುಭವಿಗಳಿಂದ

ನಾನು ಎಂಟು ವರ್ಷಗಳಿಂದ ವೈಯುಕ್ತಿಕವಾಗಿ ಶೇಖರಿಸಿದ್ದ ಜ್ಞಾನ ಬಂಡವಾಲನ್ನು ಬಳಸಿಕೊಂಡಿದ್ದೇನೆ. ವಿಜಯ ಮಹಾಂತೇಶ್ವರರನ್ನು ನೇರವಾಗಿ ಕಂಡು ಸೇವೆ ಸಲ್ಲಿಸಿದ ಹಾಗೂ ಅವರ ಅಂತ್ಯಯಾತ್ರೆಯಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸಿದ್ದ ಹುನಗುಂದದ ಕಾಯಕಯೋಗಿ ಶ್ರೀ ಮಠ ಮಾಸ್ತರರಿಂದ ಮಾಹಿತಿಯನ್ನು ಕೂಡಿಸಿಕೊಂಡಿದ್ದೇನೆ. ಇಲ್ಲಿ ಬರುವ ಅಂತ್ಯಯಾತ್ರೆಯ ವರ್ಣನೆಯ ಚಿತ್ತರಕ್ಕೆ ಆಧಾರ ಸಾಮಗ್ರಿಯೆಂದರೆ ಶ್ರೀ ಮಠ ಮಾಸ್ತರರ ನೆನಪಿನ ಪುಟ್ಟಿಯೇ ಆಗಿದೆ. ಇದಲ್ಲದೆ ಶ್ರೀವಿಜಯಮಹಾಂತಶಿವಯೋಗಿಗಳು ಚಿತ್ತರಗಿ ಪೀಠಾರೋಹಣ ಮಾಡಿದ ಮೇಲೆ ಬಾಳಿದ ಸಮಗ್ರ ೩೦ ವರ್ಷಗಳ ಅಖಂಡ ಬಾಳನ್ನೂ, ಗೈದ ಅಸಂಖ್ಯ ಪವಾಡಗಳನ್ನೂ ಕಣ್ಣಾರೆ ಕಂಡ, ಚಿತ್ತರಗಿಯ ೧೦೫ ವರ್ಷಗಳ ವೃದ್ಧನೋರ್ವನಿಂದ ಚರಿತ್ರೆಯ ನೈಜತೆಯನ್ನು ಪುನಃ ಪರಿಶೀಲನೆ ಮಾಡಿಕೊಂಡಿದ್ದೇನೆ. ಹಾಗೂ ಶ್ರೀ ಕಲ್ಲೂರ ಸಂಗಣ್ಣನವರು ಬರೆದ ಚಿತ್ತರಗಿ ಮಠದ 'ಪರಿಚಯ ಪಂಚಾರತಿ' ಲೇಖನವನ್ನು ಪಟ್ಟಪ್ರಧಾನೋತ್ಸವದ ಹಿನ್ನೆಲೆಯಲ್ಲಿ ಆಧಾರವಾಗಿ ಬಳಸಿಕೊಂಡಿದ್ದೇನೆ. ಇನ್ನು ಶಿವಯೋಗ ಮಂದಿರದ ಸ್ಥಾಪನೆಯ ಸ್ಪಷ್ಟ ಸತ್ಯಚಿತ್ರಣವನ್ನು ಸಂಪೂರ್ಣವಾಗಿ ನೀಡಲು ಪ್ರಯತ್ನಿಸಿದ್ದೇನೆ. ನನ್ನ ಪ್ರಯತ್ನ ಸತ್ಯವೆಂದು ಬಲ್ಲವರು ಒಪ್ಪಿದರೆ ನನಗದೇ ಬಹುಮಾನ. ಈ ಸಂದರ್ಭಕ್ಕೆ 'ಶ್ರೀ ಶಿವಯೋಗ ಮಂದಿರದ ಬೆಳಗು' ಗ್ರಂಥದಲ್ಲಿ ಪ್ರಕಟವಾದ ಶ್ರೀ ಗುರುಮೂರ್ತಿ ಶಾಸ್ತ್ರಿಗಳು ಕಜ್ಜರಿ ಇವರ ಲೇಖನವನ್ನು ಪ್ರಮಾಣವಾಗಿ ಬಳಸಿಕೊಂಡಿದ್ದೇನೆ. ನಾನು ಗ್ರಂಥ ರಚನೆ ಮಾಡುತ್ತಿದ್ದಾಗ, ಹುಬ್ಬಳ್ಳಿ ಮೂರುಸಾವಿರ ಮಠದ ಪೂಜ್ಯ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ನನ್ನ ಅನುಷ್ಠಾನ ಕೋಣೆಗೆ ದಯಮಾಡಿಸಿ ಆಶೀರ್ವದಿಸಿದರು. ಶ್ರೀ ವಿಜಯ ಮಹಾಂತ ಶಿವಯೋಗಿಗಳ ಬಗೆಗೆ ತಮ್ಮ ಅಮೌಲ್ಯ ವಿಚಾರಗಳನ್ನು ಅರುಹಿದರು. ಇದಲ್ಲದೆ ಧಾರವಾಡ ಶ್ರೀ ಮುರುಘಾಮಠದ ಶ್ರೀ ನಿ. ಪ್ರ. ಮಹಾಂತ ಅಪ್ಪಗಳೂ, ಹಾವೇರಿ ಶ್ರೀ ಹುಕ್ಕೇರಿ ಮಠದ ಶ್ರೀ ನಿ. ಪ್ರ. ಶಿವಲಿಂಗ ಸ್ವಾಮಿಗಳೂ, ನನ್ನ ಗ್ರಂಥ ರಚನೆಯಕಾಲಕ್ಕೆ ಕೋಣೆಗೆ ದಯಮಾಡಿಸಿ ಆಶೀರ್ವದಿಸಿದರು. ಚಿತ್ತರಗಿಪೀಠದ ಚರವರೇಣ್ಯರಾದ ಪೂಜ್ಯ ಮಹಾಂತ ಸ್ವಾಮಿಗಳಂತೂ ವಾರಕ್ಕೆ ನಾಲ್ಕೈದು ಬಾರಿ ಬಂದು ನನಗೆ ಹೊಸ ಹೊಸ ಮಾಹಿತಿಗಳನ್ನು ಒದಗಿಸುತ್ತಿದ್ದರು. ಹೀಗೆ ಪ್ರತ್ಯಕ್ಷವಾಗಿ ಆಧಾರಸಾಮಗ್ರಿಯನ್ನೂ ಆಶೀರ್ವಾದವನ್ನೂ ಕರುಣಿಸಿದ ಎಲ್ಲ ಸ್ವಾಮಿಗಳಿಗೆ, ಹಿರಿಯರಿಗೆ ಪೂಜ್ಯರಿಗೆ ನನ್ನ ಸಹಸ್ರಧನ್ಯವಾದಗಳು ಮೀಸಲು.

ಗ್ರಂಥರಚನೆ ಮುಗಿಯಿತು. ಮೂರು ತಿಂಗಳವ ಮೌನ ಈ ರೀತಿ ನನ ಗರಿಯದ ಸಾಫಲ್ಯವನ್ನು ಕರುಣಿಸಿತು. ನನ್ನ ಕಾರ್ಯವನ್ನು ಮೆಚ್ಚಿಕೊಂಡು ಇಲಕಲ್ಲಿನ ಮಹಾ ಧರ್ಮಪ್ರೇಮಿಗಳೂ ವಿಜಯ ಮಹಾಂತ ಶಿವಯೋಗಿಯ ಕರುಣೆಯ ಕಂದರೂ ಆದ ಶ್ರೀ ಚೋಳಪ್ಪನವರು ಸೂಡಿ ಹಾಗೂ ಶ್ರೀ ಗವಿ ಸಿದ್ದಪ್ಪನವರು ಪಟ್ಟಣಶೆಟ್ಟಿ ಅವರು ನನಗೆ ಪ್ರತ್ಯೇಕವಾಗಿ ಸತ್ಕಾರವನ್ನು ಏರ್ಪಡಿಸಿ, ಧಾರಾಳವಾಗಿ ಕಾಣಿಕೆಯನ್ನು ಸಲ್ಲಿಸಿದರು. ಆದರೆ ನಾನು ಲಿಪಿ ಕಾರ ಮಾತ್ರ! ಆದ್ದರಿಂದ ಅವರು ಸಲ್ಲಿಸಿದ ಆ ಭಕ್ತಿ ಕಾಣಿಕೆಯನ್ನು ಶ್ರೀವಿಜಯ ಮಹಾಂತ ಶಿವಯೋಗಿಯೇ ಪಾದತಲಕ್ಕೇ ಅರ್ಪಿಸಿ ಅವರ ಬಾಳು ಚಿನ್ನವಾಗಲೆಂದು ಪ್ರಾರ್ಥಿಸುತ್ತೇನೆ.

ನಂತರ ಗ್ರಂಥ ಮುದ್ರಣಕ್ಕೆ ದುಡ್ಡು ಬೇಡವೆ? ಅದೂ ವಿಚಿತ್ರವೇ! ಪೂಜ್ಯ ಮಹಾಂತ ಸ್ವಾಮಿಗಳು ನನ್ನನ್ನು ಕರೆದುಕೊಂಡು ಚಿತ್ತರಗಿಗೆ ದಯ ಮಾಡಿಸಿದರು. ಗ್ರಂಥ ಮುದ್ರಣಕ್ಕೆ ಭಕ್ತರಿಂದ ೨॥ ಸಾವಿರ ರೂಪಾಯಿ ಕೊಡಿದರೆ ನಾವು ಧನ್ಯರೆಂದು ತಿಳಿದು ಅಲ್ಲಿಗೆ ಹೋದೆವು. ಅಲ್ಲಿಯ ಸದ್ಭಕ್ತರ ನ್ನೆಲ್ಲ ಕರೆಯಿಸಿ ನನ್ನಿಂದ ಗ್ರಂಥದ ಕೆಲವು ಮಹತ್ವದ ಭಾಗಗಳನ್ನು ಸ್ವಾಮಿ ಗಳು ಓದಿಸಿದರು. ಆಗ ಕೇವಲ ಎರಡು ತಾಸಿನಲ್ಲಿ ಐದೂವರೆ ಸಾವಿರ ರೂಪಾಯಿ ನಗದು ಕೂಡಿತು! ಇದು ಶ್ರೀವಿಜಯ ಮಹಾಂತ ಶಿವಯೋಗಿಯ ಲೀಲೆಯಲ್ಲದೇ ಇನ್ನೇನು!! ಆ ಮಹಾತ್ಮ ಇದ್ದಾಗಲೂ ಪವಾಡ ಮೆರೆದ, ಲಿಂಗೈಕ್ಯವಾಗಿ ಅರುವತ್ತು ವರ್ಷಗಳ ತರುವಾಯವೂ ಪವಾಡ ಮೆರೆದ!!!

ಈ ಗ್ರಂಥವನ್ನು ಭಕ್ತಿಯಿಂದ ಓದಿದವರಿಗೆಲ್ಲ ನಿಶ್ಚಿತವಾಗಿಯೂ ಕಷ್ಟ ನಷ್ಟಗಳು ದೂರವಾಗಿ, ಅದ್ಭುತವಾದ ವರಪ್ರಸಾದಗಳು ದೊರೆಯುವಲ್ಲಿ ಸಂಶಯವಿಲ್ಲ!

ಈ ಗ್ರಂಥದಲ್ಲಿರದ ಹೆಚ್ಚಿನ ಮಾಹಿತಿಯನ್ನೂ ಆಧಾರ ಸಾಮಗ್ರಿ ಯನ್ನೂ ಯಾರಾದರೂ ಒದಗಿಸಿದರೆ ಅದನ್ನು ಎರಡನೇ ಮುದ್ರಣದಲ್ಲಿ ಬಳಸಿಕೊಳ್ಳುತ್ತೇನೆ.

ಇಲಕಲ್ಲ — ಜಿ. ಎಚ್. ಹನ್ನೆರಡುಮಠ

ದಿ. ೨೪-೧೯-೧೯೭೧

(ಶ್ರೀ ವಿಜಯ ಮಹಾಂತ ಶಿವಯೋಗಿಯ

೬೦ನೇ ವರ್ಷದ ಪುಣ್ಯತಿಥಿ)



ಮಹಾತಪಸ್ವಿ ಲಿಂ. ಶ್ರೀ ನಿ. ಪ್ರ. ವಿಜಯಮಹಾಂತ ಶಿವಯೋಗಿಗಳು
ಚಿತ್ತರಗಿ ಸಂಸ್ಥಾನಮಠ, ಇಲಕಲ್ಲ.

# ಎರಡನೆಯ ಮುದ್ರಣಕ್ಕೆ....

''ಚಿತ್ತರಗಿ ಚಿಜ್ಜ್ಯೋತಿ''ಯ ಮೊದಲನೆಯ ಆವೃತ್ತಿಯ ೨೦೦೦ ಪ್ರತಿಗಳು ಪೂರೈಸಿದ ನಂತರ, ಪ್ರಸ್ತುತ ಈ ಪವಿತ್ರಕೃತಿಯು ಪುನರ್ಮುದ್ರಣ ಗೊಳ್ಳುತ್ತಲಿರುವದು ಮಹತ್ವದ ಸಂಗತಿಯಾಗಿದೆ.

ಈ ಕೃತಿ ''ಮಹಾತಪಸ್ವಿ''ಯಾಗಿ ಕನ್ನಡ ಚಲನಚಿತ್ರ ಪ್ರಪಂಚದಲ್ಲಿ ಪ್ರವೇಶಿಸಿದ ಮೇಲೆ ಓದುಗರ ಬೇಡಿಕೆ ಒಂದಕ್ಕೆ ಹತ್ತಾಯಿತು. ಇಲಕಲ್ಲಿನ ಹಿರಿಯ ಶಿವಾನುಭಾವಿ ಸದ್ಗೃಹಸ್ಥರಾದ ಶ್ರೀ ಚೋಳಪ್ಪನವರು ಸೂಡಿ ಈ ಗ್ರಂಥದ ದ್ವಿತೀಯ ಮುದ್ರಣಕ್ಕೆ ಅವಕಾಶ ನೀಡಿದರು. ಅವರಿಗೆ ನನ್ನ ಅನಂತ ಧನ್ಯವಾದಗಳು.

ಈವರೆಗೆ ಪತ್ರಮುಖವಾಗಿ ಹಾಗೂ ಸಮ್ಮುಖದಲ್ಲಿ ಸಾವಿರಾರು ಜನರು ಈ ಗ್ರಂಥದ ಬಗ್ಗೆ ತಮ್ಮ ಅಗ್ಗಳಿಕೆಯನ್ನು ಹೇಳಿದ್ದಾರೆ. ಅವರೆಲ್ಲ ರಿಗೂ ನನ್ನ ಅನಂತ ಕೃತಜ್ಞತೆಗಳು.

ಬೆಂಗಳೂರಿನ ಶ್ರೀ ಸಿ. ವಿ. ಶಿವಶಂಕರ ಅವರು "ತಿಪಟೂರ ಫಿಲಂಸ್" ಲಾಂಛನದಲ್ಲಿ ಈ ಕೃತಿಯನ್ನು ಚಿತ್ರೀಕರಿಸಿಕೊಂಡುದಕ್ಕಾಗಿ ಅವರಿಗೆ ನನ್ನ ಧನ್ಯವಾದಗಳು. ಚಿತ್ರ ಸಂಭಾಷಣೆಯನ್ನು ನಾನೇ ಬರೆದುದರಿಂದ ಅಲ್ಲಿ ಸ್ವಲ್ಪ ಕಥಾವ್ಯತ್ಯಾಸಗಳನ್ನು ಸಿನಿಮಾ ತಂತ್ರ ಶೈಲಿಗಳ ಉದ್ದೇಶದಿಂದ ಮಾಡಿದ್ದೇನೆ. "ಮಹಾತಪಸ್ವಿ" ನಾಟಕವನ್ನೂ ಬರೆದಿದ್ದೇನೆ. ಅದು ಪ್ರಕಟವಾದರೆ ಅದರಲ್ಲಿಯ ನನ್ನ ಕೂಲಂಕಶವಾದ ಸಂವಾದಗಳ ದೃಶ್ಯ ಸಂಯೋಜನೆಗಳ ವಿವರವನ್ನು ಮನಗಾಣಬಹುದು.

ಎರಡನೆಯ ಮುದ್ರಣದ ಕಾಲಕ್ಕೆ ಒಂದು ಮಾತು ಮರೆಯಲು ಸಾಧ್ಯವೇ ಇಲ್ಲ. ಇಲಕಲ್ಲಿನ ಪೂಜ್ಯ ಶ್ರೀ ನಿ. ಪ್ರ. ಮಹಾಂತಸ್ವಾಮಿಗಳವರು ೨೦-೧೧-೧೯೭೨ : 'ಗೌರಿ ಹುಣ್ಣಿಮೆ'ಯಂದು ಚಿತ್ತರಗಿಯಲ್ಲಿ 'ಚಿತ್ತರಗಿ ಚಿಜ್ಜ್ಯೋತಿ' ಗ್ರಂಥವನ್ನು ಅಡ್ಡಪಕ್ಕಿಯಲ್ಲಿ ಊರತುಂಬ ಮೆರೆಸಿದರು. (ನನ್ನನ್ನೂ ಮೆರೆಸಿದರು !) ಸನ್ಮಾನ ಪತ್ರದೊಂದಿಗೆ ಕೈತುಂಬ ಹಣ ನೀಡಿ ಸತ್ಕರಿಸಿದರು. ಅವರ ಪಾದಕೃಪೆಯನ್ನು ನಾನೆಂತು ಮರೆಯಲಿ ?

"ಶಾಂತಿನಿವಾಸ" ಇಲಕಲ್ಲ
೧೮-೧೦-೧೯೭೬

—ಪ್ರೊ. ಜಿ. ಎಚ್. ಹನ್ನೆರಡಮಠ

# ದಾಸೋಹ ನಿಧಿ

## ಸೌ. ಲಿಂಗಮ್ಮನವರು ಚೋಳಪ್ಪನವರು ಸೂಡಿ

ವಿಜಯಮಹಾಂತ ಶಿವಯೋಗಿಗಳ ಉಜ್ವಲ ತಪೋವನದ ಶ್ರೀಸನ್ನಿಧಿಯ ಕೃಪೆಯಿಂದ ವಿಜಾಪುರ–ರಾಯಚೂರ–ಧಾರವಾಡ ಜಿಲ್ಲೆಗಳಲ್ಲಿ ನೂರಾರು ಕುಟುಂಬಗಳು ಶಿವಾನುಭವದ ದಾಸೋಹಮಂದಿರಗಳಾದವೆಂಬುದಕ್ಕೆ ಇಲಕಲ್ಲಿನ ಸದ್ಗೃಹಸ್ಥರಾಗಿದ್ದ ಲಿಂ. ಮಹಾಂತಪ್ಪನವರು ಸೂಡಿ ಅವರ ಮನೆತನವೆ ಸಾಕ್ಷಿ. 'ಸದುವಿನಯವೆ ಸದಾಶಿವನ ಒಲುಮೆಯಯ್ಯಾ!' ಎಂಬ ಅಣ್ಣ ಬಸವಣ್ಣನವರ ಸಂಸ್ಕೃತಿಯ ಸಂದೇಶ ಈ ಮನೆತನಕ್ಕೆ ಒಪ್ಪಿ ನಿಲ್ಲುತ್ತದೆ. ದಾನ–ದಯೆ–ಜಂಗಮ ಪ್ರೇಮ–ಲಿಂಗಾರ್ಚನೆ–ಸಮಾಜಸೇವೆ–ಸತ್ಯ ಶುದ್ಧ ಕಾಯಕಗಳು ಮಾನ್ಯ ಶ್ರೀ ಚೋಳಪ್ಪನವರು ಮಹಾಂತಪ್ಪನವರು ಸೂಡಿ ಅವರ ಜೀವನದ ಉಸಿರೇ ನಿಜ. ಅವರು ಸಹಜ ಶಿವಾನುಭವಿಗಳು. ಗುಪ್ತ ಭಕ್ತರು. ಸದಾಚಾರ ಸಂಪನ್ನತೆ ಅವರ ಇನ್ನೊಂದು ಹೆಸರು. ಮಗುವಿನಂತೆ ಮೃದು ಹೃದಯ. ಆದರೆ ಮನದಲ್ಲಿ ಅನ್ಯಾಯ ಅನೀತಿಗಳಿಗೆ ತಿಲಮಾತ್ರವೂ ಒಗ್ಗದ ಒಲಿಯದ ಭೀಮಸಂಕಲ್ಪ. ಇಂಥ ವ್ಯಕ್ತಿತ್ವವನ್ನು ಪಡೆದವರು ಎಷ್ಟು ಜನ ?

ಇಂದಿಗೆ ಇಪ್ಪತ್ತು ವರ್ಷಗಳ ಕೆಳಗೆ ಇವರ ಸ್ವತಂತ್ರವಾದ ಜೀವನಾರಂಭ ಮಾಡಿದಾಗ ಕೈಯಲ್ಲಿ ಕಾಸಿರದ ದುಸ್ಥಿತಿ. ಆದರೂ ಪೂಜ್ಯ ವಿಜಯ ಮಹಾಂತೇಶನ ಪಾದಸ್ಮರಣೆಯಲ್ಲಿ ಚಿಕ್ಕ ಪ್ರಮಾಣದಿಂದ ವ್ಯಾಪಾರ ಕ್ಷೇತ್ರ ಪ್ರವೇಶಿಸಿದರು. ಉರುಟು ಕೈಮಗ್ಗದ ಸೀರೆಗಳ ಮಾರಾಟ ಪ್ರಾರಂಭಿಸಿದರು. ಇವರ ಸತ್ಯಶುದ್ಧ ಕಾಯಕಕ್ಕೆ ಲಕ್ಷ್ಮಿ ಒಲಿದು ಬಂದಳು. ಎರಡು ದಶಕಗಳಲ್ಲಿ ಬೆಲೆಬಾಳುವ ಶೀರೆಗಳ ಭಾರೀ ವ್ಯಾಪಾರಿಗಳಾದರು. ಠೋಕ ವ ಕಿರುಕುಳ ಅಂಗಡಿಗಳನ್ನು ತೆಗೆದರು. ಇವರ ಹಸ್ತ ಸಿದ್ಧಹಸ್ತವಾಯಿತು.

ಎಲೆಮರೆಯ ಹೂವಿನಂತೆ ಇವರ ಸಮಾಜ ಸೇವೆ. ಇವರು ನೀಡಿದ





ಈ ಗ್ರಂಥದ ಎರಡನೆಯ ಮುದ್ರಣದ ವೆಚ್ಚವನ್ನು ನಿರ್ವಹಿಸಿದ
ದಾನಿಗಳಾದ ಶ್ರೀ ಚೋಳಪ್ಪನವರು ಹಾಗೂ
ಅವರ ಧರ್ಮಪತ್ನಿ ಸೌ. ಲಿಂಗಮ್ಮನವರು ಸೂಡಿ, ಇಲಕಲ್ಲ.

ದಾನಗಳಿಗೆ ಲೆಕ್ಕವಿಲ್ಲ. ಮಠಕ್ಕೆ ಕೊಟ್ಟ ಕೊಡುಗೆಗಳಿಗೆ ಪಾರವಿಲ್ಲ. ಮಠಕ್ಕೆ ಕೊಟ್ಟ ಕೊಡುಗೆಗಳಿಗೆ ಪಾರವಿಲ್ಲ. ಯಾವುದಕ್ಕೂ 'ನಾನು ಕೊಟ್ಟಿದ್ದೇನೆ' ಎಂದು ಢಾಣಾಢಂಗುರವಾಗಿ ಎಲ್ಲಿಯೂ ಹೇಳಿಕೊಳ್ಳಲಿಲ್ಲ. ಇಲಕಲ್ಲಿನ ಶ್ರೀ ವಿಜಯ ಮಹಾಂತೇಶ್ವರ ಆರ್ಟ್ಸ ಮತ್ತು ಸಾಯನ್ಸ ಕಾಲೇಜಿಗೆ ಒಟ್ಟು ಹತ್ತು ಸಾವಿರ ರೂಪಾಯಿಗಳನ್ನು ಕುಟುಂಬದವರೊಂದಿಗೆ ಕೂಡಿ ಕೊಟ್ಟಿದ್ದಾರೆ. ಕಾಲೇಜಿನ ಆಡಳಿತ ಸದಸ್ಯರಾಗಿದ್ದು ಅದರ ಏಳ್ಗೆಗೆ ಕಾರಣೀಭೂತರಾಗಿದ್ದಾರೆ. ವೀರಶೈವ ಸಜ್ಜನ ಸಮಾಜದ ಕಾರ್ಯದರ್ಶಿಗಳಾಗಿದ್ದಾರೆ. ಜೊತೆಗೆ ಇಲಕಲ್ಲ ಮಠದ ಹಿರಿಯ ಪ್ರೋತ್ಸಾಹಕರಾಗಿದ್ದಾರೆ.

ನಾಲತವಾಡದ ಶ್ರೀ ಈಶ್ವರಪ್ಪನವರು ಕುಂಟೋಜಿ ಅವರ ಮಕ್ಕಳಾದ ಸೌ. ಲಿಂಗಮ್ಮನವರು ಚೋಳಪ್ಪನವರ ಆದರ್ಶ ಕುಟುಂಬ. ದಂಪತಿಗಳಿಬ್ಬರೂ ದೀಕ್ಷೆ ಹೊಂದಿದ್ದು ಮಠದ ದಾಸೋಹಕ್ಕೆ ಕಂಕಣಬದ್ಧರಾಗಿದ್ದಾರೆ. ಮಠದಲ್ಲಿ ಸ್ವಾಮಿಗಳ, ಆಗಂತುಕರಾಗಿ ಬರುವ ಹರಗುರು ಚರಮೂರ್ತಿಗಳ ಪ್ರಸಾದದ ಹೊಣೆ ಈ ಪವಿತ್ರ ದಂಪತಿಗಳದು. ಇವರಿಗೆ ತುಂಬಿದ ಮನ, ತುಂಬಿದ ಸಿರಿ; ಜೊತೆಗೆ ತುಂಬಿದ ಮಕ್ಕಳ ಭಾಗ್ಯ. ಇಬ್ಬರು ಗಂಡುಮಕ್ಕಳು ಹಾಗೂ ಎಂಟುಜನ ಹೆಣ್ಣುಮಕ್ಕಳು. ಅವರೆಲ್ಲರೂ ತಂದೆ-ತಾಯಿಗಳ ಉಜ್ವಲ ಶರಣ ಪರಂಪರೆಯನ್ನೇ ಮುನ್ನಡೆಸಿದ ಶರಣ ಹೃದಯಿಗಳು.

ಪ್ರೊ. ಜಿ. ಎಚ್. ಹನ್ನೆರಡಮಠ ಅವರು ಬರೆದ "ಚಿತ್ತರಗಿ ಚಿಜ್ಜ್ಯೋತಿ" ಪುಸ್ತಕದ ಮೊದಲ ಮುದ್ರಣದ ೨೦೦೦ ಪ್ರತಿಗಳು ಎಂದೋ ಮುಗಿದು ಹೋದವು. ಸ್ವತಃ ಮಠದಲ್ಲಿಯೆ ಒಂದು ಪ್ರತಿ ಇಲ್ಲದ ಪರಿಸ್ಥಿತಿ ಬಂದಿತು. ಕೊನೆಗೆ ಈ ಪುಸ್ತಕ "ಮಹಾತಪಸ್ವಿ"ಯಾಗಿ ಚಲನಚಿತ್ರವಾಗಿ ಕನ್ನಡ ಸಿನಿಮಾ ಪ್ರಪಂಚದಲ್ಲಿ ಹೊಸ ಕ್ರಾಂತಿ ಬೀರಿ ಬೆಳಗಿದ್ದರಿಂದ; ಪುಸ್ತಕದ ಬೇಡಿಕೆ ಅತಿಶಯವಾಯಿತು. ಕೊನೆಗೆ ಶರಣೆ ಸೌ. ಲಿಂಗಮ್ಮನವರೆ ತಮ್ಮ ಮಾವನವರಾದ ಕೈ. ವಾ. ಮಹಾಂತಪ್ಪನವರು ಚೋಳಪ್ಪನವರು ಸೂಡಿ ಅವರ ಪವಿತ್ರ ಸ್ಮರಣೆಯಲ್ಲಿ ಈ ಪುಸ್ತಕದ ೨ನೆಯ ಮುದ್ರಣದ ಸಂಪೂರ್ಣ ವೆಚ್ಚವನ್ನು ಇಲಕಲ್ಲ ಶ್ರೀ ವಿಜಯ ಮಹಾಂತೇಶ್ವರ ತರುಣ

ಸಂಘದ "ಮಾಸಿಕ ಶಿವಾನುಭವ" ಸೇವೆಯ ಅಂಗವಾಗಿ ನಿರ್ವಹಿಸಲು ಸಂತೋಷದಿಂದ ಮುಂದೆ ಬಂದರು. ಇವರ ಈ ಉದಾರಾಶ್ರಯದ ಫಲವಾಗಿ ಈ ಕೃತಿ ಮತ್ತೊಮ್ಮೆ ಓದುಗರ ಭಾರೀ ಬೇಡಿಕೆಯನ್ನು ಪೂರೈಸು ವಲ್ಲಿ ಸಹಾಯಕವಾಯಿತು.

"ಮಹಾತಪಸ್ವಿ" ವಿಜಯಮಹಾಂತ ಶಿವಯೋಗಿ ತರಣ ದಂಪತಿಗಳಾದ ಶ್ರೀ ಚೋಳಪ್ಪ ಹಾಗೂ ಲಿಂಗಮ್ಮನವರನ್ನೂ ಮತ್ತು ಸಕಲ ಕುಟುಂಬ ಪರಿವಾರವನ್ನೂ ಸದಾ ರಕ್ಷಿಸಲಿ. ಇತೋಪ್ಯತಿಶಯವಾಗಿ ಶಾಂತಿ ಸಮೃದ್ಧಿಗಳನ್ನು ಕರುಣಿಸಲಿ.

ಪ್ರಕಾಶಕರು :
ಚಿತ್ತರಗಿ ಶ್ರೀ ವಿಜಯ ಮಹಾಂತೇಶ
ಧರ್ಮಪ್ರಸಾರಕ ಮಂಡಳ, ಇಳಕಲ್ಲ.



ಶ್ರೀ ವಿಜಯಮಹಾಂತ ಶಿವಯೋಗಿಗಳ ಪವಿತ್ರ ಕರ್ತೃ ಗದ್ದುಗೆ
ವಿಜಯ ಮಹಾಂತ ತಪೋವನ : ಇಲಕಲ್ಲ



ಲಿಂ. ವಿಜಯಮಹಾಂತ ಶಿವಯೋಗಿಗಳು ಪ್ರಕೃತಿಯ ಅನಂತ ಶಾಂತಿ–ಸೌಂಧರ್ಯ – ಆನಂದಗಳ ಮಧ್ಯದಲ್ಲಿ : ಏಕಾಂತವಾಗಿ ಧ್ಯಾನಮಗ್ನರಾಗಿ ಸಮಾಧಿಸ್ಥಿತಿಯಲ್ಲಿ ಕುಳಿತುಕೊಳ್ಳುತ್ತಿದ್ದ "ಪರುಷಕಟ್ಟೆ"
ವಿಜಯಮಹಾಂತ ತಪೋವನ : ಇಲಕಲ್ಲ

## ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಧರ್ಮಪ್ರಸಾರಕ ಮಂಡಲ ಇಲಕಲ್ಲ ಇವರಿಂದ ಪ್ರಕಾಶಿತವಾದ ಪುಸ್ತಕಗಳು

೧ ಶ್ರೀ ವಿಜಯ ಮಹಾಂತೇಶ್ವರ ಪುರಾಣ — ಚನ್ನಕವಿಗಳು
೨ ಶ್ರೀ ವಿಜಯ ಮಹಾಂತೇಶ್ವರ ಲೀಲಾಮೃತ — ಓತಗೇರಿ ರಾಮರಾಯರು
೩ ಶ್ರೀ ವಿಜಯ ಮಹಾಂತೇಶ್ವರ ಲಾವಣಿ — ಪೂಜ್ಯ ಜಗದ್ಗುರುಗಳು
ಮೂರುಸಾವಿರಮಠ, ಹುಬ್ಬಳ್ಳಿ
೪ ಬಸವ ಕಾವ್ಯ ದರ್ಶನಂ — ಪ್ರೊ. ಜಿ. ಎಚ್. ಹನ್ನೆರಡುಮಠ
೫ ಪರಿಚಯ ಪಂಚಾರತಿ — ಪಂ. ಕಲ್ಲೂರ ಸಂಗಣ್ಣ
೬ ಚಿತ್ತರಗಿ ಚಿಜ್ಜ್ಯೋತಿ — ಪ್ರೊ. ಜಿ. ಎಚ್. ಹನ್ನೆರಡುಮಠ
೭ ಶ್ರೀ ವಿಜಯ ಮಹಾಂತೇಶ್ವರ ಸುಪ್ರಭಾತ — ಶ್ರೀ ಗುರುಸ್ವಾಮಿ ಕಲಕೇರಿ
೮ ಮಹಾಂತ ಕೃತ್ತಿಕೆ — ಶ್ರೀ ಬಸವೇಶ್ವರ ತುಪ್ಪದ
೯ ಶ್ರೀವಿಜಯಮಹಾಂತೇಶ್ವರ ನಾಮಾವಳಿ— ಶ್ರೀನಿ.ಪ.ಮಹಾಂತ ಸ್ವಾಮಿಗಳು
ಚಿತ್ತರಗಿ ಸಂಸ್ಥಾನಮಠ; ಇಲಕಲ್ಲ
೧೦ ಶ್ರೀ ವಿಜಯ ಮಹಾಂತೇಶ್ವರ ಲೀಲೆ — ಶ್ರೀ ಕಲ್ಯಾಣಪ್ಪ ಬ್ಯಾಳಿ
೧೧ ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ
ಅಷ್ಟೋತ್ತರ ಶತನಾಮಾವಳಿ — ಸಿದ್ಧವೀರಕವಿ
೧೨ ಶ್ರೀ ವಿಜಯ ಮಹಾಂತೇಶ್ವರ ಸುಪ್ರಭಾತ — ಪಂ.ಭಾಲಚಂದ್ರಶಾಸ್ತ್ರಿಗಳು
೧೩ ಶ್ರೀವಿಜಯಮಹಾಂತೇಶ್ವರ ಹಂತಿ ಹಾಡುಗಳು— ಶ್ರೀ ಶಂಕ್ರಣ್ಣಾ ನಾಗರಾಳ
೧೪ ಕಾಯಕಗೌರಿ ಗಂಗಮ್ಮ — ಡಾ. ಜ.ಚ.ನಿ.
೧೫ ಶ್ರೀ ವಿಜಯ ಮಹಾಂತೇಶ್ವರ ವಚನಗಳು — ಶ್ರೀ ಶಂಕ್ರಣ್ಣ ನಾಗರಾಳ
೧೬ ಅಷ್ಟಾವರ್ಣ ಗುಚ್ಛ — ಕಲ್ಯಾಣಪ್ಪ ಬ್ಯಾಳಿ
೧೭ ಮಹಾಪ್ರಸಾದ — ಸಂ. ಪ್ರೊ. ಜ.ಎಚ್.ಹನ್ನೆರಡುಮಠ
೧೮ ಪವಾಡ ಪುರುಷ (ನಾಟಕ) — ಶ್ರೀ ಬಸವರಾಜ ಭಗವತಿ
೧೯ ಮಹಾಂತ ಜ್ಯೋತಿ — ಕಿರಿಯಕಂದ ಮತ್ತು ಈಶ್ವರಕಂದ

೨೦ ಲಿಂಗಗೊಂಚಲು —ಸಂ. ಪ್ರೊ. ಜಿ.ಎಚ್.ಹನ್ನೆರಡುಮಠ

೨೧ ಲಿಂಗಾರ್ಚನವಿಧಿ —ಡಾ. ಜ.ಚ.ನಿ

೨೨ ಸಂಕ್ಷಿಪ್ತ ಶಿವಪೂಜಾವಿಧಿ —ಪಂ. ನಾಗಭೂಷಣ ಶಾಸ್ತ್ರಿಗಳು, ಧಾರವಾಡ

## ಬೇರೆ ಪ್ರಕಾಶನ ಸಂಸ್ಥೆಗಳಿಂದ ಪ್ರಕಟವಾದ ಪುಸ್ತಕಗಳು

೨೩ ಚಿತ್ತರಗಿಶ್ರೀವಿಜಯಮಹಾಂತಶಿವಯೋಗಿಗಳು—ಶ್ರೀ ಪಂಚಾಕ್ಷರಿ ಹಿರೇಮಠ
(ಇಂಡಿಯಾ ಬುಕ್ ಹೌಸ, ಬೆಂಗಳೂರ)

೨೪ ಚಿತ್ತರಗಿ ಶ್ರೀವಿಜಯಮಹಾಂತಶಿವಯೋಗಿ —ಪಂ. ಕಲ್ಲೂರ ಸಂಗಣ್ಣ
(ಶ್ರೀ ಕೊಟ್ಟೂರ ಸ್ವಾಮಿ ಪ್ರಕಾಶನ, ಹೊಸಪೇಟೆ)

೨೫ ಶ್ರೀವಿಜಯಮಹಾಂತೇಶ್ವರ ಪುರಾಣ(ಬರಲಿದೆ) —ಚನ್ನಕವಿಗಳು(ಜಗದ್ಗುರು
ಶ್ರೀ ಗಂಗಾಧರ ಧರ್ಮಪ್ರಸಾರಕ ಮಂಡಲ : ಮೂರುಸಾವಿರಮಠ; ಹುಬ್ಬಳ್ಳಿ)



ಪೂಜ್ಯ ಶ್ರೀ ವಿಜಯಮಹಾಂತ ಶಿವಯೋಗಿಗಳು ಧರಿಸುತ್ತಿದ್ದ
ಭಸ್ಮ (ಬಟ್ಟಲಲ್ಲಿ ಇದೆ), ಪಾದರಕ್ಷೆ ಹಾಗೂ ಕನ್ನಡಕ (ಚಾಳೀಸು)



ಶ್ರೀ ವಿಜಯಮಹಾಂತ ಶಿವಯೋಗಿಗಳು ಬರಗಾಲದಲ್ಲಿ ಕಲ್ಲುಗುಡ್ಡದ ನೆಲದಿಂದ
ಜಲತರಿಸಿ ಪವಾಡ ಮೆರೆದ "ಶ್ರೀ ವಿಜಯ ಮಹಾಂತ ತೀರ್ಥ''
ಬಾಗಿಲುಕೋಟೆಯಿಂದ ಇಲಕಲ್ಲಿಗೆ ಹೋಗುವ ಮಾರ್ಗದಲ್ಲಿ
ಶಿರೂರ ಗುಡ್ಡದಲ್ಲಿ ಇಂದಿಗೂ ಜಲಸಂಪತ್ತಿಯಿಂದ ತುಂಬಿ ತುಳುಕುತ್ತಿದೆ.

## ಚಿತ್ತರಗಿ ಶ್ರೀ ವಿಜಯ ಮಹಾಂತ ಶಿವಯೋಗಿಗಳ ಪವಿತ್ರ ನಾಮದಿಂದ ನಡೆಯುತ್ತಿರುವ ಸಂಘಸಂಸ್ಥೆಗಳು

೧ ಶ್ರೀ ವಿಜಯ ಮಹಾಂತೇಶ್ವರ ವಿದ್ಯಾವರ್ಧಕ ಸಂಘ, ಇಲಕಲ್ಲ
೨ ಶ್ರೀ ವಿಜಯ ಮಹಾಂತೇಶ್ವರ ಆರ್ಟ್ಸ ಮತ್ತು ಸಾಯಿನ್ಸ ಕಾಲೇಜ, ಇಲಕಲ್ಲ
೩ ಶ್ರೀ ವಿಜಯ ಮಹಾಂತೇಶ್ವರ ಲಲಿತಕಲಾ ಮಹಾವಿದ್ಯಾಲಯ, ಹುಬ್ಬಳ್ಳಿ
೪ ಶ್ರೀ ವಿಜಯ ಮಹಾಂತೇಶ್ವರ ವಿದ್ಯಾವರ್ಧಕ ಸಂಘ, ಹುನಗುಂದ
೫ ವ್ಹಿ. ಎಮ್. ಎಸ್. ಆರ್ಟ್ಸ ಸಾಯಿನ್ಸ ಕಾಲೇಜ, ಹುನಗುಂದ
೬ ಶ್ರೀ ವಿಜಯ ಮಹಾಂತೇಶ್ವರ ಮಾಧ್ಯಮಿಕ ಶಾಲೆ, ಹುನಗುಂದ
೭ ಶ್ರೀ ವಿಜಯ ಮಹಾಂತೇಶ್ವರ ವಿದ್ಯಾರ್ಥಿ ನಿಲಯ (Gent's Hostel) ಇಲಕಲ್ಲ
೮ ಶ್ರೀ ವಿಜಯ ಮಹಾಂತೇಶ್ವರ ಪ್ರಸಾದ ನಿಲಯ, ಇಲಕಲ್ಲ
೯ ಶ್ರೀ ವಿಜಯ ಮಹಾಂತೇಶ್ವರ ಪ್ರಸಾದ ನಿಲಯ, ಹುನಗುಂದ
೧೦ ಶ್ರೀ ವಿಜಯ ಮಹಾಂತೇಶ್ವರ ಪ್ರಸಾದ ನಿಲಯ, ಚಿತ್ತರಗಿ
೧೧ ಶ್ರೀ ವಿಜಯ ಮಹಾಂತೇಶ್ವರ ಕೋ-ಆಪರೇಟಿವ್ ಅರ್ಬನ್ ಬ್ಯಾಂಕ, ಹುನಗುಂದ
೧೨ ಶ್ರೀ ವಿಜಯ ಮಹಾಂತೇಶ್ವರ ಸೆಂಟ್ರಲ್ ಸ್ಕೂಲ, ಇಲಕಲ್ಲ
೧೩ ಶ್ರೀ ವಿಜಯ ಮಹಾಂತೇಶ್ವರ ತರುಣ ಸಂಘ, ಇಲಕಲ್ಲ
೧೪ ಶ್ರೀ ವಿಜಯ ಮಹಾಂತೇಶ್ವರ ಹಾಸ್ಟೆಲ್, ಸೊಲ್ಲಾಪುರ
೧೫ ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಧರ್ಮ ಪ್ರಸಾರಕ ಮಂಡಲ, ಇಲಕಲ್ಲ
೧೬ ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಗ್ರಂಥಮಾಲೆ, ಇಲಕಲ್ಲ
೧೭ ಶ್ರೀ ವಿಜಯ ಮಹಾಂತೇಶ ಫಿಲ್ಮ ಡಿಸ್ಟ್ರಿಬ್ಯೂಟರ್ಸ, ಇಲಕಲ್ಲ
೧೮ ಶ್ರೀ ವಿಜಯ ಮಹಾಂತೇಶ್ವರ ಗ್ರಾಹಕರ ಸಹಕಾರಿ ಸಂಘ, ಇಲಕಲ್ಲ

|| ಓಂ ||

# ಕೂಗಿತು ಶಿವಯೋಗ ಮಂದಿರ !

ಶಿವಯೋಗಮಂದಿರದ ಮಹಾದ್ವಾರ ! ಹಣ್ಣುಹಾಗಲ ವೃದ್ಧೆಯೋ-ರ್ವಳು ಕೋಲ ಮೇಲೆ ಕೈಯನೂರಿ ನಿಂತಿದ್ದಾಳೆ. ಸಂಜೆಯ ದಾಸಾಳದ ಹೂವಿನಂತೆ ಅವಳ ದೇಹ ಮುಪ್ಪಿನಿಂದ ಸುಕ್ಕುಗಟ್ಟಿದ್ದರೂ ಕಾಂತಿಯುತವಾಗಿದೆ. ಹಣೆಯಲ್ಲಿಯ ಸುಸ್ಪಷ್ಟವಾದ ಮೂರು ಬೆರಳು ವಿಭೂತಿ ಅವಳ ದೇಹಕ್ಕೆ ಮೋಕ್ಷದ ಅಭಿಷೇಕ ಮಾಡಿದಂತಿದೆ. ಸೂರ್ಯನ ಕಿರಣಗಳು ಲೋಕವನ್ನೆಲ್ಲ ಬೆಳಗಿಸಿ ವಿಶ್ರಾಂತಿ ಪಡೆಯಲೆಂದು ಅವಳ ಪಕ್ವದೇಹದ ಮೇಲೆ ಆಶ್ರಯ ಪಡೆದವೋ ಎಂಬಂತೆ ಆ ಭಸ್ಮರೇಖೆಗಳು ತೋರುತ್ತಿವೆ. ಇನ್ನು ಅವಳ ಕಣ್ಣುಗಳು ! ಅವು ಕಣ್ಣುಗಳಲ್ಲ ; ಶಿವಲಿಂಗಗಳು !! ಬಹುಕಾಲದ ಲಿಂಗ ನಿರೀಕ್ಷಣೆ-ಯಿಂದ ಅವುಗಳಿಗೆ ತೇಜಸ್ಸು, ಓಜಸ್ಸು, ದೈವಿಕಾಂತಿ, ತೀಕ್ಷ್ಣತೆ, ಸಬಲತೆ, ಚಾತುರ್ಯತೆ ಹಾಗೂ ಗಾಂಭೀರ್ಯತೆಗಳು ಬಂದಂತೆ ತೋರುತ್ತದೆ. ಅವಳ ಆ ತೇಜೋಭರಿತ ನಯನಗಳನ್ನು ನೋಡುವದು ಪಾಮರರಿಗೆ ಅಸಾಧ್ಯವಾದ ಮಾತು. ಬಹು ದೂರದಿಂದಲೇ ನಿಂತು ದೃಷ್ಟಿ ಬೀರಿದರೂ ಅವಳ ರುದ್ರಾಕ್ಷಿ

ಮಾಲೆ ಕಂಠದಲ್ಲಿ ಹಾಗೂ ಕೈಯಲ್ಲಿ ಉಕ್ಕಿ ಕಾಣುವಂತಿದೆ. ರುದ್ರನ ಚೈತನ್ಯಾಕ್ಷಿ ಯಾಗಿತ್ತು ಆ ರುದ್ರಾಕ್ಷಿ. ಅಬ್ಬಾ ! ಅವಳ ಸೀರೆಯು ಬಣ್ಣವೂ ಕಾವಿಯಾಗಿದೆ. ದೇಹದ ಬಣ್ಣವೂ ಕಾವಿಯಾಗಿದೆ. ಅವಳ ಅಂತರಂಗವೂ ಕೂಡ ಕಾವಿಯಾಗಿದೆ ಯೆಂದು ಕಲ್ಲುಗಳು ಕೂಡ ಒಪ್ಪಬಹುದಾಗಿದೆ. ಶಿವಯೋಗಮಂದಿರದ ಯೋ- ಗವು ಅವಳಲ್ಲಿ ಪರಿಪಕ್ವರಸಾಯನವಾಗಿ ಉಕ್ಕುತ್ತಿದೆ. ಅವಳ ಬೆಳ್ಳಿಗೂದಲು ಗಳನ್ನು ಮರೆಮಾಡಿ ಕಾವಿಯು ನಿರಲಂಕಾರಯುತ ಸೆರಗು ; ಅಸ್ತಂಗತವಾಗು ತ್ತಿರುವ ರವಿಗೆ ಬಂಗಾರಮೋಡ ಹೊಚ್ಚಿದಂತಿದೆ. ಮುಪ್ಪು ಬಂದರೂ ಮುತ್ತೈದಿತನ ಶಾಶ್ವತವಾಗಿ ಉಳಿದಿದೆಯೆಂಬುದಕ್ಕೆ ಅವಳ ಹಣೆಯು ಭಸ್ಮವ ನ್ನಲಂಕರಿಸಿದ ದಟ್ಟ ಕುಂಕುಮ ಹಾಗೂ ಕೊರಳ ಮಾಂಗಲ್ಯಗಳು ಸಾಕ್ಷಿಯಾ ಗಿವೆ. 'ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ' ಎಂದು ಶರಣರು ಹೇಳಿದ್ದು ಇಂಥ ಮುತ್ತೈದೆಯರನ್ನು ನೋಡಿಯೇ ಅಲ್ಲವೆ ?

ಅವಳು ಆ ಸಂಜೆಯು ಎಳೆಬಿಸಿಲಿನಲ್ಲಿ ಯಾರನ್ನೋ ನಿಟ್ಟಿಸುತ್ತ ಕುತೂ- ಹಲಿಯಾಗಿ ನಿಂತಂತಿದೆ. ಮಧ್ಯೆ ಮಧ್ಯೆ ಅವಳ ತುಟಿಗಳು ಯಾವನೋ ಒಬ್ಬ ಮಹಾತ್ಮನ ಹೆಸರನ್ನು ಗುನುಗುನಿಸುತ್ತಿವೆ. ಅವಳಿಗರಿಯದೇ ಅವಳಿಂದ ಚಿಮ್ಮುತ್ತಿದ್ದ ಆ ಮಹಾತ್ಮನ ದಿವ್ಯನಾಮ ಅವಳ ಹೃದಯದ ಆಳದಿಂದ ಸಿಡಿದು ಬರುತ್ತಿದೆ. ಸಂಗೀತಕ್ಕೆ ತಾಳದ ಮೇಳ ಇದ್ದಂತೆ ಅವಳ ಆ ದೈವೀ ಜೀವನಕ್ಕೆ ಆ ಅಪೂರ್ವ ನಾಮಜೋಡಿಯಾಗಿದೆ. ನಿಮಿಷ ನಿಮಿಷಕ್ಕೂ ಆ ಮಹಾತ್ಮ ನಾಮ ಅವಳ ತುಟಿಯಿಂದ ಚಿಮ್ಮುತ್ತಿದ್ದರೂ ಸ್ಪಷ್ಟವಾಗಿ ಕೇಳು ತ್ತಿಲ್ಲ. ಆ ನಾಮೋಚ್ಚಾರಣೆ ಮಂತ್ರದಂತೆ ಗೋಪ್ಯವಾಗಿದೆ. ಮಾಂಗಲ್ಯ ದಂತೆ ಮೌನವಾಗಿದೆ. ಭಾವದಂತೆ ಬಯಲಾಗಿದೆ.

ಪಾಪ ; ಮುದುಕಿ ಎಷ್ಟುತಾನೆ ನಿಂತಾಳೆ ? ಅವಳು ಪ್ರಚಂಡ ಚೈತನ್ಯ- ವನ್ನು ಹೊರುವದು ಅವಳ ಆ ಕಾಲುಗಳಿಗೆ ಅಸಾಧ್ಯವೇ ಸರಿ. ಸಂಜೆ ಸಮೀ- ಪಿಸಿದರೂ ಬೇಸಿಗೆಯ ಬಿಸಿಲು ಆರಿರಲಿಲ್ಲ, ಮಳೆಯಾಗದ್ದರಿಂದ ಧೂಳಿಗೆ ಬಡತನವಿರಲಿಲ್ಲ. ಶಿವಯೋಗಮಂದಿರದ ಕೋಗಿಲೆಗಳೂ ಕಷ್ಟದಿಂದಲೇ ಕೂಗು ತ್ತಿದ್ದವು, ಅವಳ ಬಡನಡು ಕೋಲಿನೊಂದಿಗೆ ಬಾಗಿ ಪಕ್ಕದ ಕಟ್ಟೆಯ ಮೇಲೆ ಕುಸಿಯಿತು. ಕುಳಿತಳು. ಅವಳ ಬಾಯಿಂದ ಸಾಮಾನ್ಯರು ಸೂಸುವಂತೆ ನಿಟ್ಟು-

ಸುರು ಬರಲಿಲ್ಲ. ಆದರೆ ಆ ಸ್ಥಾನದಲ್ಲಿ ಅದೇ ಆ ಪುಣ್ಯ ಪುರುಷನ ಪವಿತ್ರ ನಾಮ ಮಂತ್ರ ಮತ್ತೆ ಮತ್ತೆ ಅನುರಣಿಸಿತು.

ಕಡುಬೇಸಿಗೆಯ ಕಾಲ, ಲೋಕದ ನೆಳಲು-ತಂಗಾಳಿಗಳು ಬೇಸಿಗೆ ಕಳೆಯುವ ವರೆಗೆ ಶಿವಯೋಗಮಂದಿರದಲ್ಲೇ ವಾಸಮಾಡಿವೆ. ಯೋಗಿಗಳು ತಮ್ಮ ಅತ್ಯುನ್ನತ ನಿಲವಿನಲ್ಲಿ ಕಂಡ ಮಹಾಮೌನ–ಶಾಂತಿ–ಆನಂದ–ಪ್ರಕಾಶಗಳು ಈ ತಪೋವನದಲ್ಲಿ ದೃಗ್ಗೋಚರವಾಗಿವೆ. ಹನ್ನೆರಡು ತಿಂಗಳೂ ಇಲ್ಲಿ ಕಾಮನಿಲ್ಲದ ವಸಂತಮಾಸ. ರತಿ ಇಲ್ಲದ ಪ್ರೇಮಪರಾಗ, ಭೋಗವಿಲ್ಲದ ವಿಲಾಸ, ರಾಗವಿಲ್ಲದ ಅನುರಾಗ, ಶೃಂಗಾರವಿಲ್ಲದ ಮಂದಾರ, ನೆರಳಿಲ್ಲದ ಬೆಳಗು ಬತ್ತಲೆ ಇಲ್ಲದ ಬಯಲು, ಶೂನ್ಯವಿಲ್ಲದ ಮಹಾಶೂನ್ಯ ನೆಲೆನಿಂತು ರಸಘಟ್ಟಿಯಾಗಿವೆ, ಕಾಣಬಾರದ ಕದಳಿಯಂತಿದ್ದ ಈ ಶಿವಯೋಗಮಂದಿರವನ್ನು ಪ್ರವೇಶಿಸುವವರಿಗೆ ಎಂಟು ಎದೆಯೇ ಬೇಕೆಂದು ಕಾಣುತ್ತದೆ! ಭಾವ ಬಯಲಾಗಿ, ಚಿತ್ತವಿಶುದ್ಧಿಯಾಗಿ, ಅನುಭಾವ ಚಿತ್ತರಗಿಯಲ್ಲಿ ನಿಂತವರಿಗೆ ಮಾತ್ರ ಇಲ್ಲಿ ಪ್ರವೇಶ ಅಜ್ಞಾನದಿಂದ ಅವಿವೇಕದಿಂದ; 'ಇದೇನು ಮಹಾ' ಎಂದು ನುಗ್ಗಿದರೆ, ಸಿಂಹವನ್ನು ಅಪ್ಪ ಬಂದ ಮೊಲದಂತಾದೀತು!

ಮತ್ತೆ ಮತ್ತೆ ಆ ಮಹಾ ಮುತ್ತೈದೆ ಮಹಾತ್ಮನೊಬ್ಬನ ದಿವ್ಯ ಧ್ಯಾನವನ್ನು ಮೌನದಿಂದ ವಿಕಂಪಿಸುತ್ತಿದ್ದಾಳೆ. ಆ ಶ್ರೇಷ್ಠ ಬಾಳಿಗೆ ಬೆಳಕಾದ ಆ ಪುಣ್ಯಯೋಗಿ, ದಿವ್ಯಪುರುಷ ಯಾರಿರಬಹುದು? ಅವಳ ಅಂತರಂಗವನ್ನೇ ಸೂರೆಮಾಡಿ ಸುಗ್ಗಿಯ ಕಣಕಟ್ಟಿದ ಆ ತಪೋಮಹರ್ಷಿ ಯಾರಿರಬಹುದು? ಅವಳಿಗೆ ಬಾಹ್ಯ ಪರಿವೆಯೇ ಕಡಿಮೆ. ಅಂತರಂಗದ ದೇವಾಲಯದಲ್ಲಿ ತನ್ನೊಲವಿನ ಆ ಪುಣ್ಯಾತ್ಮನೊಂದಿಗೆ ಸರಿಬೆರೆದಿದ್ದಾಳೆ. ಬಾಹ್ಯದಲ್ಲಿ ಆತನ ನಾಮಸ್ಮರಣೆಗೆ ಅಸ್ಫುಟ ಉಚ್ಚಾರಣೆಯನ್ನು ನೀಡಿದ್ದಾಳೆ. ಮಂತ್ರಶರೀರಿಯಾಗಿದ್ದಾಳೆ.

ಕೊನೆಗೆ ನಿರಾಶೆ. ಯಾರನ್ನೊ ನೋಡುತ್ತಿದ್ದಳು; ಆದರೇನು ಅವರು ಬರಲಿಲ್ಲ! ತನ್ನ ಬಹುದಿನಗಳ ಸೇವಕನಂತಿದ್ದ ಕೋಲನ್ನು ಊರಿ ಮೇಲೆದ್ದಳು. 'ನಿನ್ನ ಇಚ್ಛೆ' ಎಂದು ನುಡಿದಳು. ಶಿವಯೋಗಮಂದಿರದಲ್ಲಿ ಮರೆಯಾಗುವ ಮುನ್ನ ಪಕ್ಕದ ಗುಡ್ಡಗಳ ಸಾಲಿನಲ್ಲಿ ಮಲಗಿಕೊಂಡ ಧೂಳಿದಾರಿಯನ್ನೊಮ್ಮೆ ಕೊನೆಯ ಬಾರಿಗೆ ನೋಡಿದಳು. ಯಾರೋ ಕಂಡಂತಾಯಿತು! ಹೌದು ಯಾರೋ ಮೆಲ್ಲನೆ ಬರುತ್ತಿದ್ದಂತೆ ತೋರಿತು! ಲಿಂಗಕ್ಕೆ ಪಂಚಾಮೃತದ

ಅಭಿಷೇಕ ನೀಡಿದಂತಾಯಿತು. ಅವಳ ಕಣ್ಣುಗಳು ಜ್ಯೋತಿಯನ್ನು ಝಳಪಿಸಿದವು. ತುಟಿಗಳು ತಮ್ಮ ಇಚ್ಛೆಯ ಪುಣ್ಯ ಪುರುಷನ, ಆ ಮಹಾತ್ಮನ ಧನ್ಯವಾದಗಳನ್ನು ಹಾಡಿದವು.

ತೂರುತ್ತಿರುವ ಕೆಂಧೂಳಿಯ ತೆರೆಯಲ್ಲಿ ಇಬ್ಬರು ಈಸಿ ಈಸಿ ಬರುತ್ತಿದ್ದಾರೆ. ಗುಡ್ಡದ ಸಾಲಿನ ಆಚೆಯ ಪಕ್ಕಕ್ಕೆ ಅವರು ಇದ್ದುದರಿಂದ ಚುಕ್ಕೆಯಂತೆ ಕಾಣುತ್ತಿದ್ದಾರೆ. ಪುರುಷರೋ ಸ್ತ್ರೀಯರೋ ಎಂದು ತಿಳಿಯಲು ಬಹುಕಾಲ ಬೇಕಾಗಲಿಲ್ಲ. ಒಬ್ಬ ಪುರುಷ, ಒಬ್ಬಳು ಸ್ತ್ರೀ ಎಂಬುದಂತೂ ಖಚಿತವಾಯಿತು. ಆದರೆ ಸಮೀಪ ಬಂದರಲ್ಲವೇ ಅವರಾರೆಂಬುದು ಹೊಳೆಯುವದು, ಮುದುಕಿ ತೆರೆದ ಬಾಯಿಂದ, ಬೀರಿದ ಕಣ್ಣಿಂದ, ಅರಳಿದ ಮೊಗದಿಂದ, ಹರಡಿದ ಕೈಯಿಂದ ಆತುರದ ಕಲ್ಪವೃಕ್ಷದಂತೆ ನಿಂತಿದ್ದಾಳೆ. ಅವಳ ತೀಕ್ಷ್ಣ ಕಣ್ಣುಗಳು ಆ ದೃಶ್ಯದ ಅರ್ಥವನ್ನು ಮಾಡಿಕೊಡಲು ಹೆಣಗಿದವು. ಭಾವದ ಬಯಕೆ ನಿರ್ಭಾವದ ಸೀಮೆಯಿಂದ ಗರಿಗೆದರಿ ನಿಂತಿತು.

. ಕೆಲ ನಿಮಿಷಗಳನ್ನು ಶಿವಯೋಗಮಂದಿರವೂ ಆತುರದಿಂದ ಕಳೆಯಿತು. ಆಗಲೇ ಅಭೂತಪೂರ್ವವಾದ ದೃಶ್ಯ. ನವದಂಪತಿಗಳಿಬ್ಬರ ವೈಭವದ ಮೆರವಣಿಗೆ ಇತ್ತಲೇ ಬರುತ್ತಿದೆ. ಆ ಮೆರವಣಿಗೆಯಲ್ಲಿ ದಂಪತಿಗಳಿಬ್ಬರೇ ಇದ್ದಾರೆ. ಮತ್ತಾರೂ ಇಲ್ಲ. ಅವರ ಆನಂದ, ಆಹ್ಲಾದ, ಸಖ್ಯ, ನಲ್ವಾತು, ಮಂದಹಾಸ, ಮಾಧುರ್ಯ, ಮೋಹಕತೆಗಳೇ ಮೆರವಣಿಗೆಯ ಜನರು !

ಎದುರುಬಂದ ಮೊಮ್ಮಗನನ್ನೂ ಹಾಗೂ ಅವನ ಅರ್ಧಾಂಗಿನಿಯನ್ನೂ ಮೊದಲು ಅಪ್ಪಿಕೊಳ್ಳಬೇಕೋ ಅಥವಾ ಮುದ್ದಿಕ್ಕಬೇಕೋ ಎಂಬ ಭಾವದ ತೊಡರಿನಲ್ಲಿ ಮುದುಕಿ ನಿಂತಂತೆಯೇ, ದಂಪತಿಗಳಿಬ್ಬರೂ ಸ್ಪರ್ಧೆಗೆ ನಿಂತ ಹುರಿಯಾಳುಗಳಂತೆ, ನಾ ಮುಂದೆ ತಾ ಮುಂದೆ ಎಂದು ಬಂದು ಅವಳ ಪಾದಗಳಿಗೆ ಹಣೆ ಇಟ್ಟು ವಂದಿಸಿದರು. ಆ ಆನಂದದ ಭರದಲ್ಲಿ ಅವರಿಬ್ಬರೂ ಬಿಸಿಲನ್ನು ಬೀಸಿ ಒಗೆದರು. ಧೂಳನ್ನು ತೂರಿದರು. ಚಳಲಿಕೆಯನ್ನು ಕೇರಿದರು. ಶಿವಯೋಗ ಮಂದಿರದ ಮಹಾದ್ವಾರದಲ್ಲಿ ವಾತ್ಸಲ್ಯಸರೋವರವನ್ನೇ ಕಟ್ಟಿದರು. ತಮ್ಮಿಬ್ಬರ ದಾಂಪತ್ಯ ಪ್ರೇಮಕ್ಕೆ ; ಶಿವಯೋಗ ಮಂದಿರದ ಆತ್ಮ-ದೀಕ್ಷೆಯನ್ನು ಪಡೆಯಲು ಬಂದಂತೆ ಅವರಿಬ್ಬರೂ ಭಕ್ತಿಯಿಂದ ಬಂದಿದ್ದರು. ಅವರ ಪ್ರೇಮವು ಎಷ್ಟು ಗಹನವೋ ಭಕ್ತಿಯೂ ಅಷ್ಟೇ ಆಳವಾಗಿತ್ತು. ಅವರ

ಮೋಹವು ಎಷ್ಟು ಪ್ರಗಾಢವಾಗಿತ್ತೋ ವಿನಯವೂ ಅಷ್ಟೇ ಪರಿಪ್ಲುತ ವಾಗಿತ್ತು.

ಆತ ಗಂಭೀರ ಪುರುಷ. ಹರವಾದ ಎದೆ. ಹಿಗ್ಗಿದ ಮೊಗ. ಬಗ್ಗಿದ ಭಾವ. ಕೆಂಗುಲಾಬಿಯು ಗಂಡುರೂಪವನ್ನು ಹೆತ್ತಂತೆ ನೋಡಲು ಚಿನ್ನವಾಗಿದ್ದಾನೆ! ಕಣ್ಣಿನಲ್ಲಿ ಚಾಂಚಲ್ಯವಿಲ್ಲ, ನುಡಿಯಲ್ಲಿ ಕಾಠಿಣ್ಯವಿಲ್ಲ, ಪೌರುಷದಲ್ಲಿ ವಕ್ರತೆ ಇಲ್ಲ. ಎಲ್ಲವೂ ಸಮ, ಸೊಬಗು, ಚಿತ್ತಾಕರ್ಷಕ. ಸೌಂದರ್ಯದಲ್ಲಿ ಕಾಮನಾದರೂ ಕಾಮಿಯಲ್ಲ. ವಯಸ್ಸಿನಲ್ಲಿ ತರುಣನಾದರೂ ಉನ್ಮತ್ತನಲ್ಲ. ಎದೆಯಲ್ಲಿ ಲಿಂಗಯ್ಯ ತುಂಬಿದ್ದಾನೆ. ಹರವಾದ ಹಣೆಯಲ್ಲಿ ಬೆಮರ ಹನಿಗಳು ಭಸ್ಮವನ್ನು ಅಳಿಸಿದರೂ ಅಲ್ಲಲ್ಲಿ ಅದರ ಚಿಹ್ನ ಉಳಿದಿವೆ.

ಅವಳು....? ಛೇ ವರ್ಣನೆ ಅನಾವಶ್ಯಕ! ಅವನಂತೆಯೇ ಅವಳಾಗಿದ್ದಾಳೆ ಎಂದರೆ ಎಲ್ಲವನ್ನೂ ಒಮ್ಮೆಗೇ ಹೇಳಿದಂತಾಗುತ್ತದೆ. "ಇಚ್ಛೆಯನರಿವ ಸತಿ ಇರೆ ಸ್ವರ್ಗಕ್ಕೆ ಕಿಚ್ಚು ಹಚ್ಚೆಂದು" ಹೇಳಿದ ಆ ಕಂಬಳಿಯ ಯೋಗಿ ಸರ್ವಜ್ಞ, ಇಂಥವರ ಬಾಳನ್ನು ಕಂಡೇ ಆಡಿರಬಹುದಲ್ಲವೇ? ಆ ಕನ್ನಿಕೆ ಗುಣ ವಿಭೂಷಿತೆಯಾಗಿದ್ದಾಳೆ. ನಯ - ವಿನಯಗಳಿಂದ ಸಾಲಂಕೃತಳಾಗಿದ್ದಾಳೆ. ಬಾಗಿದ ತಲೆ, ಮುಗಿದ ಕೈಗಳಿಂದ ಬಸವ ಪತ್ನಿ ನೀಲಾಂಬಿಕೆಯ ಜೀವನಾದರ್ಶನಕ್ಕೆ ಕುರುಹಾಗಿದ್ದಾಳೆ.

ಶಿವಯೋಗ ಮಂದಿರವನ್ನು ಹೊಗಲು ಅವರು ಚಿಂತಿಸಬೇಕಾಗಿರಲಿಲ್ಲ, ಅದೇ ಅವರನ್ನು ಬರಮಾಡಿಕೊಂಡಿತು. ಮಂಜುಲ ಗಾನದಿಂದ ಪ್ರವಹಿಸುತ್ತಿರುವ ಮಲಪ್ರಭೆ ನವದಂಪತಿಗಳಿಗೆ ಆರತಿಯನ್ನು ಬೆಳಗಿ ಬಾರೆಂದುಕರೆದಳು.

ಅಜ್ಜಿಯ ಕೋಲಿಗೆ ಉತ್ಸಾಹ ಹೆಚ್ಚಿತು. ಚುರುಕುಗತಿಯಿಂದ ಮುನ್ನಡೆದಳು. ದಂಪತಿಗಳಿಬ್ಬರೂ ಹಾಲಕ್ಕಿಗಳಂತೆ ಅನುಸರಿಸಿದರು. ಮುಕ್ತಿಯ ಮುತ್ತೈದೆ ದಂಡೆ ಕಟ್ಟಿಕೊಂಡು ಹಸೆಮಣೆಯ ಮೇಲೆ ಕುಳಿತಂತೆ ಶಿವಯೋಗ ಮಂದಿರ ಯೋಗಭರಿತವಾಗಿತ್ತು. ಅಲ್ಲಿಯ ಪ್ರಾಂಜಲ ನಿರ್ಮಲ ಲೀಲಾ ವಿಲಾಸ ದೇವಲೋಕದ ದಿವ್ಯ ಔತಣವಾಗಿತ್ತು.

ಮಲಪ್ರಭೆಯ ಎತ್ತರವಾದ ದಂಡೆ. ಅಲ್ಲಿಯೇ ಇದೆ ಯೋಗ ಕುಟೀರ. ಆಕಾಶದ ಚುಕ್ಕೆಗಳು ಭೂಮಿಯ ಮೇಲೆ ಸಂಚರಿಸುತ್ತಿದ್ದಂತೆ ಬಾಲಶಿವ ಯೋಗಿಗಳು ಸಂಚರಿಸುತ್ತಿದ್ದಾರೆ. ತಾಯಿ–ತಂದೆ–ಅಕ್ಕ–ತಂಗಿ–ಅಣ್ಣ -ತಮ್ಮ-

ಬಂಧು–ಬಳಗಗಳನ್ನು ಅಗಲಿದ ಆ ಪುಟ್ಟ ಮಕ್ಕಳಲ್ಲಿ ಎಂಥ ವಿರಕ್ತಿ! ಸಂಸ್ಕೃತಾಧ್ಯಯನದಲ್ಲಿ ಕೆಲವರು, ಯೋಗಪಾಠದಲ್ಲಿ ಕೆಲವರು, ವಚನ ವ್ಯಾಖ್ಯಾನದಲ್ಲಿ ಇನ್ನು ಕೆಲವರು ತೊಡಗಿದಾಗ ಈ ದಂಪತಿಗಳು ಅಲ್ಲಿ ಹೋಗಬೇಕೆ? ಯೋಗದೆಡೆ ಸಂಸಾರದ ಸಾಮರಸ್ಯ! ಆ ಮಕ್ಕಳಲ್ಲಿ ಕೂಡ ಎಂಥ ಅಭೂತ-ಪೂರ್ವ ವೈರಾಗ್ಯ; ದಂಪತಿಗಳನ್ನು ಕಂಡು ಆತುರಗೊಳ್ಳದೇ ತಮ್ಮ ಸಹಜ ಸಂಸ್ಕಾರದಿಂದ ತಲೆಬಾಗಿ ಮುಗ್ಧ ಬಸವಣ್ಣಗಳಂತೆ ಕುಳಿತುಬಿಟ್ಟರು !! ಅಬ್ಬಾ; ಇಂಥ ಅಭೂತಪೂರ್ವ ಯೋಗ ಶಿಕ್ಷಣವನ್ನೀಡುವ ಈ ಶಿವಯೋಗ ಮಂದಿ_ರದ ಪ್ರೇರಕರಾರು? ಈ ಮಹಾಮಂದಿರದ ಸಾಕಾರ ಸ್ವರೂಪರಾರು? ಈ ಆತ್ಮ ಸಾಕ್ಷಾತ್ಕಾರದ ಶಿಲ್ಪಿಯಾರು? – ಎಂದು ಆ ದಂಪತಿಗಳು ಮುಗ್ಧ ಭಾವದಿಂದ ಮೌನದಲ್ಲಿ ಪ್ರಶ್ನಿಸಿದರು.

ಅಜ್ಜಿಯ ಕೋಲು ಮೂರುಮಡಿ ಉತ್ಸಾಹದಿಂದ ಮುನ್ನಡೆಯಿತು. ಮೇಲಿಂದ ಮೇಲೆ ಅವಳ ಬಾಯಿಂದ ಸುರಿಯುತ್ತಿದ್ದ ಆ ನಾಮಸ್ಮರಣೆ ದಂಪತಿಗಳಿಗೂ ಸರಿಯಾಗಿ ಕೇಳಲಿಲ್ಲ, ಅಜ್ಜಿಯ ಜೀವನವನ್ನು ಸೂರೆಗೈದ ಆ ಪುಣ್ಯಪುರುಷನಾರು? ದಿವ್ಯ ಮಹಾತ್ಮನಾರು? – ಎಂದು ಕುತೂಹಲಿಗಳಾಗಿ ಅವರು ಒಬ್ಬರನ್ನೊಬ್ಬರು ನೋಡಿ ಮೌನದಿಂದ ಪ್ರಶ್ನಿಸಿಕೊಂಡರು.

ಮತ್ತೊಂದು ಕುಟೀರ. ಅಲ್ಲಿ ಆಗಲೇ ಪ್ರಬುದ್ಧರಾಗುತ್ತಿದ್ದ, ಜ್ಞಾನ-ವೈರಾಗ್ಯ–ತಪಸ್ಸಿನಲ್ಲಿ ಮುನ್ನಡೆಯುತ್ತಿರುವ ಸಾಧಕ ಜೀವಿಗಳ ಆಶ್ರಮ. ಎಲ್ಲರೂ ಗುರುಗಳ ಅಡಿದಾವರೆಯಲ್ಲಿ ಕಾಷಾಯಾಂಬರಧಾರಿಗಳಾಗಿ ಮಂತ್ರ ಮುಗ್ಧರಾಗಿದ್ದಾರೆ.

ಇನ್ನೊಂದು ಕುಟೀರ. ಅಲ್ಲಿ ಎಲ್ಲರೂ ಪ್ರಬುದ್ಧರು, ಸಿದ್ಧ ಸ್ವಾಮಿಗಳು. ಶಿವಯೋಗಿಗಳು. ಭಕ್ತಿ-ಜ್ಞಾನ–ವೈರಾಗ್ಯಗಳಿಂದ ಅರಳಿದ ಪುಷ್ಪಗಳು. ಅವರ ಗಾಂಭೀರ್ಯ–ತೇಜಸ್ಸು–ಸದ್‌ವಿನಯ–ಯೋಗ ಬಲಗಳು ಆ ವಾತಾವರಣಕ್ಕೆ ಕಳೆದುಂಬಿದ್ದವು. ನವದಂಪತಿಗಳು ತಾವು ದಾಂಪತ್ಯ ಜೀವಿಗಳೆಂಬುದನ್ನೇ ಮರೆತು ಅವರ ಪಾದಪದ್ಮಗಳಲ್ಲಿ ತಮ್ಮ ಹಣೆ ತೂರಿದರು. ಭಾವ ಪುಷ್ಪಗಳಿಂದ ಅರ್ಚಿಸಿದರು.

ಈ ಕುಟೀರಗಳ ಪಕ್ಕದಲ್ಲೇ ಮಲಪ್ರಭೆಯ ದಂಡೆಯಲ್ಲಿದೆ, ಅಪಾರ ವೈಭವದ ಲತಾಮಂಟಪ. ಇದೊಂದು ಶಾಶ್ವತ ಭೂಕೈಲಾಸ. ನಿತ್ಯ ಸತ್ಯದ

ನಂದನವನ. ಅಲ್ಲಿ ಬಂದೊಡನೇ ಆ ವೃದ್ಧ ಅಜ್ಜಿಯಲ್ಲಿ ಭಾವದ ಕಂಪನಗಳು ತೀಕ್ಷ್ಣಗೊಂಡವು. ಅವಳ ನಾಮಧ್ಯಾನ ಪ್ರಬಲವಾಯಿತು. ದಂಪತಿಗಳಿಬ್ಬರೂ ಹಾಲುಣ್ಣುವ ಹಸುಳೆಗಳಂತೆ ಅಲ್ಲಿ ಪ್ರವೇಶ ಮಾಡಿದರು. ಈ ಲತಾಮಂಟಪವು ಶಿವಯೋಗ ಮಂದಿರದಲ್ಲೇ ಮತ್ತೊಂದು ಶಿವಯೋಗ ಮಂದಿರ! ಯೋಗದಲ್ಲೇ ಮಹಯೋಗ !!

ಅಬ್ಬಾ ! ಲತಾಮಂಟಪದ ಮಧ್ಯದಲ್ಲಿ ಉನ್ನತಾಸನದ ಮೇಲೆ, ಹುಲಿ ಚರ್ಮದ ಪೀಠದಲ್ಲಿ ಹಣ್ಣುಗಾಯಿಯಾದ ವೃದ್ಧ ತಪಸ್ವಿಗಳೊಬ್ಬರು ಕಂಗೊಳಿಸಿದ್ದಾರೆ. ಏನು ತೇಜ, ಏನು ಗಾಂಭೀರ್ಯ ! ಈ ಯೋಗ ಮಂಟಪದಲ್ಲಿ ಜಂಗಮಲಿಂಗವಾಗಿದ್ದಾರೆ, ಅವರ ಯೋಗಶಕ್ತಿ ಭೂಮಿಗಿಳಿದು ಬಂದ ಮಣುಕಲ್ಲುಗಳಿಗೂ ಯೋಗನಿದ್ರೆಯನ್ನು ಕಲಿಸಿತ್ತು. ಆ ಲತಾಮಂಟಪವೇ ಒಂದು ಸಜೀವ ಸಾಧಕವಾಗಿತ್ತು.

ಅಜ್ಜಿ ತನ್ನ ಗದ್ಗದಿತ ಕಂಠದಿಂದ. ಕಂಪಿಸುವ ದೇಹದಿಂದ ಆ ಮಹಾಮಹಿಮನ ಪಾದದಲ್ಲಿ ಮೃದುವಾಗಿ ಮಣಿದು ತನ್ನನ್ನೇ ಸಮರ್ಪಿಸಿಕೊಂಡಳು. ಆಗಲೂ ಅವಳ ನಾಮಸ್ಮರಣೆ ನಿಲ್ಲಲಿಲ್ಲ. ನವದಂಪತಿಗಳು ಎಳೆಮಕ್ಕಳಂತೆ ಬಂದು ಆ ಚಿನ್ನವರ್ಣದ ಪಾದಗಳನ್ನು ಹಣೆಯಿಂದ ಸ್ಪರ್ಶಿಸಿದರು. ಮಹಾಸ್ವಾಮಿಗಳು ತಮ್ಮ ಕೇವಲ ಪರಿಚಯದ ಅಜ್ಜಿಯಿಂದ ಅವಳ ಮೊಮ್ಮಗನ ನವದಾಂಪತ್ಯದ ಜೀವನವನ್ನು ವಿಚಾರಿಸಿಕೊಂಡರು. ಹಾಲುಉಕ್ಕಿದಂತೆ ಉಕ್ಕಿದರು.

ತರುಣ ಈಗ ಭಾವಕಂಪನಗಳಿಂದ ತುಂಬಿ ಹೋದ ಶಿವಯೋಗ ಮಂದಿರವು ಅವನ ಅಂತರಂಗದಲ್ಲಿ ಬೇರು ಬಿಟ್ಟಿತು. ಮಹಾಸ್ವಾಮಿಗಳ ದಿವ್ಯ ವಾತ್ಸಲ್ಯದಲ್ಲಿ ಆತ ನಿರ್ಭಯನಾದ. ಅವರೊಂದಿಗೆ ಭಕ್ತಿ ಸಲಿಗೆಯನ್ನು ಹೊಂದಿದ ಮಾತುಗಳು ಮುನ್ನಡೆದಂತೆ ಅವನಲ್ಲಿ ಒಂದು ಮಹಾಪ್ರಶ್ನೆಯೊಂದು ಧಿಗಿಲ್ಲೆಂದು ಮೇಲೆದ್ದಿತು. ನೇರವಾಗಿ ಸ್ವಾಮಿಗಳನ್ನು ಕೇಳಿಯೇ ಬಿಟ್ಟ.

''ಸ್ವಾಮೀಜಿ. ಈ ಸುಕ್ಷೇತ್ರದಲ್ಲಿ ಅದರ್ಣನಿಯವಾದ ಮಹಾಶಾಂತಿ ತುಂಬಿಬಿಟ್ಟಿದೆ. ಇಲ್ಲಿ ಬಂದೊಡನೆ ನಮ್ಮನ್ನೇ ನಾವು ಮರೆಯುತ್ತೇವೆ ಇದಕ್ಕೇನು ಕಾರಣವೆಂದು ತಮ್ಮನ್ನು ಕೇಳಬಹುದೆ?''

—ಆತನ ಪ್ರಶ್ನೆಯಿಂದ ಸ್ವಾಮಿಗಳು ಗಂಭೀರರಾದರು ಮಹಾಪ್ರಶ್ನೆಯೊಂದು ಎದುರಿಗೆ ನಿಂತಿದ್ದು ಅವರಿಗೆ ಸ್ಪಷ್ಟವಾಯಿತು. ಸ್ವಲ್ಪಕಾಲ ತಡೆದು ಎತ್ತರವಾದ ಸ್ಥಿತಿಯಿಂದ ಮೆಲ್ಲನೆ ಹೇಳಿದರು—

‘‘ಇದಕ್ಕೆ ಕಾರಣ ಇದ್ದೇ ಇದೆ ಮಗು, ಈ ಅರಣ್ಯಸ್ಥಾನವನ್ನು ಮೊದಲು ಕಂಡು, ತಮ್ಮ ಪಾದ ಊರಿ, ಅನುಗ್ರಹಿಸಿ, ಶಿವಯೋಗಕ್ಕೆ ಅಣಿ ಮಾಡಿದವರು ಪ್ರಚಂಡ ಯೋಗಿಗಳಾಗಿರಲಿಲ್ಲವೇ ? ಯೋಗಿಗಳು ಮೆಟ್ಟಿದ ಧರೆ ಪಾವನವಲ್ಲವೇ ?

—ಎಂದರು ಅವರ ಗಾಂಭೀರ್ಯ ಇನ್ನೂ ಇನ್ನು ಅತಿಶಯುವಾಯಿತು. ಆದರೆ ತರುಣನಿಗೆ ಸ್ವಾಮಿಗಳ ಉತ್ತರದಿಂದ ತೃಪ್ತಿಯಾಗಲಿಲ್ಲ. ಮತ್ತಷ್ಟು ಕುತೂಹಲ ಕೆರಳಿತು. ಮತ್ತೆ ಕೇಳಿದ—

‘‘ಸ್ವಾಮಿಜಿ ಆ ಮಹಾಯೋಗಿಗಳು ಯಾರೆಂದು ತಮಗೆ ಕೇಳಬಹುದೇ?’’

ಆಗಲೇ ಮಹಾಸ್ವಾಮಿಗಳ ಪೂಜಾಸಮಯ. ಅವರು ತರುಣನ ಪ್ರಶ್ನೆಗೆ ಉತ್ತರ ನೀಡುತ್ತಿದ್ದರೋ ಏನೋ; ಆದರೆ ಅಷ್ಟರಲ್ಲಿ ಅವರ ಪಕ್ಕಕ್ಕೆ ಸೇವಾಮೂರ್ತಿಯೊಬ್ಬನು ಬಂದು ಮಜ್ಜನಕ್ಕೆ ದಯಮಾಡಿಸಬೇಕೆಂದು ವಿನಂತಿಸಿದ. ಸ್ವಾಮಿಗಳಲ್ಲಿ ಮಾತು ಕಡಿಮೆ. ಮೌನ ಅಧಿಕ. ಅವರು ಏನೋ ಸನ್ನೆಯಿಂದ ಆ ಸೇವಕನನ್ನು ನೋಡಿದರು. ಅಷ್ಟಕ್ಕೇ ಅವರ ಭಾಷೆ ಅರ್ಥವಾಗಿ ಆ ಸೇವಕ ಕುಟೀರಕ್ಕೆ ಓಡಿ ಹೋದ. ಅಲ್ಪಕಾಲದಲ್ಲೇ ಅನೇಕ ಹಣ್ಣುಗಳನ್ನು ತಂದಿರಿಸಿದ. ಸ್ವಾಮಿಗಳು ಹಣ್ಣುಗಳನ್ನು ನವದಂಪತಿಗಳಿಗಿಟ್ಟು ‘ಪ್ರಸಾದ ಸ್ವೀಕರಿಸಿರಿ’ ಎಂದಿಷ್ಟೇ ನುಡಿದು ತಮ್ಮ ಪೂಜಾಕಾರ್ಯಕ್ಕೆ ಯಂತ್ರದಂತೆ ಚಲಿಸಿಹೋದರು.

ತರುಣನಿಗೆ ಏನೂ ತಿಳಿಯಲೇ ಇಲ್ಲ. ಆ ನವವಧುವು ಪತಿಯನ್ನು ಪ್ರಶ್ನಾರ್ಥಕವಾಗಿಯೇ ನೋಡಿದಳು. ಇಬ್ಬರಿಗೂ ತೃಪ್ತಿ ತೀರಲಾರದ ಪ್ರಶ್ನೆ. ಮಳೆಗಾಲದ ಆರಂಭಕ್ಕೆ ಕಾರ್ಮುಗಿಲಿನಿಂದ ಬರಸಿಡಿಲು ಸಿಡಿದಂತೆ ಆ ತರುಣ ಅಜ್ಜಿಯನ್ನು ಅಲುಗಾಡಿಸಿ ಕೇಳಿಯೇ ಬಿಟ್ಟ.

‘ಅಜ್ಜೀ, ಈ ಶಿವಯೋಗ ಮಂದಿರದ ಮೂಲ ಪುರುಷರು ಪ್ರಚಂಡ ಯೋಗಿಗಳಾಗಿದ್ದರೆಂದು ಹೇಳಿದರಲ್ಲ ಅವರು ಯಾರು ? ನಿನಗಾದರೂ ಗೊತ್ತಿದೆಯೇ ?

ಅಜ್ಜಿ ನಕ್ಕು ಹೇಳಿದಳು.

'ಹುಚ್ಚಪ್ಪ, ಇಷ್ಟೂ ತಿಳಿಯದೆ ನಿನಗೆ ? ಅವರೇ ಅವರೇ ಚಿತ್ತರಗಿಯ ಶಿವಾನುಭವ ಚರವರ್ಯರಾದ ಶ್ರೀ ವಿಜಯಮಹಾಂತ ಶಿವಯೋಗಿಗಳು ಅವರು.......'

ಎನ್ನುತ್ತಲೇ ಅವಳು ಮೈಮರೆತಳು. ನಾಮಮಂತ್ರ ಅವಳನ್ನು ಸಮಾಧಿಯ ಸ್ಥಿತಿಗೆ ಕೊಂಡೊಯ್ಯಿತೋ ಏನೋ ! ಕೆಲಕಾಲ ಮೌನಳಾದಳು.

ತರುಣನ ತವಕ ತೀರದು. ಅಲ್ಲದೇ ಪಕ್ಕದಲ್ಲಿದ್ದ ಮಡದಿ ಆತನ ಕಿವಿಯಲ್ಲಿ ಏನೋ ಸೂಚಿಸಿದಳು. ಆಗ ಆತನ ಆತುರ ನೂರ್ಮಡಿಯಾಗಿ ಹೆಚ್ಚಿ ಕೇಳಿದ–

'ಅಜ್ಜಿ, ನೀವು ಅವರನ್ನು ನೋಡಿದ್ದೀರಾ ?'

'ನೋಡದೇ ಏನು ಮಗು ? ಅವರು ಅಗಲಿ ಅರವತ್ತು ವರ್ಷಗಳು ಆದವು. ನಾನಾಗ ಇಪ್ಪತ್ತು ವಯಸ್ಸಿನವಳು ಇದ್ದಿರಬಹುದು. ಅವರ ಅಂತ್ಯಯಾತ್ರೆಯನ್ನು ಇಲಕಲ್ಲಿನಲ್ಲಿ ಕಣ್ಣಾರೆ ಕಂಡಿದ್ದೇನೆ. ಆದರೂ ಈ ಪಾಪಿ ಶರೀರ ಇನ್ನೂ ಬದುಕಿದೆ ನೋಡು ಮಗು.........

- ಎನ್ನುತ್ತಲೇ ಅವಳ ಕಣ್ಣಲ್ಲಿ ನೀರು ಪಳಪಳನೇ ಉದುರಿದವು. ತರುಣ ಅಜ್ಜಿಯ ಭಾವಕ್ಕೆ ಮರಗುತ್ತ ಮೆಲ್ಲನೆ ಕೇಳಿದ–

'ಅಜ್ಜಿ, ಹಾಗಾದರೆ ಆ ಶಿವಯೋಗಿಗಳ ಜೀವನ ಚರಿತ್ರೆಯನ್ನು ನಮಗೆ ಹೇಳುವಿಯಾ ? ಅದನ್ನು ಕೇಳದ ಹೊರತು ನಮ್ಮ ಹಸಿವು ತೀರದು'

ಈ ಮಾತಿಗೆ ಅವಳು ಸುಮ್ಮನಾದಳು. ತಲೆಬಾಗಿ ಕುಳಿತಳು. ಮತ್ತೆ ಈತನೇ ಬಲವಂತಮಾಡಬೇಕಾಯಿತು. ಅಜ್ಜಿಯ ಬೆನ್ನು ತಟ್ಟಿ —

'ಹೂಂ....ಅಜ್ಜೀ....ಅಜ್ಜಿ....ಹೇಳು....ಹೇಳು....'

–ಎಂದ. ಆ ವೃದ್ಧ ಅಜ್ಜಿ ಕಕ್ಕಾವಿಕ್ಕಿಯಾದಳು. ಅವಳಲ್ಲಿ ಒಂದು ಬಗೆಯ ನಡುಗು ಉಂಟಾಯಿತು. ಅವಳ ದೇಹದಲ್ಲಿ ನವಿರು ತುಂಬಿತು. ಅಲುಗುವ ತುಟಿಗಳಿಂದ ಹೇಳಿದಳು.

"ಹುಚ್ಚಪ್ಪಾ, ನನ್ನನ್ನು ದಯಮಾಡಿ ಕಾಡಬೇಡಾ. ಆ ಮಹಾತ್ಮನ ನಾಮವನ್ನು ಉಚ್ಚರಿಸುವದೇ ಈ ದೇಹಕ್ಕೆ ಹಿಮಾಲಯ ಪರ್ವತವನ್ನು ಹೊತ್ತಂತೆ ಭಾರವಾಗಿದ. ಇನ್ನು ಆತನ ಜೀವನ ಕಥೆಯನ್ನು ಪೇಳಲು ನನ್ನಂಥ

ಬಡಪಾಯಿಗೆ, ಅಜ್ಜಿಗಿಗೆ ಸಾಮರ್ಥ್ಯ ಇದೆಯೆ ? ಬೇಡಪ್ಪಾ ಬೇಡ, ನನ್ನಿಂದ ಆಗದು. ನನ್ನಿಂದ ಆಗದು.''

ಆದರೆ ಆತುರತೆ ಯಾರನ್ನೂ ಎಂದಿಗೂ ಕೇಳದು. ಆ ತರುಣ ಹಟಕ್ಕೇ ನಿಂತ. ಅವನ ರಕ್ತ ರಕ್ತದಲ್ಲಿ, ರೋಮ ರೋಮದಲ್ಲಿ ಆತುರ ಅಧಿಕ ವಾಯಿತು. ಮತ್ತೆ ನಿರ್ಧಾರವಾಗಿ ಕೇಳಿದ --

''ನೋಡು ಅಜ್ಜಿ....ಆಗೊದಿಲ್ಲಾ.... ಎಂದು ನೀನು ಅಂದರೆ ನಾವು ಕೇಳುವವರಲ್ಲಾ. ನೀನು ಆ ಮಹಾತ್ಮರ ಚರಿತ್ರೆ ಹೇಳಿದರೇ ಪಾಡಾಯಿತು. ಇಲ್ಲವಾದರೆ ನಾವು ಅನ್ನ ಸಹ ಮುಟ್ಟುವದಿಲ್ಲ ನೋಡು'' ಎಂದು ವಾತ್ಸಲ್ಯ ದಿಂದ ಗದರಿಸಿದ.

ಆ ಯುವತಿಯೂ ಒಂದು ಹೆಜ್ಜೆ ಮುಂದುವರೆದು--

''ಅಜ್ಜೀ, ನಾನೂ ಹಾಗೇ ನೋಡು, ಬೇಗ ಹೇಳಿದೆಯಾ ಪಾಡಾಯಿತು. ನಮಗೆ ಆ ಶಿವಯೋಗಿಗಳ ಚರಿತ್ರೆಯ ಹೊರತು ಎಲ್ಲವೂ ಬೇಸರ ಅನಿಸಿದೆ. ಹೇಳು ಅಜ್ಜೀ....ಹುಂ....ಬೇಗ"

ಆ ವೃದ್ಧ ತಪಸ್ವಿಗೆ ಒಮ್ಮೆಲೇ ಮಹಾಪರ್ವತ ಮೇಲೆ ಬಿದ್ದಂತಾ ಯಿತು. ಅವಳ ನಾಮಸ್ಮರಣೆ ಈ ಸಲ ಅತ್ಯಂತ ಸ್ಪಷ್ಟವಾಯಿತು. ಕೈಮುಗಿದು ಪ್ರಾರ್ಥಿಸಿದಳು ---

"ವಿಜಯು ಮಹಾಂತೇಶಾ.... ಮಹಾಂತೇಶಾ.... ಎಂಥ ದೊಡ್ಡ ಪರೀಕ್ಷೆಯ ಕಾಲ ತಂದಿರುವಿ ತಂದೆ.... ಮಹಾಂತೇಶಾ.... ಮಹಾಂತೇಶಾ....! ವಿಜಯ ಮಹಾಂತೇಶಾ....!! ವಿಜಯ ಮಹಾಂತೇಶಾ....!!!''

ಅವಳ ಕಣ್ಣಲ್ಲಿ ನೀರು ಧಾರೆ ಧಾರೆಯಾಗಿ ಹರಿದವು. ಆ ಕಣ್ಣೀರುಗಳು ಕೂಡ ಕೂಗಿದವು—

"ವಿಜಯು ಮಹಾಂತೇಶಾ.... ಮಹಾಂತೇಶಾ....!!"

ಅವಳ ಆ ಕಣ್ಣೀರಿನ ಕೂಗು ಸಮಗ್ರ ಶಿವಯೋಗ ಮಂದಿರಕ್ಕೇ ಕೇಳಿತು. ಅದೂ ಕೂಡ ಕೂಗಿತು—

"ವಿಜಯು ಮಹಾಂತೇಶಾ....! ಮಹಾಂತೇಶಾ....!!''

ಕೂಗಿಗೆ ಮರುಕೂಗು ! ಮರುಕೂಗಿಗೆ ಪ್ರತಿ ಕೂಗು !!

ಎಲ್ಲೆಲ್ಲಿಯೂ ಕೂಗಿತು ಶಿವಯೋಗ ಮಂದಿರ—

"ವಿಜಯಮಹಾಂತೇಶಾ....!ಮಹಾಂತೇಶಾ....!!ಮಹಾಂತೇಶಾ...!!!"

ಅಲ್ಲಿಯ ಲತೆ–ಬಳ್ಳಿ–ಫಲ-ಪುಷ್ಪ-ಮರ-ಮುಗಿಲು....ಮಂದಮಾರುತ-ಪಕ್ಷಿಕುಲ–ಪ್ರಾಣಿಕುಲಗಳೆಲ್ಲಾ ಕೂಗಿದವು—

"ವಿಜಯಮಹಾಂತೇಶಾ....!ಮಹಾಂತೇಶಾ...!!ಮಹಾಂತೇಶಾ....!!!"

ಮಹಾತಾಯಿ ಮಲಪ್ರಭೆಯೂ ಅದಕ್ಕೆ ಪ್ರತಿಧ್ವನಿ ನೀಡಿದಳು. ಮಹಾ ಶಿವಯೋಗಿಯ ಕಥೆ ಅಮೃತದ ಗಂಗಾನದಿಯಂತೆ ಉಕ್ಕಿ ಹರಿಯಲು ಪ್ರಾರಂಭವಾಯಿತು! ಜೋಗದ ಜಲಪಾತದಂತೆ ಧೋ ಧೋ ಎಂದು ಸುರಿಯಲು ಆರಂಭವಾಯಿತು !!

# ಮರುಳಸಿದ್ಧರ ದಿವ್ಯ ಸೂಚನೆ

ಸಸಿವಾಳ, ಮೈಸೂರು ಆಳರಸರ ನೆಲೆವೀಡಾದ ಹಾಸನ ಜಿಲ್ಲೆಯಲ್ಲಿ ಒಂದು ಪುಟ್ಟಹಳ್ಳಿ. ಪ್ರಕೃತಿ ಮಾತೆಯ ಮಡಿಲಲ್ಲಿ ಮಲಗಿದ ಮುದ್ದು ಮಗುವಿನಂತೆ ಕಣ್ಣಿಗೆ ಸಕ್ಕರೆಯ ಚಿಟ್ಟಾಣಿಯಾಗಿ ಕಂಗೊಳಿಸಿದೆ. ಕಾರಣ, ಎಲ್ಲಿ ನೋಡಿದರೂ ತೆಂಗು-ಬಾಳೆ-ಅಡಿಕೆ-ಬತ್ತ-ಕಬ್ಬು-ಮಾವು-ಪೇರಲ-ನಿಂಬೆ-ಹಲಸು ಮೊದಲಾದ ಸಮೃದ್ಧ ಸಸ್ಯಗಳು ಸಸಿವಾಳವನ್ನು ಸೊಗಸುಗೊಳಿಸಿವೆ. ಪಶ್ಚಿಮ ಬೆಟ್ಟದ ನೈಸರ್ಗಿಕ ಝರಿಗಳು ಅಲ್ಲಿ ತುಂಬಿಬಂದು ಹಿಗ್ಗಿನಿಂದ ಮಡುಗಟ್ಟಿವೆ. ಅಲ್ಲಿಯ ವಿಸ್ತಾರವಾದ ಕೆರೆ; ನೀಲಕಮಲಗಳಿಂದ ಮಾಲೆ-ಯಿಂದ, ಬಿಳಿ ಕಮಲಗಳ ಕೂಟದಿಂದ ಮಾನಸ ಸರೋವರವನ್ನು ನೆನಪಿಗೆ ತರುತ್ತದೆ. ಸುತ್ತಲಿನ ಬೆಟ್ಟಗಳ ಬಂಡೆಗಲ್ಲುಗಳು ಭೀಮಾಕಾರದ ಲಿಂಗಗಳಂತೆ ಮುಗಿಲು ಮುಟ್ಟಿ ನಿಂತು ಈ ಗ್ರಾಮವನ್ನೇ ನೋಡುತ್ತಿವೆ. ಯಾವನೋ ಮಹಾಪುರುಷನ ಬರುವಿಗಾಗಿ ಹಂಬಲಿಸಿ ಹಾರೈಸಿ ಕೈಮುಗಿದು ನಿಂತಿವೆ. ಎತ್ತರದ ತೆಂಗುಗಳು ಶಿವಯೋಗಿಯ ದರ್ಶನಕ್ಕಾಗಿ ಕಲಶಾರತಿಯನ್ನು ಆಕಾಶಕ್ಕೆ ಎತ್ತಿ ಯುಗಯುಗಾಂತರಗಳಿಂದ ನಿಂತಿವೆ. ರಸಬಾಳೆಗಳು ತಮ್ಮ ಹೆಗ್ಗೊನೆಗಳನ್ನು ಚಾಚಿ ಪುಣ್ಯಪುರುಷನಿಗೆ ಅರ್ಪಿತವಾಗಿ ನಿಂತಿವೆ.

ಆ ಇಡಿಯ ಹಳ್ಳಿ ಒಂದು ಮಹಾಮಂತ್ರದಂತೆ ರಾಗರಹಿತವಾಗಿದೆ. ಬಾಲ್ಯ-ತಾರುಣ್ಯ-ಗೃಹಸ್ಥ-ಮುಪ್ಪಾವಸ್ಥೆಗಳೆಲ್ಲ ಅಲ್ಲಿ ಲಿಂಗ ಸಾಯುಜ್ಯದಿಂದ ತುಂಬಿನಿಂತಿವೆ. ಹಣೆಯ ತುಂಬ ಭಸ್ಮ ಧರಿಸಿದ ಸ್ತ್ರೀ ಪುರುಷರನ್ನು ಹುಡುಕಿದರೂ ಅಲ್ಲಿ ಸಿಗಲಿಕ್ಕಿಲ್ಲ. ಯಾರ ಬಾಯಲ್ಲೂ "ಶಿವಶಿವ" "ಹರಹರ" "ಬಸವಾ" "ಮಹಾದೇವಾ" ಎಂಬ ಉದ್ಗಾರಗಳು. ಎಲ್ಲರೂ ಪರಸ್ಪರ ಭೆಟ್ಟಿಯಾದಾಗ- "ಸ್ನಾನವಾಯಿತೆ", "ಲಿಂಗಪೂಜೆಯಾಯಿತೆ", "ಜಪಮುಗಿಯಿತೆ", "ಪ್ರಸಾದವಾಯಿತೆ" ಎಂದು ಶಿವಮಾರ್ಗದಲ್ಲೇ ಸಂಭಾಷಿಸುತ್ತಾರೆ. ಅಲ್ಲಿ ಲೌಕಿಕವು ಆಧ್ಯಾತ್ಮಕ್ಕೆ ಲಿಂಗವಾಗಿದೆ. ವ್ಯವಹಾರವು ಸತ್ಯ ನಿಷ್ಠೆಗೆ ಸೀಮಿತವಾಗಿದೆ. ಕೃಷಿ-ವ್ಯವಸಾಯಗಳು ಸತ್ಕ್ರಿಯಾಚರಣೆಯ ಕಾಯಕವಾಗಿವೆ. ಜೀವನವೇ ಮಹಾಜಂಗಮನ ಪ್ರಸಾದವಾಗಿದೆ. ಇವು ಮನೆಗಳೋ ಅಥವಾ ಮಠಗಳೋ ಎಂಬಂತೆ ಅಲ್ಲಿ ಪ್ರತಿಸಭ್ಯಗೃಹಸ್ಥರ ನಿಲಯ

ಗಳು ಪತ್ರಿಯ ಮರಗಳಿಂದ, ಕಣಗಿಲ–ಮಲ್ಲಿಗೆ–ಜಾಜಿ-ಸಂಪಿಗೆ ಮೊದಲಾದ ಪುಷ್ಪವೃಕ್ಷಗಳಿಂದ, ಶಿವಯೋಗಿಗಳ-ಸಿದ್ಧಶರಣರ ತೈಲಚಿತ್ರಗಳಿಂದ, ವಚನ–ಗಳ ಕೀರ್ತನಗಳಿಂದ ಕಂಗೊಳಿಸಿವೆ. ತುಂಬಿದ ಗರತಿ ತುಂಬಿದ ಕೊಡವನ್ನು ಹೊತ್ತು ತುಂಬಿ ಬಂದಂತೆ ಇಲ್ಲಿ ಸೌಂದರ್ಯ ಹಾಗೂ ಧರ್ಮಗಳು ತುಂಬಿ ತುಳುಕಿವೆ. ಅಷ್ಟಾವರಣಗಳು ಇಲ್ಲಿ ಪುಸ್ತಕದಲ್ಲಿ ಮಾತ್ರ ಉಳಿದಿಲ್ಲ. ಅಲ್ಲಿ ಜೀವಂತವಾಗಿ ಕಂಗೊಳಿಸಿವೆ. ಷಟ್‌ಸ್ಥಲಗಳು ಅವರ ಆತ್ಮವಾಗಿವೆ. ಪಂಚಾಚಾರಗಳು ಪ್ರಾಣವಾಗಿದೆ. ಹೆಚ್ಚಿಗೆ ಹೇಳುವದೇನು ಅಲ್ಲಿ ಪ್ರತಿಯೊಬ್ಬರೂ ಚಲಿಸುತ್ತಿರುವ ದೇವಾಲಯವಾಗಿದ್ದಾರೆ. ಮುಕ್ತಿಯ ಮಕ್ಕಳಾಗಿದ್ದಾರೆ. ಸತ್ಯದ ಸೋದರರಾಗಿದ್ದಾರೆ. ಸೌಂದರ್ಯದ ಆಳಿಯರಾಗಿದ್ದಾರೆ.

ಸಸಿವಾಳದ ಮಧ್ಯದಲ್ಲಿ ಒಂದು ಸುಂದರ ಮಠ. ಆದಕ್ಕೆ ತೀರ ಸಮೀಪದಲ್ಲೇ ಒಬ್ಬರು ಮಾಹೇಶ್ವರರ ಮನೆ. ಮಧ್ಯಾಹ್ನವಾದರೂ ಆ ದಿವಸ ಅವರ ಮನೆಯಲ್ಲಿ ಘಂಟಾನಾದ ನಿಂತಿಲ್ಲ, ಮಂಗಳಾರತಿಗಳ ಘೋಷ ಉಕ್ಕೇರಿದೆ. ಜನರು ಕಿಕ್ಕಿರಿದು ನೆರೆದಿದ್ದಾರೆ. ಇನ್ನು ಕೆಲವರು ಅವಸರ ಅವಸರದಿಂದ ಪೂರ್ಣ ಮಡಿಯಿಂದ ಬರುತ್ತಿದ್ದಾರೆ. ಊರಿಗೆ ಊರೇ ಅವರ ಮನೆಯ ಕಡೆಗೆ ಮುಖಮಾಡಿದಂತಿದೆ. ಆದರಲ್ಲಿ ಎಲ್ಲರೂ ಒಂದಿಲ್ಲೊಂದು ಪೂಜಾ ಕಾರ್ಯದಲ್ಲಿ ಓಡಾಡುತ್ತಿದ್ದಾರೆ ಆಗ ಕೆಲವರು— 'ಧೂಪ ತನ್ನಿರಿ'; 'ಅಭಿಷೇಕ ಕೂಡಿಸಿರಿ'; 'ದೀಪಕ್ಕೆ ಬತ್ತಿ ಚಾಚಿರಿ'; 'ತುಪ್ಪ ಹಾಕಿರಿ'; 'ಸ್ವಾಮಿಗಳ ಪಾದಪೂಜೆ ಸುರುವಾಗಲಿ': 'ಪ್ರಸಾದ ಸಿದ್ಧವಾಯಿತೆ'; 'ಅಕ್ಷತೆ ಇನ್ನೂ ಏಕೆ ಹಂಚಿಲ್ಲ'; 'ಸುಮಂಗಲೆಯರು ಆರತಿ ತುಂಬಿರಿ'; 'ಗಣಾರಾಧನೆ ಶಾಂತವಾಗಿ ನಡೆಯಲಿ'; 'ಮೊದಲು ಜಂಗಮ ತೃಪ್ತಿ ಆ ಮೇಲೆ ಭಕ್ತತೃಪ್ತಿ'; 'ಗುರುಗಳೇ ಕರುಣ ಪ್ರಸಾದ ನೀಡಿರಿ' 'ಗೌರಮ್ಮನವರೇ ಮೊದಲು ನೀವು ಕರುಣ ಪ್ರಸಾದ ಸ್ವೀಕರಿಸಿರಿ'; 'ವೀರಯ್ಯನವರೇ ನಂತರ ನಿಮ್ಮ ಸರದಿ'.... ಎಂದು ನುಡಿಯುತ್ತಿರುವ ಗಡಿಬಿಡಿಯ ಅನೇಕ ಮಾತುಗಳು ಕೇಳಿಬರುತ್ತಿದ್ದವು.

ಹೌದು, ಅದು ಕೊಳಗಲ್ಲಮಠ ವೀರಯ್ಯನವರ ಮನೆ. ಅವರ ಧರ್ಮ-ಪತ್ನಿ ಗೌರಮ್ಮನವರು ಹೆಸರಿಗೆ ತಕ್ಕಂತೆ ಗೌರಮ್ಮನವರು. ಅವರಿನ್ನೂ ನಡು ಹರೆಯದ ದಾಂಪತ್ಯದಲ್ಲಿ ಇದ್ದರೂ ಊರಿನ ಜನ 'ಅಜ್ಜಯ್ಯಗಳ ಮನೆ' ಎಂದು ಭಕ್ತಿಯಿಂದ ಸಂಬೋಧಿಸುತ್ತಿದ್ದರು. ಗೌರಮ್ಮನವರು ಎಲ್ಲರ ಬಾಯಲ್ಲಿ

'ಮಠದವ್ವ' ಆಗಿದ್ದರು. ಅವರ ಮನೆಯೇ ಮಠವಾಗಿತ್ತು. ಅವರ ಸಂಸಾರ ದಾನಧರ್ಮ–ವ್ರತಾಚರಣೆ–ಪೂಜಾಸಮಾರಂಭ–ಸ್ವಾಮಿಗಳ ಜಂಗಮರ ಆರಾಧನೆಗಳಾಗಿಯೇ ಕರಾರುವಾಕ್ಕಾಗಿ ಕಾಗದಪತ್ರ ಮಾಡಿಕೊಂಡು ಸುರುವಾದಂತೆ ಇತ್ತು. ಅವರದು ಸಂಸಾರಕ್ಕಾಗಿ ಸಂಸಾರವಲ್ಲ, ಸನ್ಯಾಸಕ್ಕಾಗಿ ಸಂಸಾರ ಎಂದು ಜನರು ಹೇಳುತ್ತಿದ್ದರು. ಇನ್ನು ಕೆಲವರು ಸಹವಯಸ್ಸಿನ ಸಖಿಯರು ಗೌರಮ್ಮನಿಗೆ ಆತ್ಮೀಯತೆಯ ಚುಚ್ಚು ಮಾತಿನಿಂದ—

"ಗೌರಮ್ಮ ನಿನ್ನ ವ್ರತಾ ಜಪಾ ಕೆಲಕಾಲ ಬಂದು ಮಾಡು. ಇಬ್ಬರನ್ನೇ ಹಡೆದು ಕುಳಿತು ಬಿಟ್ಟೆ. ಅಷ್ಟೇ ಸಾಕಾಯಿತೇ ? ಮನೆತುಂಬ ಏಳೆಂಟಾದರೂ ಬೇಡವೇ ? ನಿನ್ನ ಮನೆಯಲ್ಲಿ ನಾವು ತೊಟ್ಟಿಲ ಪಾಯಸ ಮತ್ತೆ ಎಂದು ಉಣ್ಣುವದು ? "

ಎಂದು ಚೇಷ್ಟೆ ಮಾಡುತ್ತಿದ್ದರು, ಅವಳು ಗಾಂಭೀರ್ಯ ಬೆರೆತ ನಾಚಿಕೆಯಿಂದ— 'ಹಾಗೇ ಆಗಲಿ ಬಿಡಿರಿ–ಆ ಭಗವಂತನ ಇಚ್ಛೆ ಇದ್ದರೆ' ಎಂದು ಅನ್ನುತ್ತಿದ್ದಳು. ಅದಕ್ಕೆ ಅವರು ಮಾರುತ್ತರವಾಗಿ 'ಮೊದಲು ನಿನ್ನ ಇಚ್ಛೆ ಏನು ಹೇಳು ? ' ಎಂದು ಮತ್ತೆ ಕೆಣಕುತ್ತಿದ್ದರು. ಅವಳು ಸ್ವಲ್ಪ ಹುಸಿ ಮುನಿಸಿನಿಂದ 'ಅವನದೇ ನನ್ನದು' ಎಂದು ಹೇಳಿ ಅಲ್ಲಿಂದ ಜಾರಿಬಿಡುತ್ತಿದ್ದಳು.

ಗೌರಮ್ಮನಿಗೆ ಒಬ್ಬಳು ಹಿರಿಯಮಗಳು, ಹಿಂದಿನ ವರುಷವೇ ಅವಳಿಗೆ ಮದುವೆಯಾಗಿದೆ. ಪತಿಗೃಹಕ್ಕೆ ಹೋಗಿದ್ದಾಳೆ. ಎರಡನೇಯವ ನಾಲ್ಕು ವರುಷದ ಬಸವಲಿಂಗಯ್ಯ.‡ ನೋಡಲಿಕ್ಕೆ ಮುದ್ದಾಗಿದ್ದಾನೆ. ಇಬ್ಬರೇ ಮಕ್ಕಳೆಂದರೆ ಎಷ್ಟು ಅಪಮಾನ ? ಹನ್ನೆರಡಾದರೂ ಬೇಡವೆ ? ಆದರೆ ವೀರಯ್ಯ ಗೌರಮ್ಮನವರ ಸಂಬಂಧವೆಂದರೆ ಮಜ್ಜಗೀ ಪೂರ್ತೇ ಸಂಸಾರವಾದಂತಾಗಿತ್ತು.

---

‡ ಬಸವಲಿಂಗಯ್ಯ :— ಇವರಿಗೆ ಮುಂದೆ ವೀರಣ್ಣಯ್ಯನೆಂಬ ಮಗ ಜನಿಸುತ್ತಾನೆ. ಈ ವೀರಣ್ಣಯ್ಯನವರ ಮಗ ಮರುಳಸಿದ್ದಯ್ಯ, ಮರುಳಸಿದ್ದಯ್ಯನವರ ಮಗನಿಗೆ ವಿಜಯಮಹಾಂತೇಶ್ವರರ ನೆನಪಿಗಾಗಿ ಹಾನಗಲ್ಲ ಕುಮಾರಸ್ವಾಮಿಗಳ ಮುನ್ಸೂಚನೆಯಂತೆ ಮಹಾಂತೇಶ ಎಂದು ನಾಮಕರಣ ಮಾಡುತ್ತಾರೆ. ಈ ಮಹಾಂತೇಶನೇ ಇಂದು ಹುಬ್ಬಳ್ಳಿ ಮೂರುಸಾವಿರ ಮಠದ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳಾಗಿ ವಿರಾಜಿಸುತ್ತಿದ್ದಾರೆ.

ಅವರ ಬಹುಕಾಲವೆಲ್ಲಾ ಲಿಂಗಪೂಜೆ, ವ್ರತಾಚರಣೆ, ಜಪಾನುಷ್ಠಾನ ಗುರು ಸೇವೆ ಜಂಗಮಾರಾಧನೆ ಗಣಾರಾಧನೆಗಳಲ್ಲಿ ತೊಡಗಿರುವುದು ಹೆಚ್ಚು !

ಆ ದಿವಸ ಅವರ ಮನೆಯಲ್ಲಿ ವೈಭವಕ್ಕೆ ಕಾರಣವೆಂದರೆ, ಆ ದಂಪತಿಗಳ ಬಹುದಿನಗಳ ಬಯಕೆ ಅರಳಿ ಹೂವಾದಂತೆ ನಿಡುವಳ್ಳಿಯ ಮರುಳಸಿದ್ಧ ಶಿವಯೋಗಿಗಳು ದಯಮಾಡಿಸಿದ್ದಾರೆ, ಅವರು ಸಾಮಾನ್ಯರಲ್ಲ.

ಮರುಳಸಿದ್ಧ ಶಿವಯೋಗಿಗಳ ಪಾದಪೂಜೆ ವೈಭವದಿಂದ ಜರುಗಿತು. ಅವರ ಪಾದತೀರ್ಥವನ್ನು ನಾ ಮುಂದೆ ನೀ ಮುಂದೆ ಎಂದು ಭಕ್ತಸಮೂಹ ಸ್ವೀಕರಿಸಿತು. ಬಡವರ ಮನೆಯಾದರೂ ಬಡತನಕ್ಕೆ ಇಂಬಿಲ್ಲವೆಂಬಂತೆ ವೀರಯ್ಯನವರ ಮನೆಯಲ್ಲಿ ಬಹುದೊಡ್ಡ ಆರಾಧನೆ ಜರುಗಿತು. ಮರುಳಸಿದ್ಧ ಶಿವಯೋಗಿಗಳು ಈ ದಂಪತಿಗಳ ಅಗಾಧ ಸಂಸಾರ ಧರ್ಮವನ್ನು ಕಂಡು ದಿಙ್ಮೂಢರಾಗಿ ಹೋದರು. ಭವಿಷ್ಯದಲ್ಲಿ ನಡೆಯುವ ಏನೋ ಅದ್ಭುತವೊಂದನ್ನು ಸೂಚಿಸುವಂತೆ ಅವರು ಹೊರಡುವ ಮುನ್ನ 'ಆಗಲಿ ತಾಯೀ, ಇನ್ನು ನಾನು ಇಲ್ಲಿಯೇ ಇರುವದು. ಇದು ಶಿವನು ಹುಡುಕಿದ ಮನೆ' ಎಂದು ಹೇಳಿ ನಡೆದರು. ಅವರ ಮಾತು ಯಾರಿಗೂ ಅರ್ಥವಾಗಲಿಲ್ಲ. ಆದರೆ ಏನೋ ದಿವ್ಯ ಸೂಚನೆ ಇರಬಹುದೆಂದು ತಮ್ಮ ಮುಗ್ಧ ಭಕ್ತಿಯಿಂದ ತರ್ಕಿಸಿದರು.

ಅದೇ ದಿನ ರಾತ್ರಿ ! ಮಧ್ಯರಾತ್ರಿಯ ಸಮಯ ದಾಟಿದೆ. ಪೂರ್ವದಿಕ್ಕಿನ ಗಾಳಿ ಚಂದನವನದಿಂದ ಹಾಯ್ದು ಮೆಲ್ಲನೇ ಬೀಸುತ್ತಿದೆ. ಬ್ರಾಹ್ಮೀ ಮುಹೂರ್ತವೆಂದು ತೋರುತ್ತದೆ. ಗೌರಮ್ಮ ಒಂದು ಅಭೂತಪೂರ್ವ ಕನಸು ಕಂಡಳು. ಬಹುದೂರ ಆಕಾಶದಲ್ಲಿ ಬೆಳ್ಳೀ ಪರ್ವತವು ಹೊಳೆಯು ತ್ತಿದೆ. ಅಲ್ಲಿಂದ ಬಿಳಿಯ ವರ್ಣದ ಭವ್ಯ ಆನೆಯೊಂದು ಕೊರಳಗಂಟೆಯ ಅಮೃತನಾದವನ್ನು ಬೀರುತ್ತ, ಸೊಂಡಿಲನ್ನು ಬೆಡಗಿನಿಂದ ಅಲ್ಲಾಡಿಸುತ್ತ ಆಕಾಶಮಾರ್ಗವಾಗಿ ಉಲ್ಲಾಸದಿಂದ ಇತ್ತಲೇ ಬರುತ್ತಿದೆ. ಒಮ್ಮೆಲೇ ಗೌರಾದೇವಿ ಬೆಚ್ಚಿಬಿದ್ದಳು. ಆದರೂ ಅದು ಮತ್ತೆ ಮತ್ತೆ ಮೇಲೇರಿ ಬರುತ್ತಿದೆ. ಗೌರಮ್ಮ ಭಯಭೀತಳಾಗಿ ಓಡಲು ಹೋದಳು. ಆದರೆ ಅವಳ ಕೈಕಾಲುಗಳು ಕೂದಲು ಎಳೆಯಷ್ಟು ಕದಲಲಿಲ್ಲ. ಪರ್ವತಾಕಾರದ ಆನೆ ಅವಳ ಮೈಮೇಲೆಯೇ ಬರುತ್ತ, ಕ್ರಮೇಣ ಗಾತ್ರವಲ್ಲಿ ಚಿಕ್ಕವಾಗುತ್ತ ಬಂತು, ಕೊನೆ ಕೊನೆಗೆ ತೀರ ಚಿಕ್ಕದಾಗಿ ಅವಳ ಗರ್ಭವನ್ನು ಪ್ರವೇಶಿಸಿತು.

ಆವಳಿಗೆ ಫಕ್ಕನೇ ಎಚ್ಚರವಾಯಿತು. ಮಗ್ಗುಲಲ್ಲಿದ್ದ ಪತಿ ವೀರಯ್ಯನವರನ್ನು ಎಬ್ಬಿಸಿ ತನ್ನ ಕನಸಿನ ವೃತ್ತಾಂತವನ್ನು ಅರುಹಿ, ಇದರ ಮರ್ಮವೇನೆಂದು ಕೇಳಿದಳು. ಮೊದಮೊದಲು ಅವರೂ ಆಶ್ಚರ್ಯಭರಿತರಾಗಿ ಬಾಯಿ ಬಿಚ್ಚಲಿಲ್ಲ. ಗಂಭೀರಮೌನದಿಂದ ಚಿಂತಿಸಿದರು. ಕೊನೆಗೆ ಮೆಲ್ಲನೇ ಬಾಯ್ದೆರೆದು—

' ತಿಳಿಯಿತು. ಮರುಳಸಿದ್ಧ ಶಿವಯೋಗಿಗಳು ನಿನ್ನೆ ನಮ್ಮನ್ನು ಅಗಲುವಾಗ ಏನು ಹೇಳಿದರು ನೆನಪಿದೆಯೇ ? ' ಎಂದರು.

ಅದಕ್ಕೆ ಗೌರಮ್ಮ ಕೇಳಿದಳು—

' ಏನು ಹೇಳಿದರು ? '

' ಇದು ಶಿವನು ಹುಡುಕಿದ ಮನೆ ಎಂದು ಅನ್ನಲಿಲ್ಲವೇ ? '

' ಹೌದು. ಅಂದರು. ಆದರೆ ಅದಕ್ಕೂ ನನ್ನ ಕನಸಿಗೂ........? '

' ಏನು ಸಂಬಂಧವೆಂದು ಕೇಳುತ್ತೀಯಲ್ಲವೆ ? ಅದರ ಅರ್ಥವೇ ಈ ಕನಸು ತಿಳಿಯಿತೇ ? '

' ಇಲ್ಲ.... ಹಾಗೆಂದರೇನು ? ಬಿಚ್ಚಿ ಹೇಳಬಾರದೇ ? '

' ಇದು ನಮ್ಮ ಮುಂದಿನ ಸಂತಾನಕ್ಕೆ ಸೂಚನೆಯಲ್ಲವೇ ಹುಚ್ಚಿ ? '

— ಎಂದು ವೀರಯ್ಯನವರು ಉದ್ಗಾರ ತೆಗೆದರು. ' ಸಂತಾನ ' ಎಂಬ ಹೆಸರು ಆವರ ಬಾಯಲ್ಲಿ ಬಂದೊಡನೇ ಗೌರಾದೇವಿ ಮಹಾ ನಾಚಿಕೆಯಿಂದ ತಲೆಬಾಗಿದಳು. ವೀರಯ್ಯನವರೂ ಹೆಂಡತಿಯ ಭಾವವನ್ನು ಗ್ರಹಿಸಿ, ಗಾಂಭೀರ್ಯದಿಂದ ಮುಗುಳುನಗೆಗೆ ಇಳಿದರು.

# ಮುಳೆಯಪ್ಪಾರ್ಯನ ಅವತಾರ

ಶಿವಯೋಗಿಗಳು ಆಡಿದ ಮಾತು ಸುಳ್ಳಾದೀತೆ? ಈಗ ಗೌರಮ್ಮ ತುಂಬ ಗರ್ಭಿಣಿ. ಮಹಾಮಂತ್ರದಿಂದ ಮೈದುಂಬಿ ಕಾಣುತ್ತಿದ್ದಾಳೆ. ಅವಳ ಬಣ್ಣ ಯೋಗಿಗಳ ಹೊಂಬಣ್ಣಕ್ಕೆ ತಿರುಗಿದೆ. ಕೇಶರಾಶಿ ಅಂಗತೇಜದಿಂದ ಗರಿಗಟ್ಟಿದೆ. ಅವಯವಗಳು ಸಂತೃಪ್ತ ಜಂಗಮನ ಸುಖದ ಸೌಭಾಗ್ಯ ವನ್ನು ನೆನಪಿಗೆ ತರುತ್ತವೆ. ಕಣ್ಣುಗಳು ನಿದ್ರಾಮಗ್ನವಾಗದೇ ಧ್ಯಾನಮಗ್ನ ವಾಗಿವೆ. ಮಾತುಗಳು ಜ್ಞಾನವೇದವಾಗಿವೆ. ನಡೆ ಮಂದವಾದರೂ ಕಾಯಕದ ಬೆಡಗಿನಿಂದ ಕೂಡಿದೆ

ಬಯಕೆ ಇಲ್ಲದ ಗರ್ಭಿಣಿ ಎಂದಾದರೂ ಭೂಮಿಯ ಮೇಲೆ ಇದ್ದಾ ಳೆಯೇ? 'ಬಯಕೆ ಬರುವದರ ಕಣ್ಣಿನ್ನೆ ಕಾಣೊ' – ಎಂದು ದಾರ್ಶನಿಕ ಕವಿ ಹೇಳಲಿಲ್ಲವೇ? ಅನೇಕರಿಗೆ ಅನೇಕ ಬಗೆಯ ಬಯಕೆ.

ಗೌರಮ್ಮನಿಗೇನು ಬಯಕೆ ಇಲ್ಲವೇ? ಅವಳಿಗೂ ನೂರಾರು ಬಯಕೆ ಗಳು ನಾ ಮುಂದೆ ತಾ ಮುಂದೆಯೆಂದು ಭೋರಾಡಿ ಬಂದವು. ಆದರೆ ಅವು ಗಳ ಗುಣಸ್ವರೂಪವೇ ಬೇರೆ. ಅವಳಿಗೆ ಶಿವಯೋಗಿಗಳ ದರ್ಶನದ ಬಯಕೆ, ವಚನಾಮೃತವನ್ನು ಕೇಳುವ ಬಯಕೆ. ಮಹಾಜಂಗಮರ ಕರುಣ ಪ್ರಸಾದ ವನ್ನು ಸೇವಿಸುವ ಬಯಕೆ, ತೀರ್ಥಕ್ಷೇತ್ರಗಳಿಗೆ ಹೋಗಿ ತೀರ್ಥಸ್ನಾನಗೈಯುವ ಬಯಕೆ, ಯಾವತ್ತೂ ಭಸ್ಮ ರುದ್ರಾಕ್ಷಿಗಳನ್ನು ಧರಿಸುವ ಬಯಕೆ, ಪಂಚಾಕ್ಷ ರೀಯ ಜಪವನ್ನು ಎಡಬಿಡದೇ ಗುಣಿಸುವ ಬಯಕೆ.

ಗರ್ಭದಲ್ಲಿರುವ ಶಿಶುವಿಗೆ ಕೊರತೆಯಾದುದು ತಾಯಿಯಲ್ಲಿ ಬಯಕೆ ಯಾಗಿ ಚಿಮ್ಮುತ್ತಿದೆ. ಗೌರಮ್ಮತಾಯಿಯ ಗರ್ಭವೇ ಒಂದು ನಿರ್ವಿಕಲ್ಪ ಸಮಾಧಿಯಂತೆ. ಅದು ಮಂತ್ರಗೋಪ್ಯವಾಗಿದೆ. ಅದಕ್ಕೆ ರಾಗ-ದ್ವೇಷಗಳ ಲೇಪವಿಲ್ಲ. ಮಲತ್ರಯಗಳ ಬಾಧೆಯಿಲ್ಲ, ಅದು ಪವಿತ್ರಗರ್ಭ, ಲಿಂಗಕ್ಕೂ ಅದಕ್ಕೂ ವ್ಯತ್ಯಾಸವೇ ಇಲ್ಲ. ಗರ್ಭವತಿಯಾದ ಮಹಿಳೆ ಅನುಭವಿಸುವ ಮಾಂದ್ಯ, ಭಾರತೆ, ನಿದ್ರಾಪರತೆ, ಉಲ್ಬಣ ವ್ಯಾಧಿಗಳನ್ನು ಆ ಮಹಾತಾಯಿ ಅನುಭವಿಸಲೇ ಇಲ್ಲ. ಅವಳು ಲಿಂಗಪೂಜೆಗೆ ಕುಳಿತಾಗ ಗರ್ಭದಲ್ಲಿಯೂ ಪೂಜೆ ನಡದಂತೆ ಭಾಸ. ರುದ್ರಾಕ್ಷಿ ಮಾಲೆಯನ್ನು ಬೆರಳಲ್ಲಿ ಹಿಡಿದು ಮಂತ್ರ

ಗಳನ್ನು ಪಠಿಸುವಾಗ ಗರ್ಭವೂ ನಾದಮಯವಾಗಿ ಉಕ್ಕುತ್ತಿತ್ತು. ಇದೇನಾಶ್ಚರ್ಯ ?

ದಿನಗಳು ಕಳೆದವು. ಎಂಟು ತಿಂಗಳ ಗರ್ಭವತಿಯಾದಾಗ ಗೌರಮ್ಮನಿಗೆ ಮಹಾಸಂಕಟ ಪ್ರಾರಂಭವಾಯಿತು. ಯಾವ ವೈದ್ಯರಿಂದಲೂ ಗುಣ ಕಾಣಲಿಲ್ಲ. ಅದಕ್ಕೆ ಭವರೋಗ ವೈದ್ಯರಾದ ಜಂಗಮರೇ ಬರಬೇಕಾಯಿತು. ಜಂಗಮರಿಂದ ಗರ್ಭಕ್ಕೆ ಲಿಂಗಧಾರಣೆ ನಡೆಯಿತು. ತಕ್ಷಣವೇ ಅವಳಲ್ಲಿ ಶಾಂತಿ-ಆನಂದ ಸೌಖ್ಯಗಳು ಹೆಚ್ಚಳಗೊಂಡವು, ಶಾಲಿವಾಹನ ಶಕೆ : ೧೭೭೨-ಸಾಧಾರಣನಾಮ ಸಂವತ್ಸರ ; ಜೇಷ್ಠ-ಕೃಷ್ಣ, ಷಷ್ಠಿ : ಭಾನುವಾರ ಕ್ರಿಸ್ತಾಬ್ಧ ೧೮೫೦ರಂದು ಪತಿಯೊಡನೆ ಶಿವಾರ್ಚನೆಗೆ ಕುಳಿತ ಗೌರಮ್ಮ, ತಕ್ಷಣ ಪೂಜೆ ಪೂರೈಸಿ ಪ್ರಸೂತಿ ಕೋಣೆಗೆ ಬಂದಿದ್ದಾರೆ.

ಮಹಾಪುರುಷನ ಅವತಾರಕ್ಕೆ ಹೆಚ್ಚು ಸಮಯ ಬೇಕಾಗಿರಲಿಲ್ಲ. ನೆರಮನೆಯ ಮುತ್ತೈದೆಯರು ಆಗಲೇ ಸುದ್ದಿ ತಿಳಿದು ಆತುರದಿಂದ ಓಡಿಬಂದರು. ವೀರಯ್ಯನವರು ಗಂಭೀರತೆಯಿಂದ, ಚಲವಿಚಲಿತರಾಗದೆ, ಪೂಜೆಗೈದು, ಮಂಗಳಾರತಿ ಹಾಡುತ್ತಿದ್ದಾಗ ಪಕ್ಕದ ಮನೆಯ ಪಾರ್ವತಿ ಕೋಣೆಯಿಂದ ಭರ್ರನೇ ಶಿವಪೂಜಾಮಂದಿರಕ್ಕೆ-- ಬಂದು 'ಕಕ್ಕಯ್ಯನವರೇ ಗಂಡು'ಎಂದಳು!

ಪುತ್ರೋತ್ಸವದ ಸಂಭ್ರಮದಲ್ಲಿ ಹನ್ನೆರಡು ದಿನಗಳು ಜಾರಿದ್ದೇ ಗೊತ್ತಾಗಲಿಲ್ಲ. ದಂಪತಿಗಳು ಊರಲ್ಲಿ ಎಲ್ಲರಿಗೂ ಬೇಕಾದವರಾದ್ದರಿಂದ ಊರಿನ ಸಮಸ್ತ ಜನರೂ ಇವರ ಆನಂದದಲ್ಲಿ ಪಾಲುಗೊಂಡರು. ಹನ್ನೆರಡನೆಯ ದಿನ ಆ ಊರ ಮುತ್ತೈದೆಯರು ಪೀತಾಂಬರಧಾರಿಗಳಾಗಿ ಬಂದರು. ಇದೇನು ವೀರಯ್ಯನವರ ಮನೆಯಲ್ಲಿ ಮತ್ತೊಂದು ಮದುವೆಯೋ ಎಂದು ಕೇಳುವಂತೆ ಜನಸಂದಣಿ. ಅವರೆಲ್ಲರೂ ತಾವು ಒಬ್ಬ ಮಹಾಪುರುಷನಿಗೆ ಇಂದು ಹೆಸರಿಡಲು ಬಂದಿದ್ದೇವೆ ಎಂದು ತಿಳಿಯರು. ಕಾಲಪುರುಷನ ರಹಸ್ಯವೇ ಅದ್ಭುತವಲ್ಲವೇ? ಈತ ಮುಂದೆ ಕೋಟ್ಯಂತರ ಜನರ ಕಂಗಳನ್ನು ತೆರೆಸಿ, ದೇವಜಂಗಮನಾಗಿ, ಜಗತ್ಪುಂಗವನಾಗಿ, ಪವಾಡಪುರುಷನಾಗಿ, ಉಗ್ರಶಿವಯೋಗಿಯಾಗಿ, ಜಾಗ್ರತ ಚೈತನ್ಯನಾಗಿ, ಅಪೂರ್ವ ಪೀಠಾಚಾರ್ಯನಾಗಿ ಮೆರೆಯುತ್ತಾನೆಂದು ಪಾಪ ಆ ಅಜ್ಞ ಮಹಿಳೆಯರಿಗೆ ಏನು ಗೊತ್ತು ? ಕಾಲಪುರುಷನೇನಾದರೂ ಅವರಿಗ ಪೂರ್ವಸೂಚನೆ ಕೊಟ್ಟಿದ್ದರೆ ಅವರು ಇನ್ನೂರು ಮಡಿ ಹಿಗ್ಗಿ, ಆರು

ವೈರಿಗಳನ್ನು ವಿಜಯಗೈದ ವಿಜಯನ ಅನಾದಿ ಅನಂತನಾದ ಮಹಾಂತನ ಹೆಸರನ್ನೇ ಇಡುತ್ತಿದ್ದರೋ ಏನೋ! ಆದರೆ ಆ ಗ್ರಾಮಗಳಲ್ಲಿ ತೀರ ಸಾಮಾನ್ಯವಾದ ಹೆಸರನ್ನೇ ಆ ಮಗುವಿಗೆ ಆರಿಸಿ ಇಟ್ಟರು. ಅದೇ ‘ಮಳೆಯಪ್ಪಯ್ಯ ಎಂದು! ಯಾವ ಮಳೆಗೆ, ಯಾವ ಹೊಳೆಗೆ, ಯಾವ ಯಾವ ಬೆಳೆಗೆ ಯಾವನು ಮೂಲಪುರುಷನೋ ಅವನ ಹೆಂಗಳೆಯರ ಕೈಯಲ್ಲಿ ಸಿಕ್ಕು ಕೇವಲ ಮಳೆಯಪ್ಪನಾದ!! ಈ ಮಾತು ಆಶ್ಚರ್ಯವೇನೂ ಅಲ್ಲ. ಕಾರಣ ಸೊಲ್ಲಾಪೂರದ ಯಾವ ಸಿದ್ಧರಾಮನು ಮಹಾಯೋಗಿಯಾಗಿ, ಮಾನವ ಮೊದಲಾಗಿ ಪಶು ಪಕ್ಷಿಗಳಿಗೂ ಆಶ್ರಯ ಒದಗಿಸಿದ್ದನೋ, ಶಿವನಂತೆ ಮೂರನೆಯ ಕಣ್ಣು ಪಡೆದಿದ್ದನೋ ಅವನಿಗೆ ಬಾಲ್ಯದಲ್ಲಿ ‘ಧೂಳಿಮಾಕಾಳ’ ಎಂದು ಹೆಸರು ಇಡಲಿಲ್ಲವೇ? ಅಂತೂ ಸಸಿವಾಳದಲ್ಲಿ ಮಗುವಿನ ರೂಪದ ವಜ್ರವೊಂದು ಪ್ರಕಟವಾಯಿತ!

## ಕಲ್‌ಬೆಟ್ಟಕ್ಕೆ ಪ್ರಯಾಣ

### ಹೋಗಬೇಡಾ ಹೋಗಬೇಡಾ........!

ಮಳೆಯಪ್ಪನಲ್ಲಿ ತಾಯಿಯ ಅಪಾರವಾದ ಭಕ್ತಿ, ಕರುಣೆ, ವಾತ್ಸಲ್ಯ, ವಿನಯ, ಔದಾರ್ಯ ಸೌಕುಮಾರ್ಯತೆಗಳು ಹಾಗೂ ತಂದೆಯ ಗಾಂಭೀರ್ಯ, ಉಗ್ರನಿಷ್ಠೆ, ಹಠಸಾಧನೆ, ಎದೆಗಾರಿಕೆ, ಆತ್ಮನಿಷ್ಠುರತೆ, ವೀರಪಾಡಿವಂತಿಕೆಗಳು ಮನೆಮಾಡಿಕೊಂಡವು.

ಆರು ವರ್ಷಗಳು ಕಳೆದವು. ಆಗಲೇ ಮರುಳಸಿದ್ಧ ಸ್ವಾಮಿಗಳು ಲಿಂಗೈಕ್ಯರಾಗಿ ಬಹು ದಿನಗಳಾಗಿವೆ. ಮಗುವಿನ ದೀಕ್ಷಾ ಸಂಸ್ಕಾರಕ್ಕಾಗಿ ವೀರಯ್ಯನವರು ಕೆ.ಬಿದರೆಯ ಹಿರಿಯಮಠದ ಪಟ್ಟಾಚಾರ್ಯರಾದ ಪ್ರಭು ಸ್ವಾಮಿಯವರಲ್ಲಿ ಪ್ರಾರ್ಥಿಸಿದರು. ಸ್ವಾಮಿಗಳು ಈ ಕಾರ್ಯಕ್ಕೆ ಹಾರ್ದಿಕ ವಾಗಿ ಒಪ್ಪಿಕೊಂಡರು. ವಿಚಿತ್ರ ಸಂಗತಿಯೆಂದರೆ ದೀಕ್ಷಾ ಸಂಸ್ಕಾರವು ಕೆ. ಬಿದರೆ ಯಲ್ಲಿ ನಡೆಯದೇ ನಿಡುವಳ್ಳಿಯ ಮರುಳಸಿದ್ಧ ಶಿವಯೋಗಿಗಳ ಮಠ ದಲ್ಲಿಯೇ ನಡೆಯಿತು. ಪ್ರಭುಸ್ವಾಮಿಗಳು ಅನೇಕ ದೀಕ್ಷಾಸಂಸ್ಕಾರಗಳನ್ನು ನೆರವೇರಿಸಿದ್ದರು; ಬಾಲಕ ಮಳೆಯಪ್ಪನ ಮುದ್ದುಮುದ್ದಾದ ಮುಖಚರ್ಯ ಕಂಡು ಏನೋ ದುಗುಬಡಿವವರಂತೆ ಒಂದು ಸಲ ವೀರಯ್ಯನವರಿಗೆ ನಿರ್ಧಾರ ವಾಗಿ ಹೇಳಿಬಿಟ್ಟರು—

'ವೀರಯ್ಯನವರೇ, ನಾನು ಅನೇಕ ಬಾಲಕರಿಗೆ ದೀಕ್ಷೆ ಇತ್ತಿದ್ದೇನೆ. ಈತನಲ್ಲಿ ಏನೋ ಗುಣವಿಶೇಷವಿದೆ. ಆದರೆ ಅದನ್ನು ಹೇಳಲು ನನಗೇ ಸಾಧ್ಯವಾಗದು. ಇವನನ್ನು ಮುಂದೆ ಎಲ್ಲಿಯಾದರೂ ಸಂಸ್ಕೃತ ಪಾಠಶಾಲೆಗೆ ಕಳಿಸಿಕೊಡಿರಿ. ಅತ್ತ ಹೋದರೆ ಅತ್ತ ಹೋಗಲಿ, ಇತ್ತ ಬಂದರೆ ಇತ್ತ ಬರಲಿ' ಎಂದರು.

ದೀಕ್ಷೆಯಾದ ಮೇಲೆ ಬಾಲಕನಲ್ಲಿ ವಿಚಿತ್ರವಾದ ಬದಲಾವಣೆಗಳು ಗೋಚರವಾಗತೊಡಗಿದವು, ಆಟಕ್ಕಿಂತ ಏಕಾಂತ ಅವನನ್ನು ಸೆರೆಹಿಡಿಯಿತು. ಹಿಂದೆ ಗೆಳೆಯರೊಂದಿಗೆ ಆಡಿದ ಗುಂಡು-ಗಜಗ-ಮೊದಲಾದ ಆಟಗಳು ಹುರು ಳಿಲ್ಲದ ಮರುಳತನವೆಂದು ತನಗೆ ತಾನೇ ನಗುತ್ತಿದ್ದ. ಅವನಿಗೆ ಏನೋ

ಒಂದು ಬಗೆಯ ಅಂತರಂಗದ ಹಸಿವೆ. ಆದರೆ ಅದು ಎಂಥ ಹಸಿವೆಯೆಂದು ಆತನಿಗೇ ತಿಳಿಯದು. ಒಮ್ಮೊಮ್ಮೆ ಹುಚ್ಚನಂತಾಗುತ್ತಾನೆ. ಮತ್ತೊಮ್ಮೆ ಊರ ಹಿರಿಯ ಮಠದ ಪತ್ರಿಯ ವನದಲ್ಲಿ ಕೆಲಕಾಲ ಕಳೆಯುತ್ತಾನೆ. ಬಸವಣ್ಣ ದೇವರ ಜಾತ್ರೆ, ನಂದಿಯ ಕೋಲು, ಮೆರವಣಿಗೆ, ವೈಭವದ ವಾದ್ಯ, ಭಕ್ತಿ ರಸದ ಭಜನೆಯ ಮೇಳಗಳು, ರುದ್ರಾಭಿಷೇಕ, ಪಾದಪೂಜೆ, ಮಹಾಗಣಾ ರಾಧನೆ, ಜಂಗಮ ದಾಸೋಹ, ಕೀರ್ತನೆ, ಪುರಾಣ ಮೊದಲಾದವು ಆತನನ್ನು ಪದೇ ಪದೇ ಆಕರ್ಷಿಸುತ್ತಿದ್ದವು. ಅಲ್ಲೆಲ್ಲಾ ಏನೋ ಒಂದು ಆನಂದವಿದೆ ಯೆಂದು ತಿಳಿಯುತ್ತಾನೆ. ಆದರೆ ಅದು ಯಾವುದು ಎಂದು ಆತನಿಗೇ ತಿಳಿಯ ದಾಗಿದೆ.

ಸದ್ಯದ ಮಟ್ಟಿಗೆ ಊರ ಹಿರಿಯ ಮಠದ ಪಾಠಶಾಲೆಯಲ್ಲೇ ಬಾಲಕನ ಕನ್ನಡ ವಿದ್ಯಾಭ್ಯಾಸ ಜರುಗಿತು. ಆತನದು ಓದು ಒಕ್ಕಾಲು, ಬುದ್ಧಿ ಮುಕ್ಕಾಲು. ಶಾಲೆಯಲ್ಲಿ ಕಲಿತ ವಿಚಾರಗಳೇ ಬೇರೆ, ಈತ ಉಳಿಸಿಕೊಂಡ ವಿಚಾರಗಳೇ ಬೇರೆ. ಈತನ ಆತ್ಮಪಕ್ಷಿ ಗಾವುದ ಗಾವುದ ಮೈಲಿಗಳಾಚೆ ವಿಹರಿಸಿ ಏನನ್ನೋ ಹುಡುಕುತ್ತಾ ಹೋಗುತ್ತಿತ್ತು. ಮೈಮರೆಸುತ್ತಿತ್ತು.

ಮಳೆಯಪ್ಪ ಹತ್ತು ವರ್ಷದವನಾದಾಗಲೇ ಅವನ ಅಕ್ಕನ ಬಾಯಲ್ಲಿ ನೀರೂರಿದವು. ತವರ ಮನೆ ಸಂಬಂಧ ಉಳಿಸಿಕೊಳ್ಳಬೇಕೆಂದು ಬಹುಕಾಲದಿಂದ ಹಾಕಿದ ಹೊಂಚನ್ನು ಈಗ ಸಾಧಿಸಬಯಸಿದಳು. ಮಳೆಯಪ್ಪ ತನ್ನ ಮಗಳ ಬಲೆಯಲ್ಲಿ ಬಿದ್ದೇಬಿಳುತ್ತಾನೆಂದು ಅವಳ ನಂಬಿಕೆ, ಮೊದಲು ತಾಯಿಯಾದ ಗೌರಮ್ಮನಿಗೆ ವಶೀಲಿ ಹಚ್ಚಿದಳು. ವಶೀಲಿ ಸಂಪೂರ್ಣ ಸಫಲವಾಯಿತು. ನಂತರ ವಶೀಲಿ ಅಲ್ಲಿಗೂ ನಿಲ್ಲಲಿಲ್ಲ. ಅದು ವೀರಯ್ಯನವರಿಗೂ ಯಥಾ ಪ್ರಕಾರ ತಲುಪಿತು. ಇವರು ವಶೀಲಿ ಹಚ್ಚಿದ್ದು ಹಾಗೂ ವೀರಯ್ಯನವರ ಮನದಲ್ಲಿ ಮುಂಡಿಗೆ ಮಾಡಿಕೊಂಡದ್ದೂ ಒಂದೇ ಆಯಿತು. ಇನ್ನೇನು 'ಹ್ಞೂ' ಎಂದರೆ ಅಕ್ಕಿಕಾಳು! ಆದರೆ ಯಾಕೋ ವಿಧಿ ಅವರನ್ನು ಸ್ವಲ್ಪ ಕಾಲ ತಡೆಸಿತು. ಮಾತಿಗೆ ಬೀಗ ಹಾಕಿ, ಮನಕ್ಕೆ ಸಂಕೋಲೆ ತೊಡಿಸಿತು.

ಮಳೆಯಪ್ಪನ ಅಕ್ಕ ವ್ಯವಹಾರದಲ್ಲಿ ತುಂಬ ಜಾಣಳು. ಯಾವ ಕೀಲಿಕ್ಕೆ ಎಲ್ಲಿ ಹಚ್ಚಬೇಕೆಂಬುದನ್ನು ಬಲ್ಲವಳು. ತಮ್ಮ ತಂದೆಯ ಒಪ್ಪಿಗೆಯ ಕೀಲಿಕೈ ಹಾರನಹಳ್ಳಿಯ ಶಿವಲಿಂಗಸ್ವಾಮಿಗಳ ಹತ್ತಿರ ಇದೆಯೆಂದು ಅಲ್ಲಿ ತನ್ನ

ವಶೀಲಿಯ ಕುದುರೆಯನ್ನು ಓಡಿಸಿದಳು. ಆದರೆ ಇವಳು ಹೋದದ್ದೇ ಬೇರೆ ಅಲ್ಲಿ ಆದದ್ದೇ ಬೇರೆ. ಅವರಿಂದ ಭಾಗ್ಯದ ಕೀಲಿ ತಿರುಗಿಸಬೇಕೆಂದು ಇವಳು ಹೋದರೆ, ಆ ಸ್ವಾಮಿಗಳು ಖಂಡಿತವಾಗಿ ಹೇಳಿಬಿಟ್ಟರು—

'ನಿನಗೇನು ಹುಚ್ಚುಗೀಳು ತಂಗಿ. ಆ ಮಗುವನ್ನು ನಿನ್ನ ಪೆಟ್ಟಿಗೆಗೆ ಎಸೆದುಕೊಳ್ಳಬೇಕೆಂದು ಬಯಸಿದ್ದೀಯಾ ? ಅದು ಬೆಂಕಿ ತಂಗೀ, ಬೆಂಕಿ. ಪೆಟ್ಟಿಗೆಯನ್ನೂ ಸುಟ್ಟೀತು, ನಿನ್ನನ್ನೂ ಸುಟ್ಟೀತು'

ಅಬ್ಬಾ ! ಎಂಥ ದಿವ್ಯಜ್ಞಾನ, ಎಂಥ ಅಮರವಾಣಿ !! ಆಗ ಅವಳು ಬಂದದಾರಿಗೆ ಸುದೀರ್ಘ ನಿಟ್ಟುಸಿರಿನ ಸುಂಕಕೊಟ್ಟು, ತನ್ನ ಮಗಳನ್ನು ತಾನೇ ಬಯ್ಯುತ್ತ— 'ಎಂಥ ಮಹಾ ಖೋಡಿ ನಶೀಬ ನಿಂದು. ಯಾಕಾದರೂ ಬಂದೆ ಭೂಮಿ ಮೇಲೆ' ಎಂದು ಮನಸಿನಲ್ಲೇ ಶಪಿಸುತ್ತ ಮರಳಿದಳು. ಅಂತೂ ಮಳೆಯಪ್ಪನನ್ನು ಸಂಸಾರಿಯನ್ನಾಗಿಸಬೇಕೆಂದು ಹವಣಿಸಿದ ಮಾಯಾ ತೆರೆ ಮೂಲದಲ್ಲೇ ಸುಟ್ಟುಹೋಯಿತು. ಅವನ ಬಾಲ್ಯವೇ ಒಂದು ವಿಚಿತ್ರ ಲೀಲೆಯಲ್ಲವೇ ?

ಶಿವಸ್ವರೂಪಿಗಳಾದ ಬಸವಲಿಂಗ ಸ್ವಾಮಿಗಳು ಸಸಿವಾಳದ ಹಿರಿಯ ಮಠದ ಪಟ್ಟಾಧಿಕಾರಿಗಳು. ಮಠದ ಪಾಠಶಾಲೆಯಲ್ಲಿ ಮಳೆಯಪ್ಪ ಕನ್ನಡ ಅಕ್ಷರಾಭ್ಯಾಸ, ವ್ಯಾಕರಣ–ಕಾವ್ಯಗಳ ಪರಿಚಯವನ್ನು ಹೊಂದಿದನು. ಸ್ವಾಮಿಗಳು ನೀಡುವ ಪ್ರವಚನಗಳಿಂದ ಆಧ್ಯಾತ್ಮದ ಉಣಿಸನ್ನು ಅರಿತನು. ಕೆಲ ಕಾಲಾನಂತರ ಪಾಠಶಾಲೆಯ ವಿದ್ಯಾರ್ಥಿಗಳಲ್ಲಿ ಮಳೆಯಪ್ಪನು ಸ್ವಾಮಿಗಳಿಗೆ ತುಂಬ ಹಿತವರ್ತಿಯಾದನು. ಅವರ ಆಚಾರ-ವಿಚಾರಗಳು, ಪೂಜಾವಿಧಾನಗಳು, ವೀರ ನಿಯಮಗಳು ಈ ಬಾಲಶಿಷ್ಯನ ಮೇಲೆ ಗುಪ್ತಪ್ರಭಾವವನ್ನು ಬೀರಿದವು. ವೀರಯ್ಯನವರಿಗೂ ಬಸವಲಿಂಗಸ್ವಾಮಿಗಳಿಗೂ ಆಧ್ಯಾತ್ಮ ಹಾಗೂ ವ್ಯವಹಾರಗಳೆರಡರಲ್ಲೂ ಒಡನಾಟ ಜಾಸ್ತಿ. ಹೀಗಾಗಿ ಆ ಬಾಂಧವ್ಯದ ಫಲ ಮಳೆಯಪ್ಪನ ಅನುಭವಕ್ಕೆ ಪೋಷಕವಾಯಿತು. ಆದರೆ ಆತನ ಆತ್ಮವನ್ನೇ ಹೊತ್ತಿಸಿ, ಪುಟಮಾಡಿ, ಆರ್ತಭಕ್ತಿಯ ಅಗ್ನಿಜ್ವಾಲೆಗಳನ್ನು ಕಾರಿಸಿ, ಘೋರ ತಪಸ್ಸಿನ ಸಿಡಿಲ ರೋಷವನ್ನು ಕೆರಳಿಸುವ ಮಹಾ ಸಾಮರ್ಥ್ಯವನ್ನು ಆ ಸ್ವಾಮಿಗಳು ಪಡೆದು ಬಂದಿರಲಿಲ್ಲ. ಆ ಅಪೂರ್ವ ನಿಮಿಷಕ್ಕಾಗಿ ಕಾಲವೇ

ಕಾಯುತ್ತಿತ್ತು. ಬ್ರಹ್ಮಾಂಡವೇ ಸಮುಚ್ಚವನ್ನು ಎಣಿಸುತ್ತಿತ್ತು. ಶಿವ ತತ್ವವೇ ತುದಿಗಾಲ ಮೇಲೆ ತಪನೀತಿತ್ತು!

ಈಗ ಮಳೆಯಪ್ಪ ಹನ್ನೆರಡು ವರುಷದ ಹುಡುಗ. ಹುಡುಗನನ್ನು ವಡಕ್ಕೀತೆ ಬಾಲಶಿವಯೋಗಿ ಎನ್ನುವದು ವಾಸಿ. ಯಾಕೆಂದರೆ ಎಲ್ಲರೂ ಹುಡುಗರಾಗಿರುತ್ತಾರೆ, ಆದರೆ ಶಿವತತ್ವ ಎಷ್ಟು ಜನರಲ್ಲಿ? ಈತನಿಗೆ ಹಸಿವು-ನೀರಡಿಕೆಗಿಂತಲೂ ಆಧ್ಯಾತ್ಮದ ಒಲವು ಅಧಿಕ. ತಾಯಿ ಗೌರಮ್ಮ ಈತನ ಪಾಲಿನ ಮೊದಲು ಗುರುವಾಗಿದ್ದಳು. ಅನೇಕ ಶಿವಯೋಗಿಗಳ, ಶರಣರ ಚರಿತ್ರೆಯನ್ನು ಬಾಲ್ಯದಿಂದಲೇ ಅವಳಿಂದ ಕೇಳಿ ಹುಚ್ಚನಾಗಿದ್ದ. ಅವಳು ಹೇಳಿದ ಕುಂಬಾರ ಗುಂಡಯ್ಯ, ಬೇಡರ ಕಣ್ಣಪ್ಪ, ಜೇಡರ ದಾಸಿಮಯ್ಯ, ಅನಿಮಿಷಯ್ಯ, ಅಲ್ಲಮ, ಬಸವಣ್ಣ, ಅಕ್ಕಮಹಾದೇವಿ, ಸಿದ್ಧರಾಮ, ಅಜಗಣ್ಣ, ತೋಂಟದ ಸಿದ್ಧಲಿಂಗ ಶಿವಯೋಗಿಗಳ ಕಥೆಗಳು ಆತನನ್ನು ಹುಚ್ಚನನ್ನಾಗಿ ಮಾಡಿದವು.

ಮಳೆಯಪ್ಪಾರ್ಯ ಐದು ವರ್ಷದವನಿದ್ದಾಗಿನ ಒಂದು ಘಟನೆ ಹನ್ನೆರಡು ವರುಷದವನಾದರೂ ಇನ್ನೂ ಆತನನ್ನು ಬೆಂಬತ್ತಿ ಕಾಡುತ್ತ ಬಂದಿತ್ತು. ಆ ಘಟನೆ ಹೀಗಿದೆ: ಆತ ತಾಯಿಯಿಂದ ಅನೇಕ ಶರಣರ ಕಥೆಗಳನ್ನು ಕೇಳಿ ಕೇಳಿ, ಒಂದು ಸಲ ಹೊಸ ವಿಚಾರವೊಂದು ಸುಳಿದು ಪ್ರಶ್ನೆಯೊಂದನ್ನು ಕೇಳಿದ—

'ಅವ್ವಾ ನನಗೂ ಅವರಂತೆ ಯೋಗಿಯಾಗಲು ಬರುತ್ತದೆಯೇ?'

ಎಂಥ ವಿಚಿತ್ರ ಪ್ರಶ್ನೆ! ಆದರೂ ಗೌರಮ್ಮ ಸಮಾಧಾನದಿಂದ ಹೇಳಿದಳು—

'ಯಾರು ಬೇಕಾದರೂ ತಪಸ್ಸು ಮಾಡಿದರೆ ಹಾಗೆ ಯೋಗಿಯಾಗಬಹುದು ಮಳಿ.'

ಮಳೆಯಪ್ಪ ಅವಳ ಬಾಯಲ್ಲಿ ಅಕ್ಕರತೆಯ ಚಿಟ್ಟಾಣಿಯಾಗಿದ್ದ.

ಈ ಮಳಿ ಮತ್ತೆ ಪ್ರಶ್ನೆಗಳ ಸುರಿಮಳೆಯನ್ನೇ ಸುರಿಸಿದ—

'ತಪಸ್ಸು ಅಂದರೆ ಏನವ್ವಾ?'

ತಾಯಿ ಹೇಳಿದಳು....

'ಸಂಸಾರವನ್ನು ಬಿಟ್ಟು ದೇವರನ್ನೇ ನೆನೆಯುವದು. ಅದು ಬಹಳ ಕಷ್ಟವಪ್ಪಾ'

ಇದೇನು ಮಹಾವೇದವಾಕ್ಯವನ್ನೇ ಕೇಳಿದಂತಾಯಿತು ಬಾಲಕನಿಗೆ. ಆದರೂ ಉತ್ತರ ಆತನ ತೃಪ್ತಿಯ ಸೀಮೆಯನ್ನು ಮುಟ್ಟಲಿಲ್ಲ. ಸಂಸಾರ ವೆಂದರೆ ಆ ಎಳೆಯ ಕೂಸಿಗೆ ಏನು ತಾನೇ ಹೊಳೆಯಬೇಕು ? ಮತ್ತೆ ಕೇಳಿದ–

'ಅವ್ವಾ ಸಂಸಾರ ಅಂದರೆ ಹೇಗಿರುತ್ತದೆ ? ನೀನು ನೋಡಿದ್ದೀಯಾ ಅದನ್ನು ?'

ತಾಯಿ ನಕ್ಕು ಹೇಳಿದಳು—

'ಹುಚ್ಚಮಳಿ, ಸಂಸಾರ ಅಂದರೆ ಬೇರೆ ಅಲ್ಲ. ತಂದಿ-ತಾಯಿ-ಅಣ್ಣ-ತಮ್ಮ-ಅಕ್ಕಾ-ತಂಗಿ-ಮಕ್ಕಳು-ಮೊಮ್ಮಕ್ಕಳು ಇರುವದಕ್ಕೆ ಸಂಸಾರ ಅಂತಾರು. ಅದು ಬೇರೆ ಅಲ್ಲ.'

'ಹಂಗಾದ್ರ ನೀನು ನನ್ನ ಅವ್ವ ಅದೀದಿ. ಮತ್ತ ಅಪ್ಪಾ; ನನ್ನ ಅಪ್ಪ ಅದಾನು. ನೀವೂ ಸಂಸಾರ ಅಂದಂಗಾತಲ್ಲಾ ?'

'ಹೌದು. ನಾವೆಲ್ಲಾ ಸಂಸಾರನ. ನಮ್ಮನ್ನ ಬಿಟ್ಟು ಬ್ಯಾರೆ ಸಂಸಾರ ಎಲ್ಲಿ ಐತಿ ?'

'ಅವ್ವಾ ಹಂಗಾದ್ರ ಆಗಳೆ ನೀ ಏನ ಹೇಳಿದಿ ಗೊತ್ತದೋ ಇಲ್ಲೋ?'

'ಏನು ?'

'ತಪಸ್ಸು ಮಾಡಬೇಕಾದ್ರ ಸಂಸಾರವನ್ನು ಬಿಡಬೇಕು ಅಂದಿ'

'ಹೌದು'

'ಹಂಗಾದ್ರ ನಾ ತಪಸ್ಸು ಮಾಡಬೇಕಾದ್ರ ನಿನ್ನ...ಅಪ್ಪನ್ನ....ಬಿಡ ಬೇಕಂದಂಗಾತಲ್ಲಾ'

'ಛೀ ಹುಚ್ಚಪ್ಪಾ, ಹಾಗೆಲ್ಲಾ ಅನ್ನಬಾರ್ದು. ಓಳ್ಳೆ ಅನ್ನು'

'ಊಹು. ನಾ ಅನ್ನೋದಿಲ್ಲಾ. ನಾನೂ ತಪಸ್ಸು ಮಾಡತೇನಿ. ದೇವರನ್ನ ನೆನೀತೇನಿ. ಅವರಂಗ ನಾನೂ ಯೋಗಿ ಆಗಬಾರ್ದೇನು ?'

'ಆಗಪ್ಪಾ ಆಗು. ಆದರೆ ನಮ್ಮನ್ನ ಬಿಡಬೇಡಾ ಮಳಿ'

ಮಳಿಗೆ ತಾಯಿಯ ಈ ವಿಚಿತ್ರ ತರ್ಕ ಸರಿ ಅನಿಸಲಿಲ್ಲ. ಮತ್ತೆ ಮಾತು ಮುಂದುವರೆಸಿದ—

'ಅಪ್ಪಾ ದೇವರು ಅಂದರ ಎಲ್ಲಿ ಅದಾನು? ಅವಾ ಹ್ಯಾಂಗ ಅದಾನು? ಅವಗೂ ನಮ್ಮಂಗ ಕಣ್ಣು-ಮೂಗು-ತಲಿ-ಸಾಲಿಗಿ-ಕಾಲು-ಕೈ ಅದಾವೇನು?

ಬಾಲಕ ತನ್ನ ಬಾಲಭಾಷೆಯಲ್ಲಿ ವೇದಾಂತದ ಪ್ರಶ್ನೆಯನ್ನೇ ಕೇಳಿಬಿಟ್ಟ. ಆದರೆ ಗೌರಮ್ಮ ಏನೆಂದು ಉತ್ತರಿಸಬೇಕು. ಅವಳ ತನ್ನ ಸಾಮರ್ಥ್ಯಕ್ಕೆ ತಕ್ಕಂತೆ ಅವನಿಗೆ ಹೇಳಿದಳು—

'ಇಲ್ಲ ಮಳಿ. ದೇವರು ಮನುಷ್ಯನಲ್ಲವೆಂದು ಯೋಗಿಗಳು ಹೇಳುತ್ತಾರೆ. ಆದರೆ ಮನುಷ್ಯನಲ್ಲೇ ಅದಾನಂತೆ. ಅವನು ಕೈಗೆ ಸಿಕ್ಕುವದಿಲ್ಲವಂತೆ, ಕಣ್ಣಿಗೆ ಕಾಣುವದಿಲ್ಲವಂತೆ, ಹುಟ್ಟುವದಿಲ್ಲವಂತೆ, ಸಾಯುವದಿಲ್ಲವಂತೆ, ಎಲ್ಲೆಲ್ಲಿಯೂ ತುಂಬಿದ್ದಾನಂತೆ. ಹೀಗೆ ಆ ಯೋಗಿಗಳೇ ಹೇಳುತ್ತಾರೆ.'

'ಹೌದೆ? ಯೋಗಿಗಳು ಹೇಳುತ್ತಾರೆಯೇ? ಅವರು ಎಲ್ಲಿ ಇದ್ದಾರೆ ಅವ್ವಾ?'

'ದೊಡ್ಡ ಕಲ್ಬೆಟ್ಟದಲ್ಲಿ ಇದ್ದಾರಂತೆ. ಅಲ್ಲಿ ಗವಿಗಳಿವೆಯಂತೆ, ನಮ್ಮಂಥ ಮನುಷ್ಯರು ಅಲ್ಲಿ ಹೋಗುವದು ಶಕ್ಯವೇ ಇಲ್ಲ. ಅಲ್ಲಿ ಹುಲಿ-ಕರಡಿ-ಚಿರ್ಚಿ-ಕಾಡುಹಂದಿ-ಹೆಬ್ಬಾವು-ಕಾಳಿಂಗಸರ್ಪ ಇವೆಯಂತೆ. ಈ ಊರಿನವರು ಆ ಕಲ್ಬೆಟ್ಟದ ಯೋಗಿಗಳನ್ನು ಭೆಟ್ಟಿಯಾಗಲು ಹೋದವರು ಈ ವರೆಗೂ ಹೊಳ್ಳಿ ಬಂದಿಲ್ಲಪ್ಪಾ. ಅದು ಅಂಥಾ ಜಾಗ.'

ಮಗು ರೋಮಾಂಚನದಿಂದ ಬಾಯ್ದೆರೆದು ಅದ್ಭುತ ಕಥೆಯನ್ನು ಕೇಳಿದಂತೆ ಕೇಳಿದ. ಅವನ ಕೌತುಕ ನೂರುಮಡಿ ಸಾವಿರ ಮಡಿ ಬೆಳೆಯಿತು. ಮತ್ತೆ ಕೇಳಿದ—

'ಅವ್ವಾ ಹಾಗಾದರೆ ನಾವು ಆ ಕಲ್ಬೆಟ್ಟದ ಯೋಗಿಗಳನ್ನು ಹೇಗೆ ಭೆಟ್ಟಿಯಾಗುವದು?'

ಗೌರಮ್ಮ ಆತುರದ ಮಗುವಿನ ಗಲ್ಲಗಳನ್ನು ನೇವರಿಸಿ, ತನ್ನ ಎದೆಗೆ ಎಳೆದುಕೊಂಡು ಅಪ್ಪಿ ಹೇಳಿದಳು -

'ಚಿಂತಿಸಬೇಡ ಮಳಿ. ಅವರೇ ಒಮ್ಮೊಮ್ಮೆ ಈ ಕಡೆಗೆ ಬರುತ್ತಾರೆ. ದೇವರ ಮೇಲೆ ಬಹಳ ಭಕ್ತಿಯಿದ್ದವರಿಗೆ ತಾವೇ ಭೆಟ್ಟಿಯಾಗುತ್ತಾರೆ. ನೀನು ಈಗ ಇಲ್ಲಿ ಮಾತಾಡುವದು ಸಹ ಅವರಿಗೆ ತಿಳಿಯುತ್ತದೆ. ಅವರು ಈ ಊರಿಗೆ ಬಂದಾಗ ನಿನ್ನನ್ನು ಕರಕೊಂಡು ಹೋಗಿ ಭೆಟ್ಟಿಮಾಡಿಸುತ್ತೇನೆ.

ಅವರು ನಿನಗೆ ದೇವರನ್ನು ತೋರಿಸುತ್ತಾರೆ. ಈಗ ಸುಮ್ಮನಾಗು. ಬಹಳ ಪ್ರಶ್ನೆ ಕೇಳುವವರಿಗೆ ಅವರು ಭೆಟ್ಟಿಯನ್ನೇ ಕೊಡುವದಿಲ್ಲಾ'

—ಎಂದು ವಿಚಿತ್ರ ರೀತಿಯ ಸಮಾಧಾನವನ್ನು ಮಾಡಿದಳು. ಆದರೆ ಮಳೆಯಪ್ಪಾರ್ಯನು ಸುಮ್ಮನಾದನೇ ಹೊರತು ಅತೃಪ್ತಿಯ ಘೋರಾಗ್ನಿ ಅನೇಕ ದಿನಗಳ ವರೆಗೆ, ಆತನ ಅಂತರಂಗದಲ್ಲಿ ಭೋರಾಡಿ ಕಾಡಿತು.

ನಂಬಿ ಕರೆದೊಡೆ ಓ ಎನ್ನನೇ ಶಿವನು? ಶಿವಸಂಕಲ್ಪವು ಸುಮಹೂರ್ತವನ್ನು ಭೆಟ್ಟಿಯಾಯಿತು. ಬಾಲಶಿವಯೋಗಿಯ ಆಧ್ಯಾತ್ಮ ಯಾತ್ರೆ ಸಮೀಪಿಸಿತು. ಅಂತೂ ಅನತಿಕಾಲದ ನಂತರ ಕಲ್ಬೆಟ್ಟದ ತಪಸ್ವಿಗಳೊಬ್ಬರು ಒಂದು ಸಲ ಆಕಸ್ಮಿಕವಾಗಿ ಸಸಿವಾಳಕ್ಕೆ ಸುಳಿದರು. ಬೆಳ್ಳಿಯ ಪರ್ವತದಂತೆ ಜಟಾ ಜೂಟ, ಗಂಗಾನದಿಯಂತೆ ಬಿಳಿಯ ಗಡ್ಡ, ಉಗ್ರತಪಸ್ಸಿನಿಂದಾದ ಕೇವಲ ಎಲುವಿನ ಹಂದರ, ನರಗಳ ತೊಡರು, ಆಳವಾದ ಕಣ್ಣುಗಳು, ಉಗ್ರವಾದ ಮುಖ, ಬೆನ್ನಿಗೆ ಅಡರಿ ಗವಿಯಂತಾದ ಹೊಟ್ಟೆ—ಎಲ್ಲವೂ ಕುತೂಹಲಕಾರಿಯಾಗಿದ್ದವು, ಬಸಲಿಂಗಸ್ವಾಮಿಗಳ ಮಠದಲ್ಲಿ ಲಿಂಗಾರ್ಚನೆಗೆಂದು ಅಲ್ಪಕಾಲ ತಂಗಿದ್ದರು. ಸ್ವಾಮಿಗಳು ವೀರಯ್ಯನವರಿಗೆ ವೃತಾಂತ ಅರುಹಿ ಹೇಳಿ ಕಳಿಸಿದರು ಮಠದ ಮೂತನಿಂದ ವೀರಯ್ಯನವರ ಮನೆಗೆ ತಪಸ್ವಿಗಳ ಆಗಮನ ವೇದ್ಯವಾಯಿತು. ವಿರಯ್ಯನವರು ಶರವೇಗದಿಂದ ಬಂದು ತಪಸ್ವಿಗಳನ್ನು ಕಂಡರು. ಸಾಷ್ಟಾಂಗ ಪ್ರಣಾಮಗೈದು ಅವರ ಪಾದ ಪದ್ಮದ ಬಳಿ ಕುಳಿತರು. ತಪಸ್ವಿಗಳಿಗೂ ವೀರಯ್ಯನವರಿಗೂ ಮೂವತ್ತು ವರುಷಗಳ ಹಿಂದಿನ ಪರಿಚಯ. ಅದೂ ಕೂಡ ಅಷ್ಟಕ್ಕಷ್ಟೇ. ಆದರೆ ತಪಸ್ವಿಗಳೇ ನೇರವಾಗಿ ವಿರಯ್ಯನವರಿಗೆ ಹೇಳಿದರು— 'ಏನಯ್ಯ ಬೆಂಕಿಯನ್ನು ಎಲ್ಲಿ ಬಿಟ್ಟುಬಂದೆ?' ಎಂದು. ವೀರಯ್ಯನವರಿಗೆ ಏನೂ ಅರ್ಥವಾಗದೆ ಮನಸ್ಸಿನಲ್ಲೇ ತಿಪ್ಪರಲಾಗ ಹಾಕಿದರು. ಸ್ವಾಮಿಗಳಿಗೂ ಈ ಗಹನ ನಿಗೂಢವಾಯಿತು. ಆಯಿತು ಅಷ್ಟೇ ಭೆಟ್ಟಿ. ತಪಸ್ವಿಗಳೂ ಸ್ವಾಮಿಗಳ ಒಪ್ಪಿಗೆ ಪಡೆದು ಮೆಲ್ಲನೇ ಜಾಗಬಿಟ್ಟರು. ಅವರ ಕಲ್ಬೆಟ್ಟ ಮರಳಿ ಅವರನ್ನು ಕರೆಯುತ್ತಿತ್ತು. ಆಗಲೇ ನಡುಮಧ್ಯಾಹ್ನ. ಆದರೂ ಅವರಿಗೆ ಅದರ ಪರಿವೆ ಇಲ್ಲ. ಸ್ವಾಮಿಗಳೇನೋ ತಪಸ್ವಿಗಳಿಗೆ ಒಂದೆರಡು ದಿನ ಮಠದಲ್ಲಿ ತಂಗಲು ಕೇಳಿದರು. ಆದರೂ ಅದು ಅಸಾಧ್ಯವಾದ ಮಾತೆಂದು ಅವರಿಗೇ ಗೊತ್ತು.

ವೀರಯ್ಯನವರು, ಸ್ವಾಮಿಗಳು ಆ ಯೋಗಿಗಳನ್ನು ಊರ ಆಚೆಯ ದಿಬ್ಬದ ವರೆಗೆ ಕಳಿಸಲು ನಡೆದರು. ದಿಬ್ಬವೂ ಬಂತು. ಆದರೆ ವೀರಯ್ಯನವರ ಮನಸ್ಸು ಇನ್ನೂ ಒಳಗೊಳಗೇ ಲಾಗಹಾಕುತ್ತಿತ್ತು. ತಳಮಳದಿಂದ ತುಂಬಿತ್ತು. ಕೊನೆಯ ಬಾರಿಗೆ ತಪಸ್ವಿಗಳಿಗೆ ಕೇಳಿಯೇ ಬಿಟ್ಟರು— 'ಮಹಾತ್ಮರೆ, ತಾವು ನನಗೆ ಬೆಂಕಿಯನ್ನು ಎಲ್ಲಿ ಬಿಟ್ಟು ಬಂದೆ— ಎಂದು ಕೇಳಿದಿರಿ. ಕ್ಷಮಿಸಬೇಕು. ಅರ್ಥವಾಗಲಿಲ್ಲ'—ಎಂದರು. ಅದಕ್ಕೂ ಅವರು ನಸುನಕ್ಕು ಹೇಳಿದರು— ಹುಚ್ಚಪ್ಪ! ಶಿವಾ ಬೆಂಕಿಯನ್ನು ಕೊಟ್ಟರೆ ಇದ್ದಲಿ ಆಸ್ನುತ್ತಿಯಾ?' ಆಯ್ತು. ಅವರ ಮಾತು ಮತ್ತೂ ಒಗಟಾಯಿತು. ಮಾತು ಬರಲಿಲ್ಲ, ತಪಸ್ವಿಗಳು ಹೆಚ್ಚಿನ ಮಾತಿನ ಉಪಚಾರವಿಲ್ಲದೆ, ಸರ್ವ ಸಂಗ ಪರಿತ್ಯಾಗಿಯ ತೇಜದಿಂದ ಅಲ್ಲಿಂದ ತೆರಳಿಬಿಟ್ಟರು. ಅವರು ಹತ್ತು ಹೆಜ್ಜೆ ಹೊಗಿರಬಹುದು. ಆಗಲೇ ಸ್ವಾಮಿಗಳಿಗೆ ತಪಸ್ವಿಗಳ ಗೂಢಾರ್ಥದ ನುಡಿ ಛಕ್ಕನೆ ಹೊಳೆಯಿತು. —'ವೀರಯ್ಯ, ಆ ಬೆಂಕಿ ಕೆಂಡ ಬೇರೆ ಯಾವ ವಸ್ತುವೂ ಅಲ್ಲ, ನಿನ್ನ ಮಗನೇ ಆಗಿರಬೇಕು.' ಎಂದರು. ಆಗ ವೀರಯ್ಯನವರು ಪರಮಾಶ್ಚರ್ಯದಿಂದ— 'ಅಯ್ಯೋ ಸ್ವಾಮಿಗಳೆ ಕಳೆದುಕೊಂಡೆ. ಕಳೆದುಕೊಂಡೆ. ನನ್ನ ಮಗನನ್ನು ಅವರಿಗೆ ಭೆಟ್ಟಿಮಾಡಿಸಲಿಲ್ಲ,' ಎಂದರು.

ವಿಹ್ವಲಚಿತ್ತರಾಗಿ ಮರುಗತ್ತ ವೀರಯ್ಯನವರು ಮನೆ ಸೇರಿದರು ನೇರ ವಾಗಿ ಹೆಂಡತಿಗೆ–'ಮಳೆಯಪ್ಪ ಎಲ್ಲಿ' ಎಂದು ಕೇಳಿದರು. ಮಳೆಯಪ್ಪ ಮನೆಯ ಕೈತೋಟದಲ್ಲಿ ಹೂವಿನ ಗಿಡಗಳಿಗೆ ಒಡ್ಡನ್ನು ಏರಿಸುತ್ತಿದ್ದನು. ಅವನಿಗೆ ಈ ಅಪೂರ್ವ ವೃತ್ತಾಂತ ಏನೊಂದೂ ತಿಳಿಯದು. ತಂದೆ ಅವ ನನ್ನು ಕರೆದು ಹೇಳಿದನು— 'ಮಳೆಯಪ್ಪ, ಕಲ್ಬೆಟ್ಟದ ಯೋಗಿಗಳು ಬಂದಿದ್ದರು. ಹೋಗಿಬಿಟ್ಟರು. ತಕ್ಷಣವೇ ಮಳೆಯಪ್ಪನಿಗೆ ಹತ್ತು ಸಿಡಿಲು ಗಳು ಒಮ್ಮೆಲೆ ಹೊಡೆದಂತಾದವು. 'ಹಾಂ, ಯೋಗಿಗಳು ಬಂದಿದ್ದರೇ? ಎಲ್ಲಿ....ಎಲ್ಲಿ....ಎಲ್ಲಿ ಅವರು?' ಎಂದನು. ವೀರಯ್ಯನವರು ಮನೆ ಸೇರಿದರು 'ಬಂದಿದ್ದರಪ್ಪಾ ಆದರೆ ಹೋದರು. ಸ್ವಾಮಿಗಳೂ ನಾನು ಅವರನ್ನು ದಿಬ್ಬದವರೆಗೆ ಕಳಿಸಿ ಬಂದವು. ಈಗ ಬಹುಶಃ ಹಳ್ಳಕ್ಕೆ ಇಳಿಯುತ್ತಿರಬಹುದು.' ತಕ್ಷಣವೇ ಮಳೆಯಪ್ಪ ಮುಳ್ಳು ಚುಚ್ಚಿದ ಹುಲಿಯಂತೆ ನೆಗೆದು–'ಹಾಗಾದರೆ

ಅಪ್ಪಾ ನಾನವರನ್ನು ನೋಡಿಬರುತ್ತೇನೆ' ಎಂದು ಧಾವಿಸಿದನು. ವೀರಯ್ಯ ನವರು ಕೂಗುತ್ತ–

'ಬೇಡ....ಬೇಡ ಮಳಿ ಹೋಗಬೇಡ....ಹೊಗಬೇಡ' ಎಂದರು. ದೂರದಿಂದಲೇ ಆತನ ಉತ್ತರ ಬಂತು–

'ಇಲ್ಲ ಅಪ್ಪಾ....ಇಲ್ಲ....ಇಲ್ಲ....ಈಗ ತಾನೇ ಬಂದುಬಿಟ್ಟೆ'

ಗೌರಮ್ಮನ ಎದೆಗೆ ಡಬಗಳ್ಳಿಯು ಮುಳ್ಳಿನಿಂದ ಹೊಡೆದಂತಾಯಿತು. ಅವಳು ಹುಚ್ಚಳಂತೆ ಅಂಗಳಕ್ಕೆ ಓಡಿ–

'ಮಳೀ....ಮಳೀ ....ಹೋಗಬೇಡಾ....ಹೋಗಬೇಡಾ....ನಿಲ್ಲೂ........ ....ನಿಲ್ಲೂ....ನಿಲ್ಲೂ....'

ಆದರೆ ಆ ಕೂಗು ಆವನಿಗೆ ತಾಗುವಂತಿರಲಿಲ್ಲ. ಮಳಿ ಹೋಗೇಬಿಟ್ಟಿತು ಅವಳ ಹೃದಯದ ಬೆಳೆ ದಳದಳ ಒಣಗಿತು. ಹೊಟ್ಟೆಯಲ್ಲಿ ಕಾಸಿದ ಕಡಚಗಿ ಚುಚ್ಚಿದಂತಾಯಿತು, ಕಾತರದಿಂದ ಕಂಗೆಟ್ಟು ಹೋದಳು. ಅವಳು ಪತಿಗೆ–

'ನಿಮಗೇನು ಹುಚ್ಚುಗಿಚ್ಚು ಹಿಡಿದಿತ್ತೇ ಈ ಸುದ್ದೀ ಹೇಳಲಿಕ್ಕೆ. ನಾ ಬೇಕಂತಲೇ ಈ ಸುದ್ದಿ ಅವನಿಂದ ಬಚ್ಚಿ ಇಟ್ಟಿದ್ದೆ. ನೀವು ಮೂರಾಬಟ್ಟಿ ಮಾಡಿಬಿಟ್ಟಿರಿ' ಎನ್ನುತ್ತ ಊರ ಹೊರಗಿನ ದಿಬ್ಬಕ್ಕೆ ಓಡಿದಳು. ವೀರಯ್ಯ ನವರೂ ಓಡಿದರು. ದಿಬ್ಬಕ್ಕೆ ಹೋಗಿ ನಿಂತಾಗ ಯೋಗಿಗಳು ಆಗಲೇ ಬಹು ದೂರ ಹೋಗಿ ಬಿಟ್ಟಿದ್ದರು. ದೂರದ ಹಳ್ಳದ ಇಳಿಜಾರಿನಲ್ಲಿ ಚಿಕ್ಕದೊಂದು ನಕ್ಷತ್ರದಂತೆ ಕಾಣುತ್ತಿದ್ದರು. ಮಳೆಯಪ್ಪ ಓಡಿ, ಆಚೆಯ ಬಂಡೆಗಲ್ಲುಗಳ ದಿನ್ನೆಯನ್ನು ಏರುತ್ತ ಆ ಸನ್ಯಾಸಿಗಳನ್ನು ಸಂಧಿಸಿದ್ದು ಕಂಡಿತು. ಎರಡು ನಕ್ಷತ್ರಗಳು ಒಂದನೊಂದು ಸೇರಿ ಒಂದಾದಂತೆ ತೋರಿತು. ಆ ಸನ್ಯಾಸಿಗಳು ಮಳೆಯನ್ನು ಹೊರಳಿ ಕಳಿಸಿದಂತೆ ತೋರಲಿಲ್ಲ. ಸನ್ಯಾಸಿಗಳೆಂದರೆ ಸನ್ಯಾಸಿ ಗಳಲ್ಲವೇ ? ಮಳೆಯಪ್ಪನೂ ಅವರನ್ನು ಹಿಂದೆಮುಂದೆ ನೋಡದೇ ಬೆನ್ನು ಹತ್ತಿದನೆಂದು ಕಾಣುತ್ತದೆ. ಮುಂದೆ ಅವರನ್ನು ನೋಡುವದೇ ಕಣ್ಣಿಗೆ ಕಷ್ಟವಾಗತೊಡಗಿತು. ಕೊನೆ-ಕೊನೆಗಂತು ತೀರ ಚಿಕ್ಕದಾದ ಮಿನುಗು ತಾರೆಯಂತೆ ಗೋಚರಿಸತೊಡಗಿದರು. ಕೊನೆಗೊಮ್ಮೆ; ಬಾನಂಚಿನ ದಿಬ್ಬ ವೇರಿದ ಅವರು; ಎಲ್ಲೋ ಆಗಸದ ನೀಲದಲ್ಲಿ ತೀರ:ಸಣ್ಣ ಬೆಳಕಿನಕಿಡಿಯಂತೆ ತೋರುತ್ತ, ಕಟ್ಟಕಡೆಗೆ ನೀಲಬ್ರಹ್ಮದಲ್ಲಿ ತೇಲಿಹೋದರು. ಅನಂತಾಸನದಲ್ಲಿ

ಕರ್ಪೂರದ ಉರಿ ಬೆರೆತಂತೆ ಬೆರೆತರು. ಈಗ ಬಟ್ಟ ಬರಿಯ ಆಕಾಶವೊಂದೇ ಉಳಿಯಿತು. ಮಹಾಶೂನ್ಯತೆಯಿಂದ ನಕ್ಕಿತು.

ಇನ್ನು ಮನುಷ್ಯ ಸಾಹಸ ಅವರನ್ನು ಮುಟ್ಟದು. ಕೂಗಿನ ಸೀಮೆ ದಾಟಿ ಹೋಗಿದ್ದರೂ ಗೌರಮ್ಮ ಮತ್ತೆ ಮತ್ತೆ ಕೂಗಿದಳು—

'ಮಳೀ...ಮಳೀ....ಹೋಗಬೇಡಾ....ಹೋಗಬೇಡಾ....ನಿಲ್ಲು....ನಿಲ್ಲು'

ಅವಳ ಆ ಸಂಕಟದ ಅರಚುವಿಕೆಯನ್ನು ಕೇಳಿ ಅಲ್ಲಿಯ ಬಂಡೆಗಲ್ಲುಗಳು ಎದೆಯೊಡೆದು ಪ್ರತಿಧ್ವನಿಸಿದವು. ಮಣ್ಣು ಕಣ್ಣೀರಿನಿಂದ ಒದ್ದೆಯಾಯಿತು. ಬಯಲು ಕಂಬನಿಗೆರೆಯಿತು. ಬೆಟ್ಟ ಹಿಟ್ಟಾಯಿತು. ಅವಳು ಧೂಳು ತುಂಬಿದ ದಾರಿಯಲ್ಲಿ ಬಿದ್ದು ಉರುಳಾಡಿದಳು. ಗಾಳಿಯಲ್ಲಿ ಕೇಶ ತೂರಿ ಹುಚ್ಚಿಯಾಗಿ ಅರಚಾಡಿದಳು. ಕಂಬನಿಯ ಮಾಲೆಯಲ್ಲಿ ಉರುಲು ಹಾಕಿದ ಆತ್ಮದಂತೆ ಒರಲತೊಡಗಿದಳು. ಒಮ್ಮೆಲೇ ಎದೆ ಹರಿದು ಹೋಳಾದಂತೆ ಗೌರಮ್ಮ ಜೋರಾಡಿ ಅಳತೊಡಗಿದಳು. ವೀರಯ್ಯನವರು ಅಪರಾಧಿಯಂತೆ ನಿಂತರು. ಆಗ ಅವರ ಹಿಂದಿನಿಂದ ವಾಣಿಯೊಂದು ಕೇಳಿತು—''ಯಾಕೆ ದುಃಖಿಸುತ್ತೀರಿ, ಆತ ಇನ್ನು ಕಲ್ಬೆಟ್ಟವಾಸಿ. ನಾಳೆ ನಾವೇ ಅಲ್ಲಿಗೆ ಹೋಗಿ ಅವನ ಕ್ಷೇಮ ತಿಳಿದುಕೊಂಡು ಬರೋಣ''. — ಹೊರಳಿ ನೋಡುತ್ತಾರೆ ಬಸವಲಿಂಗ ಸ್ವಾಮಿಗಳು ಗಂಭೀರಕಾಯರಾಗಿ ಕೈಯೆತ್ತಿ ನಿಂತಿದ್ದಾರೆ !

# ಭಗವಂತನ ಲೀಲೆ ಅಗಾಧವಲ್ಲವೇ?

ಹಿರಿಯ ಕಲ್ಬೆಟ್ಟ ತಪಸ್ವಿಗಳಿಗೊಂದು ಮಹಾಮನೆ. ಅನಂತ ಕಾಲದಿಂದ ಅಲ್ಲಿ ಯೋಗಿಗಳು ಉಗ್ರಸಾಧನೆಯನ್ನು ಮಾಡಿದ್ದಾರೆ. ಈಗಲೂ ಮಾಡುತ್ತಿದ್ದಾರೆ. ಬೆಟ್ಟದ ಹೆಬ್ಬಂಡೆಗಳು ಒಂದನ್ನೊಂದು ಸಂಧಿಸುವ ಕಡೆಗೆ ನೈಸರ್ಗಿಕ ಗವಿಗಳು ಸೃಷ್ಟಿಯಾಗಿವೆ. ಹುಲಿ-ಸಿಂಹಗಳ ಈ ಸ್ಥಾನವನ್ನು ತಪಸ್ವಿಗಳು ತಮ್ಮ ಯೋಗಬಲದಿಂದ ಗೆದ್ದಿದ್ದಾರೆ. ಅನೇಕ ಅಜ್ಞಾತ ಶಿವಯೋಗಿಗಳೂ ಇಲ್ಲಿ ಕೈವಲ್ಯವನ್ನು ಕೈಯಲ್ಲಿ ಕುಣಿಸಿದ್ದಾರೆ.

ವೃದ್ಧಯೋಗಿಗಳ ಅನುಚರನಾಗಿ ಬಂದ ಈ ಬಾಲಶಿವಯೋಗಿ ಕಗ್ಗಾಡಿನ ಘೋರಾರಣ್ಯವನ್ನು ದಾಟಿ, ಹಳ್ಳಕೊಳ್ಳಗಳನ್ನು ಹಿಮ್ಮೆಟ್ಟಿಸಿ, ಹುಲಿ-ಚಿರ್ಚೆಗಳ ವಸತಿಗಳನ್ನು ಅತಿಕ್ರಮಿಸಿ, ಹೆಬ್ಬಾವಿನ ಹಳುವನ್ನೂ ಕಾಡುಹಂದಿಗಳ ಹೊದರುಗಳನ್ನು ದಾಟಿ ಕಲ್ಬೆಟ್ಟದ ಬೆಳಕಿನ ನೆತ್ತಿಗೆ ಏರಿಬಂದ. ಆತ ಅಲ್ಲಿ ಬಂದದ್ದೇ ಪವಾಡ. ಅನೇಕ ಕಗ್ಗಾಡಿನ ಬಿದಿರ ಮೆಳೆಗಳು ಚಿರ್ರನೇ ಚೀರಿದಾಗ ಹುಲಿಗಳೂ ಬೆಚ್ಚಿಬೀಳುತ್ತಿದ್ದ ಅರಣ್ಯವದು. ಯೋಗಿಗಳು ಧ್ಯಾನದಲ್ಲಿ ದಾಟಲಸಾಧ್ಯವಾದ ಕದಳಿಯಲ್ಲಿ ಸಿಕ್ಕು, ತೊಳಲಾಡಿ, ಕತ್ತಲೆಯಲ್ಲಿ ತಡಕಾಡಿ, ಕೊನೆಗೆ ಕಾಣಬಾರದ ಕದಳಿಯಲ್ಲಿ ಜ್ಯೋತಿಪುಂಜನ ಬ್ರಹ್ಮಾನಂದದಲ್ಲಿ ಸೇರುತ್ತಾರಂತೆ. ಅಂತೆಯೇ ಕಲ್ಬೆಟ್ಟದ ದಾರಿ ಅಷ್ಟೊಂದು ಘೋರ, ಅಷ್ಟೊಂದು ದಾರುಣ. ಆದರೆ ಇಚ್ಛಾಸಂಕಲ್ಪ ಏನನ್ನಾದರೂ ಗೈಯಬಲ್ಲದು. ಅಸಾಧ್ಯವನ್ನು ಸಹಜ ಸುಲಭಗೊಳಿಸಬಲ್ಲದು. ಅಂಥ ಉಗ್ರ ನಿಷ್ಠೆಯ ಬೆಂಕಿಯ ಕೆಂಡದಂತಿದ್ದ ಈ ತರುಣ ಯೋಗಿ ಕಲ್ಬೆಟ್ಟದ ಸಾಧನಘಟ್ಟಕ್ಕೆ ಏರಿ, ಯೋಗಜೀವನ ಮೊದಲ ಪಾಠಗಳನ್ನು ಆರಂಭಿಸಿದ. ಸಿದ್ಧರ ಶಿವಯೋಗಿಗಳ-ತಪಸ್ವಿಗಳ ಕೂಟದಲ್ಲಿ ಅವರ ಪ್ರಭಾವಲಯದಲ್ಲಿ ಮಲತ್ರಯದ ಕಾವಳನ್ನು ಕಳೆದು, ಷಟ್‌ಸ್ಥಲದ ಸಾಧನಮಾರ್ಗದಲ್ಲಿ ಏರಲು ಸುಸಂಘಟಿತನಾದ. ಭಕ್ತಸ್ಥಲದ ಭಕ್ತಿ ಆತನ ರಕ್ತಗತವಾಗಿತ್ತು. ತಾಯ ತೊಡೆಯ ಮೇಲೆಯೇ ಆತನಿಗೆ ಭಕ್ತಸ್ಥಲದ ದೀಕ್ಷೆಯಾಗಿತ್ತು. ಕಾಲಕಳೆದಂತೆ ಪ್ರಾಯ ಬೆಳೆದಂತೆ ಆತನ ಭಕ್ತಿಯು ಬೆಳೆದು, ಮಹೇಶಸ್ಥಲದ ನಿಷ್ಠೆಯಲ್ಲಿ ಘಟ್ಟಿಗೊಳ್ಳುವುದರಲ್ಲಿತ್ತು. ಅದಕ್ಕೆ ಕಲ್ಬೆಟ್ಟವೇ ಸ್ಥಾವರ ಸ್ಫೂರ್ತಿ, ಅಲ್ಲಿಯ ಶಿವಯೋಗಿಗಳೇ ಜಂಗಮ

ಚೈತನ್ಯರು.. ನೈಸರ್ಗಿಕವಾದ ವಾತಾವರಣದ ಅನಂತ ಶಾಂತಿ, ಪ್ರಕೃತಿಯ ಅಪಾರ ಸೌಂದರ್ಯ, ಪರ್ವತ ಸೆರಗಿನ ಮಂದಸ್ಮಿತ ಸಸ್ಯಶಾಮಲ, ಪಶ್ಚಿಮ ಬೆಟ್ಟಗಳ ಮಂದಮಾರುತ, ಚಂದನ ವನದ ಮೈದುಂಬಿದ ಪ್ರಕಂಪನ, ಅಸಂಖ್ಯ ಪಕ್ಷಿಗಳ ಜೀವಂತ ರಸಕಾವ್ಯ. ಋಷಿಗಳ ಅಪೂರ್ವ ಸಾನಿಧ್ಯ, ಪರಮಾತ್ಮನ ನಿರಂತರ ಬೆಂಬಲ, ಆತ್ಮಕೋಗಿಲೆಯ ಆರ್ತಕೂಜನ, ವಿಶ್ವ ಲಿಂಗನ ಕರುಣಾ ಸಾಯುಜ್ಯ ಎಲ್ಲವೂ ಮೇಳೈಸಿ ಈ ತರುಣನನ್ನು, ಮಲ-ತ್ರಯಗಳಿಂದ ನಿರ್ಲೇಪಗೊಳಿಸಿ, ಯೋಗಮಾರ್ಗದಲ್ಲಿ ಮುನ್ನಡೆಸಲು ಆಧಾರ ಗಳಾದವು.

ತಾಯಿತಂದೆಗಳ ವಾತ್ಸಲ್ಯದ ಬಳ್ಳಿ, ಏನಾದರೂ ಸುಮ್ಮನಿದ್ದೀತೆ? ಮಗ ಮನೆ ಬಿಟ್ಟು ಓಡಿಹೋದ ರಾತ್ರಿ ಆ ತಾಯಿಗೆ ಅನುಭವಿಸಲು ಅಸಾಧ್ಯವಾದ ಘೋರರಾತ್ರಿ. ಅವಳ ನರನರಗಳಲ್ಲಿ ನೂರಾರು ಚೇಳುಗಳು ಸುಳಿದಾಡಿದಂತಾ ಯಿತು. ಮರುದಿನ ಸೂರ್ಯೋದಯವಾದರೂ ಆಗುತ್ತದೆಯೋ ಇಲ್ಲವೋ ಎಂದು ವಿಹ್ವಲಿಸಿತು. ಅವಳ ಕರುಣಾಜನಕ ತಾಯಿಕರುಳು.

ಮರುದಿನವೇ ವೀರಯ್ಯನವರು, ಪತ್ನಿ ಗೌರಮ್ಮನೊಂದಿಗೆ ಮಠದ ಬಸವಲಿಂಗಸ್ವಾಮಿಗಳೊಂದಿಗೆ, ನಾಲ್ಕಾರು ಅಂಗರಕ್ಷಕರಾದ ಬಲಿಷ್ಠ ಬೇಡ ರನ್ನು ಕರೆದುಕೊಂಡು ಕಲ್ಬೆಟ್ಟವನ್ನು ಬಹು ಪ್ರಯಾಸದಿಂದ ತಲುಪಿದರು. ಅವರನ್ನು ಕಂಡಾಗ ಮಳೆಯಪ್ಪನಿಗೆ ಕ್ಷಣಕಾಲ ಸಹನಾತೀತವಾದ ವಾತ್ಸಲ್ಯದ ವೇದನೆ ಉಂಟಾಯಿತು. ಹೆತ್ತ ತಾಯಿ, ಎತ್ತಿದ ತಂದೆ, ಅಕ್ಷರ ಜ್ಞಾನವಿತ್ತ ಸ್ವಾಮಿಗಳು! ಅಯ್ಯೋ ನಾನೇಕಾದರೂ ಅವನ ಜೀವನದ ಸ್ವಾರಸ್ಯವನ್ನು ಬರಿಗೈಯ್ದು ಈ ಕಲ್ಬೆಟ್ಟಕ್ಕೆ ಬಂದೆನೋ ಎಂದು ಸಂಕಟವಾಯಿತು. ಆದರೆ ಅದು ಅಲ್ಪಕಾಲ ಮಾತ್ರ. ಆತನ ಆತ್ಮದ ಗೂಢ ಗುಹೆಯಲ್ಲಿ ಕುಳಿತ ಪರಂಜ್ಯೋತಿ ಪಕ್ಷಿ ಕೂಗಿ ಹೇಳಿತು—

'ಮೋಹ ಬೇಡ. ವಾತ್ಸಲ್ಯವನ್ನು ಸುಟ್ಟಿಲ್ಲದೇ ಆತ್ಮಾರ್ಪಣೆ ಸಲ್ಲದು. ಹುಂ, ಹೊರಳು ತ್ಯಾಗಕ್ಕೆ, ದೂಡು ದಾಹವನ್ನು'

ಅಬ್ಬಾ ಎಂಥ ಕಠೋರ ಆಜ್ಞೆ! ಆದರೆ ಆ ಪರಂಜ್ಯೋತಿಯೊಂದಿಗೆ ಆರ್ತ ಭಾವನೆಯೊಂದಿಗೆ ಈತ ಮರಳಿ ಕೇಳಿದ—

'ತಂದೆ-ತಾಯಿ-ಬಂಧುಗಳ ವಾತ್ಸಲ್ಯವೂ ತಪ್ಪೆ? ಅದರಲ್ಲೇನು

ದೋಷವಿದೆ? ಅವರೂ ನಿನ್ನ ಪ್ರತೀಕವೆಂದು ತಿಳಿದರಾಗದೆ?'

ಮತ್ತೆ ಅಂತರಂಗದ ಉತ್ತರ—

'ಸುಳ್ಳು, ಅಸಾಧ್ಯ, ಅಸಾಧ್ಯ, ಸಾಧಕನಿಗೆ ಶಿವನೊಬ್ಬನೇ ತಂದೆ, ಶಿವನೊಬ್ಬನೇ ತಾಯಿ, ಶಿವನೊಬ್ಬನೇ ಸಕಲ ಸಂಬಂಧಿ.'

ತರುಣನ ಮನಸ್ಸು ಗಂಭೀರವಾಯಿತು. ಮತ್ತೆ ಕೆಣಕಿ ಕೇಳಿತು.

'ನಿಜ. ಶಿವನೊಬ್ಬನೇ ತಂದೆ–ತಾಯಿ–ಬಂಧು–ಬಳಗ, ಆದರೆ ಲೋಕವೆಲ್ಲವೂ ಶಿವಸ್ವರೂಪವಲ್ಲವೆ? ಅಂದ ಮೇಲೆ ತಂದೆತಾಯಿಗಳೂ ಶಿವಸ್ವರೂಪರು. ಅವರನ್ನೇಕೆ ಪ್ರೀತಿಸಬಾರದು?'

'ಹುಂ! ಇದು ನಿನಗೆ ನೀನೇ ಮಾಡಿಕೊಳ್ಳುವ ಮಹಾಮೋಸ. ಆತ್ಮವಂಚನೆ. ನಿನ್ನನ್ನು ಹಡೆದವರು ಮಾತ್ರ ನಿನ್ನ ತಾಯಿತಂದೆಗಳೆನ್ನುವದು ಕೇವಲ ಸ್ವಾರ್ಥ. ಶಿವಯೋಗಿಗೆ ಲೋಕವೇ ತಾಯಿ, ಲೋಕವೇ ತಂದೆ.'

ತರುಣ ದಿಟ್ಟತನದಿಂದ ಕೇಳಿಕೊಂಡ—

'ಹಾಗಾದರೆ ಶಿವಯೋಗಿಗೂ ಸಂಸಾರವಿದೆಯೇ?'

'ಇದೆ ಏಕಿಲ್ಲ? ಅವನದು ಮಹಾಸಂಸಾರ. ಲೋಕದಲ್ಲಿದ್ದವರೆಲ್ಲರೂ ಅವನ ಸಂಬಂಧಿಕರು.'

'ಹಾಗಾದರೆ ಶಿವಯೋಗಿಗೆ ಸಂಸಾರಿಯೆಂದು ಏಕೆ ಕರೆಯಬಾರದು?'

'ಬಾರದು. ಅದು ತಪ್ಪು, ಆತ ನಿಸ್ಸಂಗಿ, ನಿತ್ಯಾತ್ಮ, ನಿರ್ಲೇಪ, ನಿಷ್ಕಾಮ, ನಿಷ್ಕಳಂಕ, ನಿರೂಪ, ನಿಸ್ಸೀಮ.'

'ಹುಂ.... ವಿಚಿತ್ರ ರೀತಿಯ ಸುಳ್ಳು! ಅವನು ನಿಸ್ಸಂಗೀಯಂತೆ, ಜಗತ್ತೆಲ್ಲಾ ಅವನ ತಂದೆ ತಾಯಿಗಳಂತೆ!! ಇದು ಮತ್ತೊಂದು ರೀತಿಯ ಅಜ್ಞಾನವಲ್ಲವೆ?'

'ಅರಿತು ಆಚರಿಸಿದರೆ ಜ್ಞಾನ. ಮರೆತು ಬೆರೆತರೆ ಅಜ್ಞಾನ. ಕಮಲ ಕೆಸರಿನಲ್ಲಿದ್ದರೂ ಅದಕ್ಕೆ ಪಂಕದ ಸಂಸರ್ಗವಿಲ್ಲ. ಶಿವಯೋಗಿ ಮಹಾಸಂಸಾರಿಯಾದರೂ ನಿತ್ಯ ಮುಕ್ತ. ಆತನ ಆತ್ಮ ಅವಿಮುಕ್ತ ಕ್ಷೇತ್ರ. ಕಾಯ ಕಾಶೀ ಕ್ಷೇತ್ರ.'

ತರುಣ ಸ್ವಲ್ಪ ತಡೆದ. ಮತ್ತೆ ಆ ಮಹಾಮೌನದ ಸರ್ವಜ್ಞಶಕ್ತಿಗೆ—

'ಹಾಗಾದರೆ ಈಗ ಬಂದಿರುವ ನನ್ನ ತಂದೆ ತಾಯಿಗಳನ್ನೂ ಗೌರವಿಸುವದು ತಪ್ಪೆ? ಎಲ್ಲಿಯಾದರೂ ಓಡಿಹೋಗಲೇ?'

'ಬೇಡ. ಶಿವಯೋಗಿಗೆ ಅಂಜಿಕೆ ಸಲ್ಲದು. ಎಲ್ಲಿ ಓಡಿದರೂ ಸಂಸಾರ ಬಿಟ್ಟಿಲ್ಲ. ಸಂಸಾರವನ್ನೇ ಶಿವಸ್ವರೂಪಕ್ಕೆ ತಿರುಗಿಸಬೇಕು. ಈಗ ಬಂದವರೊಂದಿಗೆ ನನ್ನ ತಾಯಿ–ನನ್ನ ತಂದೆ ಎಂಬ ಸ್ವಾರ್ಥಸಂಬಂಧ ಅಹಂಕಾರವನ್ನು ಕಳಚಿ ಚಲ್ಲಿ, ಅವರು ಶಿವಸ್ವರೂಪರು, ಜಂಗಮ ರೂಪದ ಪಾರ್ವತಿ–ಪರಮೇಶ್ವರರೆಂದು ಭಾವಿಸಿ ಗೌರವಿಸಿ, ಸವಿನುಡಿಯಿಂದ ಕಳಿಸು. ಆದರೆ ಎಚ್ಚರಿಕೆ! ಮೋಹ ಯಾವದೇ ಸಮಯದಲ್ಲೂ ನಿನ್ನ ಕಾಲನ್ನು ಎಳೆದು ಚಲ್ಲಬಹುದು. ಎಚ್ಚರಿಕೆ! ಎಚ್ಚರಿಕೆ!!'

ಆತ್ಮ ಪ್ರಜ್ಞಾನದೊಂದಿಗೆ, ಅಂತರಂಗದ ಅರುಹಿನ ಗುರುವಿನೊಂದಿಗೆ ಮಳೆಯಪ್ಪ ಆಪ್ತಾಲೋಚಿಸಿ ಸಂಸಾರವನ್ನು ಎದುರಿಸಲು ಸಿದ್ಧನಾದ ಆಗಂತುಕರಾದ ತಂದೆ–ತಾಯಿಗಳಿಗೆ, ಸ್ವಾಮಿಗಳಿಗೆ ವಂದಿಸಿ, ಗೌರವಿಸಿ. ಅವರಿಗೆ ಪರಿಪರಿಯಾಗಿ ಕೇಳಿಕೊಂಡ, ಕೆಲಕಾಲ ತನ್ನ ಯೋಗವ್ಯಾಸಂಗಕ್ಕೆ ಅನುವು ನೀಡಲು ಕೇಳಿಕೊಂಡ.

ಭಗವಂತನ ಲೀಲೆ ಅಗಾಧವಲ್ಲವೆ? ಆತನು ವಿರಾಟ ರೂಪದಿಂದ ಗೈಯುವ ಪವಾಡಗಳು ಅಪಾರ, ಅದ್ಭುತ, ಕಲ್ಪನಾತೀತ. ಕಲ್ಬೆಟ್ಟವನ್ನು ಏರುವ ಮುಂಚೆ ಯಮಯಾತನೆಯನ್ನು ಸಹಿಸಿದ ತಾಯಿ ಗೌರಮ್ಮ, ಬೆಟ್ಟವನ್ನು ಏರಿ, ಅಲ್ಲಿಯ ವಾತಾವರಣದೊಂದಿಗೆ ಬೆರೆತು ಶಾಂತಿಯ ಮೂರ್ತಿಯಾಗಿದ್ದಾಳೆ. ಆನಂದದ ತವರಾಗಿದ್ದಾಳೆ. ಅವರ ಉದರದಲ್ಲಿ ಅಡಗಿದ ಕ್ಷುದ್ರ ಮಾಯಾಭೂತ ಓಡಿಹೋಗಿದೆ. ಅವಳನ್ನು ಆಳವಾಗಿ ಬಂಧಿಸಿದ ವ್ಯಾಮೋಹದ ಬೇಡಿ ಹುಡಿಹುಡಿಯಾಗಿದೆ. ಅವಳಿಗೆ ಈಗ ಅತೃಪ್ತಿ ಇಲ್ಲ. ಸರ್ವಸಂಗ ಪರಿತ್ಯಾಗಿಯಾಗಿ ಯೋಗಿಯಾಗಲಿರುವ ಮಗನಿಗೆ, ಆಧ್ಯಾತ್ಮದ ದಾರಿಯಲ್ಲಿ ಧೈರ್ಯವಾಗಿ ಮುನ್ನುಗ್ಗಲು ಅಭಯವಾಣಿಯನ್ನು ನೀಡಲು ನಿಶ್ಚಯಿಸಿದ್ದಾಳೆ. ಇದೆಂಥ ಪರಿವರ್ತನೆ! ಇದೆಂಥ ವಿಶ್ವರೂಪಲೀಲಾವಾಸ! ಇದಕ್ಕೇ ಭಗವತ್ ಪ್ರೇರಣೆ, ಶಿವಪ್ರೇರಣೆ, ಹರ ಪ್ರಸಾದ ಎನ್ನುವದು. ಅದರಿಂದ ಕೊರಡು ಕೊನರಬಹುದು. ಬರಡು ಹಯನವಾಗಲು ಬಹುದು. ಅಂತೆಯೇ ವಿಷಮ ಸಂಸಾರದ ವಿಷವ್ಯಾಮೋಹ ಆ ದಂಪತಿಗಳಿಬ್ಬರಿಂದ

ದೂರವಾಗಿ, ಅವರಲ್ಲಿ ಶಿವಧರ್ಮ ಅರಳಿತು. ತಮ್ಮ ಮಗಗೈದುದೇ ಸರಿ. ಆತ ಪುಣ್ಯಾತ್ಮನೆಂದು ಕೊಂಡಾಡಿದರು.

ಎಲ್ಲವೂ ಮುಗಿಯಿತು. ನಿಷ್ಕಾಮ ರೂಪದ ಆತ್ಮೀಯತೆಯಿಂದ ಭಕ್ತಿ ಕಂಪನಗಳಿಂದ ತಂದೆ–ತಾಯಿಗಳ ದರ್ಶನವಾಯಿತು. ಅಲ್ಲಿಗೆ ಆತನ ಪೂರ್ವಾ–ಶ್ರಮ ತಪ್ಪಿ ಆತ ಅತ್ಯಾಶ್ರಮಿಯಾದ. ಸಕಲ ಜೀವರಾಶಿಗಳಿಗೆ ಲೇಸನೆ ಬಯಸುವ ಪಾವನ ಶರಣನಾದ. ಸತ್ಯಕ್ಕೆ ಶಂಕರನಾದ.

# ಬಳ್ಳಾರಿಗೆ ಹೋಗು....

ಯೋಗಿಯ ಚರಿತ್ರೆಯನ್ನು ಯೋಗಿಯೇ ಬಲ್ಲ. ಸಾಮಾನ್ಯರಿಗೆ ಅದನ್ನು ಊಹಿಸುವದೂ ಸಾಧ್ಯವಿಲ್ಲ. ಕಾರಣ ಅವರು ಮನೋಮಯ–ಪ್ರಾಣಮಯ–ಅನ್ನಮಯ ಕೋಶಗಳಿಂದ ಅತೀತರಾಗಿರುತಾರೆ. ಅಂಥವರನ್ನು ನಮ್ಮ ಸಂಕುಚಿತವಾದ ಮನಸ್ಸಿನ ಇಂಚುಪಟ್ಟಿಯಿಂದ ಅಳೆಯಲು ಸಾಧ್ಯವೆ? ಭೂಮಿಯನ್ನಾದರೆ ಅಳೆಯಬಹುದು. ಆದರೆ ಆಕಾಶವನ್ನೇನಾದರೂ ಅಳೆದು ಅದರ ಉದ್ದ-ಅಗಲಗಳನ್ನು ಹೇಳಲಾದೀತೆ? ಆಕಾಶ ಎಷ್ಟು ದೊಡ್ಡದಿದೆ ಯೆಂದು ಕೇಳಿದರೆ ಒಬ್ಬನು ಆಕಾಶದಷ್ಟೇ ದೊಡ್ಡದಿದೆಯೆಂದು ಹೇಳಿದನಂತೆ. ಅದಕ್ಕಿಂತ ಬೇರೆ ಉತ್ತರವನ್ನು ಕೊಡುವ ಪುಣ್ಯಾತ್ಮ ಜಗತ್ತಿನ ಮೇಲೆ ಇನ್ನೂ ಹುಟ್ಟಿ ಬಂದಿಲ್ಲ. ಅಂದ ಮೇಲೆ ಮಳೆಯಪ್ಪ ದಿವ್ಯ ಯೋಗದ ಸಾಧಕನಾಗಿ, ಕಲ್ಬೆಟ್ಟದಲ್ಲಿ ಗೈದ ಸಾಧನೆ, ಆತನ ಅಂತರಂಗದ ವಿಕಾಸ, ಆತ್ಮದ ಔನ್ನತ್ಯ, ಅನುಭಾವದ ಅಗ್ನಿಪರ್ವತಗಳನ್ನು ಲೌಕಿಕರು ಊಹಿಸು ವದು ಸಾಧ್ಯವೆಂತು? ಕಲ್ಬೆಟ್ಟದಲ್ಲಿ ಆತ ಅವಿರಳ ಆನಂದದ ನಿರಾಳ ಹೊಂಡ ದಲ್ಲಿ ಕಂಡದ್ದನ್ನು ಕಂಡಂತೆ, ಉಂಡದ್ದನ್ನು ಉಂಡಂತೆ ಹೇಳುವ ಧೈರ್ಯ ಯಾರಿಗಿದೆ?

ಕಲ್ಬೆಟ್ಟದ ಈ ತರುಣ ಸಾಧಕ ಇಂದ್ರಿಯ ವಿಜಯವನ್ನು ಸಾಧಿಸಿದ. ವಿಜಯದಿಂದ ಮಹಾಂತತೆಗೆ, ಮಹಾಂತತೆಯಿಂದ ವಿಜಯಕ್ಕೆ ಸೇತುವೆಕಟ್ಟಿ ವಿಜಯ ಮಹಾಂತನಾಗುವ ಪ್ರಬಲ ಸಾಮರ್ಥ್ಯವನ್ನು ಸಾಧಿಸಿದ.

ಯೋಗದ ಮೆಟ್ಟಲುಗಳನ್ನು ಏರುತ್ತಿದ್ದಾನೆ. ಆದರೆ ಆ ಮೆಟ್ಟಲು ಗಳನ್ನು ಎಣಿಸುವವರು ಯಾರು? ಕಲ್ಪನೆಯಿಂದ ಊಹಿಸಲೂ ಸಾಧ್ಯವಿಲ್ಲದ ಆ ನಿಲುವನ್ನು ಮಾತಿನ ವ್ಯಂದ್ವಾರ್ಥಕ್ಕೆ ತಂದು ಸಿಲುಕಿಸುವವರಾರು? ಆತನ ದೇಹದ ಬಣ್ಣ ಕೆಲವಮಟ್ಟಿಗೆ ಕಪ್ಪಾಗಿದ್ದರೂ ನೀರಲ ಹಣ್ಣಿನ ಹೊಳಪಿಗೆ ತಿರುಗುತ್ತಿದೆ. ಕೂದಲುಗಳು ರೇಶಿಮೆಯಂತೆ ನಯವಾಗುತ್ತಿವೆ. ಗಂಗಾಜಲ ಶಿವಜಡೆಯಿಂದ ಉಕ್ಕಿ ಹರಿದಂತೆ ಗಡ್ಡ–ಮೀಸೆಗಳು ಶಿವಸಾಕ್ಷಾತ್ಕಾರದ ಬಾವುಟ ಹಿಡಿದು ಮೆಲ್ಲನೇ ಜಿಗಿದು ಬರುತ್ತಿವೆ. ಕಣ್ಣುಗಳನ್ನಂತೂ ನೋಡು ವುದೇ ಸಾಧ್ಯವಿಲ್ಲ. ಅವುಗಳಲ್ಲಿ ಏನೋ ಇದ್ರೆ ಯಾವುದೋ ಶಕ್ತಿಸಂಚಯವಿದೆ.

ಮಾನವನ ಬರಿಗಣ್ಣುಗಳು ಆ ಲಿಂಗದರ್ಶನದ ಕಣ್ಣುಗಳನ್ನು ಕ್ಷಣ ಸಹ ನೋಡಲು ಅಸಾಧ್ಯವಾಗಿವೆ.

ತರುಣಯೋಗಿಯಿಂದ ಕಲ್ಬೆಟ್ಟ ಲಿಂಗಬೆಟ್ಟವಾಯಿತು. ನವಚೈತನ್ಯ ದಿಂದ ಹೊಸ ಸ್ಫೂರ್ತಿಯಿಂದ ಕಂಗೊಳಿಸಿತು. ಈತನಿಗೆ ನೆರವಾದ ವೃದ್ಧ ತಪಸ್ವಿ ತಬ್ಬಿಬ್ಬಾದ. ದಿವ್ಯ ಜೀವಿಯೊಂದಕ್ಕೆ ನಾನು ಮೊದಲು ಆಶ್ರಯ ವನ್ನು ನೀಡಿದೆ ಎಂದು ಸಂತುಷ್ಟನಾದ, ಈತನಿಗೆ ಮೊದಲು ಬುದ್ಧಿವಾದ ಹೇಳಿ ಮಾರ್ಗದರ್ಶನ ನೀಡಿದ ಹಲವಾರು ಸಾಧಕರು ಮೆಲ್ಲನೇ ಅಂತರಂಗ ದಲ್ಲಿ ಇವನ ಶಿಷ್ಯರಾದರು. ಕಲ್ಬೆಟ್ಟದ ಹತ್ತು ದಿಕ್ಕಿಗೂ ಈತನ ಉಗ್ರ ಅನು ಷ್ಠಾನ ವ್ರತಗಳ ಪರಿಚಯ ಹರಡಿತು.

ಆದರೆ ಮಳೆಯಪ್ಪನಿಗೆ ಇವಾವವೂ ಬೇಡ. ಆತನಿಗೆ ಶಿವಪಥವೊಂದೇ ಸಾಧ್ಯ ಸಾಧನವಾಯಿತು. ಜಂಗಮ ಪ್ರೇಮವೇ ಅಂತರಾರ್ಥವಾಯಿತು. ಲಿಂಗಪೂಜೆಯೇ ಮಹಾಭ್ಯಾಸವಾಯಿತು.

ಯೋಗ ಜೀವನ ಸಫಲವಾಗಿ ಸಾಗಿತು. ಆದರೆ ಅಂತರಂಗದಲ್ಲಿ ಮತ್ತೂ ಅತೃಪ್ತಿ. ಅದು ಸಂಸಾರಿಕ ವೈಫಲ್ಯದಿಂದ ಉಂಟಾಗುವ ಅತೃಪ್ತಿ ಯಲ್ಲ. ಅದು ಜ್ಞಾನಮಾರ್ಗದ ಅತೃಪ್ತಿ. ಮಳೆಯಪ್ಪನಿಗೆ ಆಗಲೇ ಸಸಿವಾ- ಳದ ಮಠದಲ್ಲಿ ಹಾಗೂ ಕಲ್ಬೆಟ್ಟದ ತಪಸ್ವಿಗಳ ಸಾನಿಧ್ಯದಲ್ಲಿ ಬಸವ–ಅಲ್ಲಮ ಪ್ರಭು–ಅಕ್ಕಮಹಾದೇವಿ–ಚನ್ನಬಸವೇಶ್ವರ–ಸಿದ್ಧರಾಮಯ್ಯ ಮೊದಲಾದ ಶಿವಶರಣರ ವಚನಗಳ ಗಾಢವಾದ ಪರಿಚಯವಾಗಿತ್ತು; ನಿಜಗುಣ ಶಿವ ಯೋಗಿಯ ಶಾಸ್ತ್ರಾಧ್ಯಯನ ಕೆಲಮಟ್ಟಿಗೆ ದೊರೆತಿತ್ತು. ಅಲ್ಲದೇ ಶೂನ್ಯ ಸಂಪಾದನೆ, ಲಿಂಗಲೀಲಾವಿಲಾಸಚಾರಿತ್ರ, ಏಕೋತ್ತರ ಶತಸ್ಥಲ, ಶತಕತ್ರಯ ಬಸವಪುರಾಣ, ಬಸವರಾಜದೇವರ ರಗಳೆ, ಚನ್ನಬಸವಪುರಾಣ, ರಾಜಶೇಖರ ವಿಳಾಸ, ಪ್ರಭುಲಿಂಗಲೀಲೆ, ಗುರುರಾಜ ಚಾರಿತ್ರ ಮೊದಲಾದ ಕಾವ್ಯಗಳ ಸ್ವಾಧ್ಯಾಯವೂ ಕೆಲಮಟ್ಟಿಗೆ ನಡೆದಿತ್ತು. ಆದರೆ ಸಂಸ್ಕೃತ ಮಾತ್ರ ಕಬ್ಬಿಣದ ಕಡಲೆಯಾಗಿತ್ತು. ಸಂಸ್ಕೃತಾಧ್ಯಾನಕ್ಕೆ ಸಾಧಾರಣ ಆತುರವೇನೋ ಇತ್ತು, ಆದರೆ ಶಿಕ್ಷಾಗುರುವಿನ ನೆರವಿರಲಿಲ್ಲ. ಸಿದ್ಧಾಂತಶಿಖಾಮಣಿ, ಶಿವಾನುಭವ ಸೂತ್ರ, ಶಿವಾಗಮಗಳು, ಉಪನಿಷತ್ತುಗಳು, ಭಗವದ್ಗೀತೆ ಮೊದಲಾದ ತತ್ತ್ವಗ್ರಂಥಗಳ ಅಧ್ಯಯನಕ್ಕಾಗಿ ವಿಪುಲ ಹಂಬಲದಿಂದ ಕುದಿಯುತ್ತಿದ್ದನು.

ಒಮ್ಮೆ ಬಸವಲಿಂಗಸ್ವಾಮಿಗಳು ಸಸಿವಾಳದಿಂದ ಕಲ್ಬೆಟ್ಟಕ್ಕೆ ಬಂದಾಗ ಮಳೆಯಪ್ಪಾರ್ಯ ತನ್ನ ಜ್ಞಾನಾರ್ಜನೆಯ ಹಸಿವೆಯನ್ನು ಅವರ ಮುಂದೆ ತೋಡಿಕೊಂಡನು. ಅವನ ಕುತೂಹಲ, ಬೌದ್ಧಿಕ ಬೆಳವಣಿಗೆ, ಸಾಮರ್ಥ್ಯ ವಯಸ್ಸು ಮೊದಲಾದವುಗಳ ನಾಡಿ ಪರೀಕ್ಷೆಯನ್ನು ಸ್ವಾಮಿಗಳು ಸೂಕ್ಷ್ಮವಾಗಿ ಪರೀಕ್ಷಿಸಿ, ಕೊನೆಗೊಂದು ನಿರ್ಧಾರಕ್ಕೆ ಬಂದು ಸೂಚಿಸಿದರು—

'ಬಳ್ಳಾರಿಯಲ್ಲಿ ಸಕ್ಕರೆ ಕರಡೆಪ್ಪನವರ ಸಂಸ್ಕೃತ ಪಾಠಶಾಲೆ ಇದೆ. ಅದೊಂದೇ ಕರ್ನಾಟಕದಲ್ಲಿ ಈಗ ಸಂಸ್ಕೃತಾಧ್ಯಯನಕ್ಕೆ ಉನ್ನತ ಪೀಠ. ಇನ್ನು ನಿನ್ನ ಕಲ್ಬೆಟ್ಟದ ಅನುಷ್ಠಾನ ಸಾಕು. ನೇರವಾಗಿ ಬಳ್ಳಾರಿಗೆ ಹೋಗು.

# ಶುಭೋದಯಕ್ಕೆ ಪೂರ್ವರಂಗ

ಬಳ್ಳಾರಿಯ ಸಕ್ಕರೆ ಕರಡೆಪ್ಪನವರೆಂದರೆ ಯಾರಿಗೆ ತಾನೆ ಗೊತ್ತಿಲ್ಲ ? ಗೊತ್ತಿರದಿದ್ದರೆ ಅದು ಅವರ ಪಾಲಿನ ದುರ್ದೈವವೆನ್ನಬೇಕು. ಇವರು ಲಕ್ಷ್ಮೀ ಪುತ್ರರಲ್ಲ, ಲಕ್ಷ್ಮಿಯೇ ಇವರ ಚರಣದಾಸಿ. ಲೌಕಿಕದಲ್ಲಿ ದುಡ್ಡು ಒಂದು ಪ್ರಚಂಡ ಶಕ್ತಿ. ಐಶ್ವರ್ಯವನ್ನು ಅಂಕಿತದಲ್ಲಿಡಬೇಕಾದರೆ ನಾವು ಮೊದಲು ಅದರ ಅಂಕಿತದಿಂದ ಮೀರಬೇಕು. ಅಂದರೆ ಇದ್ದ ಹಣವನ್ನು ತೂರಬೇಕೆಂದು ಇದರರ್ಥವಲ್ಲ. ಹಾಗೆ ತೂರಿದರೆ ಅದು ಮತ್ತೊಂದು ವಿಧದಾದ ಹೇಡಿತನ ವಲ್ಲದೇ ಇನ್ನೇನು ? ಮೊದಲು ಧನದಾಸೆಯನ್ನು ತೊರೆಯಬೇಕು. ದುಡ್ಡಿನ ವ್ಯಾಮೋಹ ಕಳಚಬೇಕು. ಸಂಪತ್ತೆಲ್ಲಾ ಶಿವನದು, ನಾನು ಮಾತ್ರ ಶಿವನಿಚ್ಛೆ ಯಂತೆ ಬಳಸುವವ, ಎಂಬ ನಮ್ರ ಭಾವನೆ ಬೇರೂರಬೇಕು.

ಆದ್ದರಿಂದಲೇ ಬಳ್ಳಾರಿಯ ಸಕ್ಕರೆ ಕರಡೆಪ್ಪನವರು ಲಕ್ಷ್ಮಿಯ ಮಡೆಯ ರಾಗಿದ್ದಾರೆ. ನಿಜವಾಗಿಯೂ ಲಕ್ಷ್ಮಿಪತಿಯಾಗಿದ್ದಾರೆ. ಕಾರಣ, ಧನದ ವ್ಯವಹಾರದ ಗುಟ್ಟನ್ನು ಅರಿತಿದ್ದಾರೆ. ನಿರ್ಮೋಹಿಯಾಗಿ ಗುರು–ಲಿಂಗ–ಜಂಗಮಕ್ಕೆ ನೀರುಣಿಸಿದಂತೆ ಉಣಿಸಿದ್ದಾರೆ. ಸಮುದ್ರಕ್ಕೆ ಹೊಳೆಗಳು ಸೇರಿ ದಂತೆ, ಅವರು ದಾನಗೈದ ಹಣದ ರಾಶಿ ನಾಲ್ಕಕ್ಕೆ ನೂರಾಗಿ ಕೂಡಿ ಬೀಳುತ್ತಿದೆ.

ಬಳ್ಳಾರಿ ವ್ಯಾಪಾರ–ಉದ್ದಿಮೆ–ಕೃಷಿ–ವ್ಯವಸಾಯಗಳಿಗೆ ಕೇಂದ್ರಸ್ಥಾನ. ಎಲ್ಲರೂ ಪಾಪಭೀರುಗಳು. ಸದಾಚಾರ ನಿರತರು. ಧರ್ಮಪರಾಯಣರು. ಎಲ್ಲರ ಮುಖದ ಮೇಲೆ ಲಿಂಗಕಳೆ, ಲಿಂಗಭಾವ. ಸಂಸಾರ ಸರಳ ಮಾರ್ಗ ವಾಗಿದೆ. ಜೀವನ ಜಂಗಮ ವಿವೇಕವಾಗಿದೆ. ಇಂಥ ವಿಮಲಾಚಾರದ ಪ್ರಭಾವ ದಲ್ಲಿ ಬೆಳೆದ ಕರಡೆಪ್ಪನವರಿಗೆ ಐಶ್ವರ್ಯ, ಅಧಿಕಾರ, ಭೋಗ, ತಾರುಣ್ಯಗಳು ತೃಣಸಮಾನವಾಗಿ ಕಂಡವು. ತಮ್ಮ ದೇಹ–ಪ್ರಾಣ–ಮನಗಳನ್ನು ಶಿವಾಚಾರಕ್ಕೆ ಮೀಸಲಿರಿಸಿದರು. ಭಂಡಾರದ ಬೀಗವನ್ನು ಜಂಗಮದಾಸೋಹಕ್ಕೆ ಮುರಿದರು. ಸಮಗ್ರ ಕನ್ನಡನಾಡಿನಲ್ಲಿ ಸಂಸ್ಕೃತಾಧ್ಯಯನದ ಮಹಾಬಡತನ ಎದ್ದು ಕಾಣು ತ್ತಿತ್ತು. ದುಡ್ಡಿದ್ದವರು ಕಾಶಿಗೆ ಹೋಗುತ್ತಿದ್ದರು. ಇಲ್ಲದವರು ಮಠದಯ್ಯಗಳಾಗಿ ಸುಮ್ಮನಿರುತ್ತಿದ್ದರು. ಈ ಮೊದಲೆ ಕನ್ನಡ ನಾಡಿನಲ್ಲಿ

ಆಳರಸರು ನಡೆಸುತ್ತಿದ್ದ ಸಂಸ್ಕೃತ ವಿದ್ಯಾಪೀಠಗಳು ನೆಲಸಮವಾಗಿದ್ದವು. ಅನೇಕ ಮಠಾಚಾರ್ಯರು ನಡೆಸುತ್ತಿದ್ದ ಪಾಠಶಾಲೆಗಳು ನಿಷ್ಕ್ರಿಯವಾಗಿದ್ದವು. ಈ ಬರಗಾಲದ ಕೊರಗನ್ನರಿತು, ಶಿವನಾಣತಿಯೆಂದು ತಿಳಿದು ಸಕ್ಕರೆ ಕರಡೆಪ್ಪನವರು ಒಂದು ಸಂಸ್ಕೃತ ಪಾಠಶಾಲೆಯನ್ನು ಉಚಿತವಾಗಿ ತೆರೆದರು. ವೇದ–ವೇದಾಂತ-ಸಾಹಿತ್ಯ-ಸಂಗೀತ–ತರ್ಕ–ವ್ಯಾಕರಣ–ಅಲಂಕಾರ–ಜ್ಯೋತಿಷ-ವೈದ್ಯಶಾಸ್ತ್ರಗಳಲ್ಲಿ ಪ್ರವೀಣರಾದ ಪಂಡಿತರನ್ನು ನಿಯಮಿಸಿ ಅವರಿಗೆ ಸಂಬಳವನ್ನು ನೀಡುತ್ತಿದ್ದರು. ವಿದ್ಯಾರ್ಥಿಗಳಿಗೂ ಉಚಿತವಾಗಿ ಅನ್ನದಾಸೋಹ, ವಸತಿ ವಸ್ತ್ರ ಹಾಗು ಗ್ರಂಥಗಳನ್ನು ಒದಗಿಸುತ್ತಿದ್ದರು. ಹೀಗಾಗಿ ಅದೊಂದು ಕರ್ನಾಟಕ ಸಂಸ್ಕೃತಿಯ ನೆಲೆಬೀಡಾಗಿ ಸಂಸ್ಕೃತ ವ್ಯಾಸಂಗದ ವಿದ್ಯಾಶಾಲೆಯಾಗಿ ಬೆಳೆಯತೊಡಗಿತ್ತು. ನೂರಾರು ವಿದ್ಯಾರ್ಥಿಗಳು ಅದರ ಲಾಭಪಡೆದರು. ಆದರೆ ಅದನ್ನು ಆರಂಭಿಸುವಾಗ ಸಕ್ಕರೆ ಕರಡೆಪ್ಪನವರಿಗೆ ಭವಿಷ್ಯದಲ್ಲಿ ವೀರವ್ರತಿಯೊಬ್ಬ ಇಲ್ಲಿ ಬರುತ್ತಾನೆ ಎಂದು ಹೇಗೆ ತಾನೆ ತಿಳಿದೀತು. ?

# ದಾರಿಯಲ್ಲಿಯ ಸವುತೇಕಾಯಿ

ಕಲ್ಬೆಟ್ಟದ ಪುಣ್ಯ ತೀರಿತು. ತರುಣ ಶಿವಯೋಗಿ ಹೊರಟು ನಿಂತ.

'ಶಿವನಿಚ್ಛೆ, ಶಿವಸಂಕಲ್ಪ. ಅದನ್ನು ಮೀರಲಾರೆ. ಅದೆಷ್ಟು ಕಠೋರ ವಿದ್ದರೂ ನನಗೆ ಅದು ಮೋಹಕ. ಕರಗಸದಂತೆ ಕೊಯ್ದರೂ ಆನಂದ. ಬೆಂಕಿ ಯಂತೆ ಸುಟ್ಟರೂ ಹಿತ.' ಎಂದು ತರುಣಯೋಗಿ ಆತ್ಮದಲ್ಲೇ ನುಡಿದು, ಬಾಹ್ಯದಲ್ಲಿ ಎಲ್ಲರಿಗೂ ಸಮಾಧಾನ ಅರುಹಿದ. ಆತನ ನಿಷ್ಠುರವಾದ ಯಮ ನಿಯಮಗಳನ್ನು ಮೀರಿ, ವೈರಾಗ್ಯವನ್ನು ಕೊಸರಿ ಕಣ್ಣೀರುಗಳು ಉದುರಿದವು. ಪಾದಗಳು ಮುನ್ನಡೆದವು. ಕಲ್ಬೆಟ್ಟ ಹಿಂದಾಯಿತು. ಯೋಗಭೂಮಿ ಮರ ವಟ್ಟು ನಿಂತಿತು. ಸುತ್ತಣ ಅರಣ್ಯ ನಿರ್ವಿಣ್ಣವಾಯಿತು. ರಾಜನಿಲ್ಲದ ಅರ ಮನೆಯಂತೆ, ಗುರುವಿಲ್ಲದ ಮಠದಂತೆ, ಪತಿಯಿಲ್ಲದ ಸತಿಯಂತೆ ಅನಾಥ–ವಾಯಿತು ! ದಿಕ್ಕಿಲ್ಲದ ದುರ್ದೈವಿಯಾಯಿತು !! ತಾಯನಗಲಿದ ತಬ್ಬಲಿ–ಯಾಯಿತು !!!

ಬೇಸಿಗೆಯ ಬಿಸಿಲು. ನೆತ್ತಿ ಹೊಗೆಯಾಡುತ್ತಿದೆ. ನೆಲ ಬೆಂಬೂದಿ ಯಾಗಿದೆ. ಕಾಲಲ್ಲಿ ಧರಿಸಲು ಏನೂ ಇಲ್ಲ! ಬರಿಯ ಬರಿಗಾಲು!! ಆದರೂ ಮಳೆಯಪ್ಪ ದೇಹವನ್ನು ದೂಕಿಕೊಂಡು ನಡೆದ ಆಗಿನಕಾಲದಲ್ಲಿ ಹಾಸನ ಹಾಗೂ ಚಿತ್ರದುರ್ಗದಿಂದ ಬಳ್ಳಾರಿ ಸಂತೆಗೆ ವ್ಯಾಪಾರದ ಸರಕನ್ನು ತುಂಬಿ ಕೊಂಡು ಸಾರಿಗೆಯ ಬಂಡಿಗಳು ಹೋಗುತ್ತಿದ್ದವು. ಅಲ್ಲಿಂದ ಜೋಳ–ಗೋದಿ ಅಕ್ಕಡಿಯಕಾಳುಗಳನ್ನು ಹೇರಿಕೊಂಡು ತಿರುಗಿ ಬರುತ್ತಿದ್ದವು. ಈ ಸಾರಿಗೆಯ ಬಂಡಿಯವರೊಂದಿಗೆ ಮಳೆಯಪ್ಪ ಪಾದಚಾರಿಯಾಗಿ ಬರಿಗಾಲಿನಿಂದ ನಡೆದ. ಅನೇಕರು ಇವನ ಶಿವತೇಜದಿಂದ ಆಕರ್ಷಿತರಾಗಿ ತಮ್ಮ ಬಂಡಿಯನ್ನು ಏರಲು ಕೇಳಿದರು. ಈತ ಒಪ್ಪಲಿಲ್ಲ. ಬ್ರಹ್ಮಚಾರಿ ಯಾರ ಸಹಾಯಗಳನ್ನೂ ಬಳಸ ಬಾರದೆಂದು ಆತನ ಕಡು ಸಂಕಲ್ಪ. ಒಂದನ್ನು ಬಯಸಿದರೆ ಮತ್ತೊಂದು ಆಶೆ ಬಂದು ನಿಲ್ಲುತ್ತದೆ. ಅಂತೆಯೇ ಮಳೆಯಪ್ಪ ಚಕ್ಕಡಿಯಲ್ಲಿ ಹತ್ತಲಿಲ್ಲ. ಕಾಲಿಗೆ ಜೋಡನ್ನು ಹಾಕಿದರೆ, ಮುಂದೆ ಆ ಜೋಡು ಮತ್ತೊಂದನ್ನು ಬಯ ಸೀತೆಂದು ಆತನಿಗೆ ಪೂರ್ವವಿವೇಕವೆಂದು ಕಾಣುತ್ತದೆ. ಕಠೋರವಾದ ನಿಯ

ಮದಿಂದ ಅವನಿಗೂ ಮತ್ತೂ ಮತ್ತೂ ಆನಂದವೇ ಒದಗುತ್ತಿತ್ತು. ಈತನ ಅಪಾರ ಸಂಯಮವನ್ನು ಕಂಡು ಓರ್ವ ಬಂಡಿಯವ ಕೇಳಿದ—

'ತಾವು ಯಾವೂರವರು ಬುದ್ಧಿ ?'

ಈತ ಉತ್ತರಿಸಿದ—

'ನಿಮ್ಮೂರಿನವನೇ'

ಈ ಮಾತಿಗೆ ಬಂಡಿಯವ ದಂಗು ಬಡಿದ. ಮತ್ತೆ ಕೇಳಿದ—

'ನಿಮ್ಮ ತಂದೆ–ತಾಯಿಗಳು ?'

'ನೀವೇ'

ಬಂಡಿಯವ ತೆರೆದಬಾಯಿ ಕೂಡಿಸಲಿಲ್ಲ. ಆಶ್ಚರ್ಯದಿಂದ ತಬ್ಬಿಬ್ಬಾಗಿ ಹೋದ.

ಇನ್ನೊಂದು ಸಲ ಒಬ್ಬಳು ಹಳ್ಳದ ಹತ್ತಿರ ಎತ್ತಿನ ಕೊಳ್ಳು ಬಿಚ್ಚಿಸಿ ಕೆಳಗೆ ಇಳಿದಳು. ತಾನು ಕ್ಷೇತ್ರ ಪ್ರವಾಸಕ್ಕೆಂದು ತಂದ ಬುತ್ತಿಯ ಗಂಟನ್ನು, ತನ್ನ ಮಕ್ಕಳ ಜೊತೆಗೆ ಚಕ್ಕಡಿಯಿಂದ ಇಳಿಸಿ ಗಿಡದ ನೆರಳಿಗೆ ಬಂದು ಬಿಚ್ಚಿದಳು. ವಿಶ್ರಾಂತಿಗೆಂದು ಮಳೆಯಪ್ಪ ಅಲ್ಲಿಯೇ ಕುಳಿತಿದ್ದ. ಮೂರು ದಿನಗಳಿಂದ ಊಟವಿರಲಿಲ್ಲ. ಆದರೂ ಶಾಂತಿಯಿಂದ ಮೌನವಾಗಿ ಕುಳಿತಿದ್ದಾನೆ. ಅವಳು ತಾನು ಹೊರಟ ಮಲ್ಲಯ್ಯದೇವರು ಇಲ್ಲಿಯೇ ಇದ್ದಾನೆಂದು, ಭಯ ಭಕ್ತಿಯಿಂದ ಜಂಗಮನಿಗೆ ಮೊದಲು ಸಲ್ಲಲೆಂದು, ಊರಿಂದ ತಂದ ಸಜ್ಜಿಯ ರೊಟ್ಟಿ, ಮುಳಗಾಯಿಯ ಎಣಗಾಯಿ, ಪುಂಡಿಪಲ್ಲೆ, ಕಡಲೆ ಉಸುಳಿ, ಮೊಸರು, ಮೆಣಸಿಂಡಿ, ಕಂಚಿಉಪ್ಪಿನಕಾಯಿ, ಸಂಡಿಗೆ, ಕರಚೀಕಾಯಿ, ಹುರಕ್ಕೀ ಹೋಳಿಗೆ, ಕಲಸನ್ನ, ಮೊಸರನ್ನ, ಎಳೆಯ ಮೆಣಸಿನಕಾಯಿ ಹಾಗೂ ಒಂದು ಸೌತೆಕಾಯಿ ಎಲ್ಲವನ್ನೂ ಒಂದು ಅಗಲವಾದ ತಾಟಿನಲ್ಲಿ ಎಡೆಮಾಡಿ ಜಂಗಮನ ಮುಂದೆ ತಂದಿಟ್ಟಳು. ಈತ ಕಣ್ಬಿಟ್ಟು ನೋಡಿದ. ಎಲ್ಲವೂ ವ್ಯಾಮೋಹಕವಾದ ಭಕ್ಷ್ಯಗಳೇ. ಎಲ್ಲವೂ ಇಂದ್ರಿಯ ಭೋಗಕಾರಕಗಳೇ. ಇದು ಪ್ರಸಾದವಲ್ಲ; ಶಿವನ ಪರೀಕ್ಷೆಯೆಂದು ಆತ ಭಾವಿಸಿದ. ಆ ಹರವಾದ ತಾಂಬಡಿಯನ್ನು ನೋಡಿದ. ಲಿಂಗಕ್ಕೆ ಸಲ್ಲಲು ಅಲ್ಲಿಯ ಸಾತ್ವಿಕ ಆಹಾರವಾದ ಸೌತೆಕಾಯಿ ಒಂದೇ ಯೋಗ್ಯವೆಂದು ಗ್ರಹಿಸಿದ. ಅದನ್ನೊಂದೇ ತೆಗೆದು

ಕೊಂಡು ಸೇವಿಸಿದ. ಆಯಿತು, ಅಷ್ಟಕ್ಕೆ ಆ ದಿವಸದ ಪ್ರಸಾದ. ಉಳಿದು ದನ್ನು ಮರಳಿಕೊಟ್ಟ. ಕಕ್ಕಾವಿಕ್ಕಿಯಾಗಿ ಅವಳು ಕೇಳಿದಳು—

'ಅಪ್ಪಾ ಯಾಕೆ'

'ಸಾಕು ತಾಯಿ'

'ಅದು ಹೇಗೆ ತಂದೆ. ಒಂದೇ ಸೌತೆಕಾಯಿ ತಿಂದಿರಿ ?'

'ಲಿಂಗಯ್ಯನಿಗೆ ಅದೊಂದೇ ಬೇಕಾಗಿತ್ತು ತಾಯಿ ?

ಆಯ್ತು. ಅವಳೂ ಗಾಬರಿಗೊಂಡಳು. ಇಂಥ ಜಂಗಮನನ್ನು ಕಂಡದ್ದು ಅವಳು ತನ್ನ ಆಯುಷ್ಯದಲ್ಲಿ ಇದೇ ಮೊದಲು. ತನ್ನ ಊರಿಗೆ ಬಂದ ಜಂಗಮರನ್ನು ಊಟಕ್ಕೆ ಕರೆದರೆ, ಮೂರುದಿನಗಳ ಮುಂದಿನ ಊಟವನ್ನು ಒಮ್ಮೊಮ್ಮೆ ಮುಗಿಸಿ ಹೋದವರನ್ನು ಕಂಡಿದ್ದಳು ! ಒಬ್ಬರನ್ನು ಕರೆದರೆ ನಾಲ್ವರು ಬಂದು, ತಟ್ಟೆಬುಟ್ಟಿಗಳನ್ನೆಲ್ಲ ಖಾಲಿ ಮಾಡಿದ್ದನ್ನು ನೋಡಿದ್ದಳು !! ಆದರೆ ಇಂದು ಇದೆಂಥ ವಿಚಿತ್ರ ?

# ಮಳೆಯಪ್ಪಯ್ಯ-ಕರಡೆಪ್ಪರ ಸಂದರ್ಶನ

ಸಕ್ಕರಿ ಕರಡೆಪ್ಪನವರು ಕಂಡ ಮುನ್ಸೂಚನೆ ನಿಜವಾಯಿತು. ಮಳೆಯ-ಪ್ಪಯ್ಯ ಬಳ್ಳಾರಿಯನ್ನು ತಲುಪಿ, ಊರ ಹೊರಗಿನ ತೋಟವೊಂದರಲ್ಲಿ ಸ್ನಾನ ಮಾಡಿದಾಗ ಆಗಲೇ ಮಧ್ಯಾಹ್ನ ಉರಿಯುತ್ತಿತ್ತು. ಸೂರ್ಯ ಆಕಾಶದ ನೆತ್ತಿಯ ಸಿಂಹಾಸನದಲ್ಲಿ ವಿರಾಜಮಾನನಾಗಿದ್ದ, ಈತನಿಗೆ ಹಸಿವೆಯ ಪರಿವೆ ಇಲ್ಲ. ವಿಶ್ರಾಂತಿಯ ಆಶೆ ಇಲ್ಲ. ಲಿಂಗಪೂಜೆ ಹಾಗೂ ಜ್ಞಾನಾರ್ಜನೆಯ ಒತ್ತಾಸೆ. ಬಾಳೆಯ ತೋಟದ ಪ್ರಶಾಂತ ಪರಿಸರ, ಬಿಸಿಲನ್ನು ಅಳಿಸಿ ಹಾಕುವ ನೆಳಲು ಅಲ್ಲಲ್ಲಿ ತೆಂಗಿನ ಮರಗಳ ತೋಪು. ಕಪ್ಪಲಿ ಬಾವಿ. ನೀರುಣಿಸುವ ಕಾಲುವೆಗಳು. ಪಕ್ಕಪಕ್ಕದಲ್ಲೇ ಪಚ್ಚ ಹಸುರಾಗಿ ಬೆಳೆದ ಮೂಲಂಗಿ. ಸಬ್ಬ ಸಗಿ, ಮೆಂತೆ ಮೊದಲಾದ ಸಸ್ಯಗಳು. ಎಲ್ಲವೂ ಚೆನ್ನಾಗಿತ್ತು. ಆ ದಿನ ಮಧ್ಯಾಹ್ನದ ಲಿಂಗಪೂಜೆ ಸ್ವಲ್ಪ ನಿಧಾನವೇ ಆಯಿತು. ಅದು ಬಳ್ಳಾರಿ ಯಲ್ಲಿ ಮೊದಲನೇ ಲಿಂಗೆಪೂಜೆಯುಲ್ಲವೆ ? ಜ್ಞಾನೋದಯದ ಶುಭೋದಯ ದಂತೆ ಪ್ರಶಾಂತ ಪ್ರಗಲ್ಭವಾಗಿ ಕಂಗೊಳಿಸಿತು. ಅಲ್ಲದೆ ಲಿಂಗಪೂಜಕನಿಗೆ ಮಹಾ ಆಸ್ತಿಗಳಾದ ಪತ್ರಿ-ಪುಷ್ಪಗಳು ಸ್ವಲ್ಪ ಹೇರಳವಾಗಿಯೇ ದೊರೆತವು ತೋಟದ ಯಜಮಾನ ತನ್ನ ತೋಟಕ್ಕೆ ಎಂದಿಗೂ ಬಾರದ ಶಿವಪಾದಗಳು ಬಂದಿವೆಯೆಂದು ಹಿರಿಹಿರಿಹಿಗ್ಗಿದ. ಶಿವಪೂಜೆ ಸುದೀರ್ಘವಾದಂತೆ ಆಶ್ಚರ್ಯ ಪಟ್ಟುಕೊಂಡ. ಮಳೆಯಪ್ಪಯ್ಯನ ಪೂಜೆ ಮುಗಿಯುವ ವೇಳೆಗೆ ಆಗಲೇ ಸೂರ್ಯ ಪಶ್ಚಿಮದ ಬೆಟ್ಟದ ಕಡೆಗೆಸಾಗಿದ್ದ. ಐದು ಗಂಟೆಯ ಕಾಲ ಶಿವ ಪೂಜೆ ! ಕೊನೆಯ ಗುರುಕಾರುಣ್ಯವನ್ನು ಜಂಗಮ ಪ್ರಸಾದವನ್ನೂ ತೀರ್ಥ ರೂಪದಲ್ಲಿ ಸೇವಿಸಿ ಕಣ್ದೆರೆಯುತ್ತಾನೆ. ಎದುರಿಗೆ ತೋಟದ ಯಜಮಾನ ಬಾಳೇಹಣ್ಣು-ಎಳತೆಂಗಿನ ಹಾಲು-ಎಳಗೊಬ್ಬರಿ-ಬೆಲ್ಲ ಇರಿಸಿ ಕೈ ಮುಗಿದು ನಿಂತಿದ್ದಾನೆ!! ಮಳೆಯಪ್ಪಯ್ಯ ಮೌನದಿಂದಲೇ ಅವನ್ನು ಸ್ವೀಕರಿಸಿ ಸೇವಿಸಿದ. ಗಂಭೀರನಾಗಿ ಮುನ್ನಡೆದ. ತೋಟದ ಸಾವುಕಾರ ಹಿಂದಯೇ ಬಂದು ಬೇಡಿಕೊಂಡ—

'ಗುರುಗಳೇ ತಮ್ಮ ಹೆಸರು'

'ಮಳೆಯಪ್ಪಯ್ಯ'

'ತಮ್ಮದು ಯಾವೂರು'

'......................' ಕೇವಲ ಮೌನ

ಮತ್ತೆ ಯಜಮಾನ ಕೇಳಿದ—

'ಈ ಊರಿಗೆ ಬರಲು ಕಾರಣ ?'

'ಸಕ್ಕರೆ ಕರಡೆಪ್ಪನವರ ಪಾಠಶಾಲೆಯಲ್ಲಿ ಸಂಸ್ಕೃತಾಧ್ಯಯನಕ್ಕೆ'

'ಅಲ್ಲಿಯೇ ಇರುವಿರಾ ?'

'ನೋಡಬೇಕು. ಅದು ಉಚಿತ ವಿದ್ಯಾರ್ಥಿನಿಲಯ. ನಮ್ಮ ಶುದ್ಧ ಮಡಿಗೆ ಅನುಕೂಲವಾದರೆ ಮಾತ್ರ ಇರಬಹುದು. ಇಲ್ಲವಾದರೆ ಮತ್ತೆಲ್ಲಿ-ಯಾದರೂ........'

'ಮತ್ತೆಲ್ಲಿಯಾದರೂ ಏಕೆ ? ಇಲ್ಲೇ ನಮ್ಮ ತೋಟದಲ್ಲಿ ಇದ್ದುಬಿಡಿರಿ' ಇಲ್ಲಿಂದ ಕರಡೆಪ್ಪನವರ ಪಾಠಶಾಲೆ ಎರಡೇ ಕೂಗಳತೆ, ದೂರವೂ ಆಗುವದಿಲ್ಲ.'

'ಆಗಲಿ; ಆದರೆ ........'

'ಏನು ಬುದ್ಧಿ........ ?'

'ನನಗೆ ಯಾರ ಮನೆಯಲ್ಲೂ ಇರಲು ಇಷ್ಟವಿಲ್ಲ. ಏಕಾಂತವಾದ ಹುಲ್ಲುಜೋಪಡಿಯೊಂದರಲ್ಲಿ ಮಾತ್ರ ವಾಸಿಸುವವನು. ಅದು ನನ್ನಕೈಯಿಂದಲೇ ಸಿದ್ಧವಾಗಬೇಕು. ಅಂದರೆ ಮಾತ್ರ ಇಲ್ಲಿ ಇರಬಲ್ಲೆ. ಇಲ್ಲವಾದರೆ ......'

ತೋಟದ ಯಜಮಾನ ಮರುಮಾತಿಲ್ಲದೆ --

'ಇಲ್ಲವಾದರೆ ಏಕೆ ? ಇಲ್ಲೇ ಇದ್ದುಬಿಡಿರಿ. ನಿಮ್ಮಿಷ್ಟದಂತೆಯೇ ಆಗ ಬಹುದು. ತಮ್ಮ ಸಂಕಲ್ಪ'

ಎಂದು ಪಾದಕ್ಕೆ ಪೊಡಮಟ್ಟನು.

ಮೌನದಲೇ ಮಳೆಯಪ್ಪ 'ಶಿವನೇ ಶರಣು ಶರಣು' ಎಂದು ನುಡಿದು, ಸಕ್ಕರೆ ಕರಡೆಪ್ಪನವರ ಮನೆಗೆ ಮಾರ್ಗ ಪರಿಚಯ ಕೇಳಿ ಮುನ್ನಡೆದ ಸಸಿವಾಳದ ಪುಟ್ಟ ಗ್ರಾಮದಲ್ಲಿ, ಕಲ್ಬೆಟ್ಟದ ಅರಣ್ಯದಲ್ಲಿ ವಾಸಿಸಿದ ಮಳೆಯಪ್ಪನಿಗೆ ಬಳ್ಳಾರಿ ಪಟ್ಟಣದ ಪರಿಚಯ ಮೊದಲ ಬಾರಿಗೆ ಎತ್ತರದ ಸಾಲುಮನೆಗಳು, ವಿಶಾಲ ಬೀದಿ, ಡಮಣಿಗಾಡಿಗಳು ಅವನನ್ನು ಮೊದಲು ಆಕರ್ಷಿಸಿದವು.

ಕರಡೆಪ್ಪನವರ ಮನೆಗೆ ಬಂದಾಗ ಆತನಿಗೆ ದಿಕ್ಕೇ ತೋರಲಿಲ್ಲ. ಮಹಾ ದ್ವಾರವನ್ನು ಕಾಯ್ದುವ ಆಳುಗಳೂ ಸಾವುಕಾರರಂತೆಯೇ ಭರ್ಜರಿ ಆಗಿದ್ದಾರೆ.

ಮಹಾದ್ವಾರದಲ್ಲೊಂದು ಪುಟ್ಟ ಮಹಾದ್ವಾರ. ಪುಟ್ಟ ಮಹಾದ್ವಾರದ-ಲ್ಲೊಂದು ಚಿಕ್ಕ ಮಹಾದ್ವಾರ. ಅದನ್ನು ದಾಟಿದರೆ ದೊಡ್ಡ ಪಟಾಂಗಣ. ಅಲ್ಲಿಯೇ ಸಕ್ಕರಿ ಕರಡೆಪ್ಪನವರ ವೈಭವದ ಮೂರಂತಸ್ತಿನ ಮನೆ. ಪ್ರತಿಯೊಂದು ಬಾಗಿಲಿಗೂ ಆಳುಗಳು. ಬಂದವರನ್ನು ಹೆಸರು-ಪರಿಚಯ ಕೇಳಿಯೇ ಒಳಗೆ ಬಿಡುವವರು ಆದರೆ ಇವನ ಚರ್ಯೆ ಕಂಡು ಯಾರೋ ಮಠದ ಮರಿಗಳಿರಬೇಕೆಂದು ಊಹಿಸಿ ಸುಮ್ಮನೆ ಬಿಟ್ಟರು. ಶ್ರೀಮಂತಿಕೆಯೆಂದರೆ ಹೇಗಿರಬೇಕೊ ಹಾಗಿದೆ ಕರಡೆಪ್ಪನವರ ಮನೆ ಕಟ್ಟಿಗೆಯ ಕುಸುರುಗೆಲಸದ ಮರಶಿಲ್ಪ ಸಿಂಹ ರೀತಿಯಲ್ಲಿ ಎದ್ದು ಕಾಣುತ್ತಿದೆ. ಮನೆಯ ತುಂಬ ಎಲ್ಲಿ ನೋಡಿದರೂ ನಯನ ಮನೋಹರವಾದ ಕಾಜಿನ ಜುಮ್ಮರಗಳನ್ನೂ ಗುಳಾಪುಗಳನ್ನೂ ನೇತು ಬಿಟ್ಟಿದ್ದಾರೆ. ನೆಲವೆಲ್ಲ ಕಾಲಿರಿಸಿದರೆ ಜಾರೀತೆಂಬಂತೆ ಅಮೃತಶಿಲೆಗಳಿಂದ ಅಚ್ಚುಕಟ್ಟಾಗಿದೆ. ಅಲ್ಲಿಯ ತೋಡುಗಳನ್ನು ತೆಕ್ಕೆಗಳನ್ನೂ ನೋಡಿದರೆ ಇಲ್ಲಿಯ ಜನ ಆನೆಯಂತೆ ದೊಡ್ಡವರಿದ್ದಾರೋ ಎಂದು ಭಾಸವಾಗುವಂತೆ ಗಡುತರ ಇವೆ. ಅವುಗಳ ಮೇಲೆ ಭರ್ಜರಿಯ ಕಾಶ್ಮೀರ ಶಾಲುಗಳನ್ನೂ, ಕೆಲವೆಡೆ ಚಿಗರೆಯ ಇಲ್ಲವೆ ಹುಲಿಯ ಚರ್ಮಗಳನ್ನೂ ಹಾಕಲಾಗಿದೆ. ಅಲ್ಲಿ ಗಾಂಭೀರ್ಯವೇ ಮನೆ ಮಾಡಿದೆ. ಸೇವಕರು ಗಟ್ಟಿಸಿ ಮಾತನಾಡಲು ಅಂಜುತ್ತಿದ್ದರು.

ಸೇವಕರು ಮಳೆಯಪ್ಪನ ಉದ್ದೇಶವನ್ನು ಕೇಳಿಕೊಂಡು ಕರಡೆಪ್ಪನವರಿಗೆ ವೃತ್ತಾಂತ ತಿಳಿಸಿ ಬಂದರು. ಕೂಡಲೇ ಒಳಗೆ ಬರಲು ಅನುಮತಿ ಸಿಕ್ಕಿತು. ಒಳಗೆ ಮಂಚದ ಮೇಲೆ ರಾಜಯೋಗಿಯಂತೆ ವಿರಾಜಮಾನನಾಗಿದ್ದಾನೆ ಕರಡೆಪ್ಪ ಮೈತುಂಬ ಭಸ್ಮದ ರೇಖೆಗಳೇ ಕಾಣುತ್ತಿವೆ. ಹರವಾದ ದುಂಡ ಮೊಗ ವಿಸ್ತಾರವಾದ ಕಣ್ಣುಗಳು, ದೊಡ್ಡ ಮೂಗು, ಸದೃಢ ಮೈಕಟ್ಟು, ರಟ್ಟೆಯ ಸ್ನಾಯುಗಳ ಮೇಲೆ ವಿಭೂತಿ ಮತ್ತಷ್ಟು ಎದ್ದು ಕಾಣುತ್ತಿದೆ. ಕೊರಳಲ್ಲಿ ಶುದ್ಧ ಬಿಳಿಯ ಅಂಗವಸ್ತ್ರವಿದೆ. ಕಂಠ ಹಾಗೂ ವಕ್ಷಸ್ಥಲ ಸುಗಂಧಾಂಜನ ಪರಿಮಳ ವಿಭೂಷಿತವಾಗಿದೆ. ನೋಡಲು ರಾಜತೇಜ ! ನುಡಿಯಲು ಭಕ್ತತೇಜ !! ಮಳೆಯಪ್ಪಾರ್ಯನು ಮಾತನಾಡಲು ಹೋಗುತ್ತಾನೆ. ಮಾತೇ ಬರಲೊಲ್ಲವು. ಈತನ ಅಸಹಾಯಕ ಸ್ಥಿತಿಯನ್ನು ಕಂಡು ಕರಡೆಪ್ಪನವರು ನಕ್ಕು ಕೇಳಿದರು.—

'ತಾವು ಯಾವೂರವರು'

'ಸ...ಸ....ಸ....ಸ....'

ಆಯಿತು, ಮಾತೇ ನಿಂತಿತು !

ಕರಡೆಪ್ಪನವರು ಈತನ ಭಯದ ಕಾರಣ ತಿಳಿದು ಸ್ವಲ್ಪ ಕುಳಿತು-ಕೊಳ್ಳಲು ಹೇಳಿದರು. ಕುಳಿತ ಮೇಲೆಯೇ ಮಳೆಯಪ್ಪನಿಗೆ ಗಂಟಲು ಸರಿ-ಯಾದದ್ದು !

ಮಳೆಯಪ್ಪನಿಗೆ ಬಗೆ ಹೀಗಾದರೆ ಕರಡೆಪ್ಪ ಸಾಹುಕಾರರ ರೀತಿಯೂ ಬೇರೆ ವಿಧವಾಯಿತು. ಈ ತರುಣನ ಮೊಗದಲ್ಲಿ ಯಾವದೋ ಅಪಾರವಾದ ಆಧ್ಯಾತ್ಮ ಸೌಂದರ್ಯವನ್ನು ಕಂಡರು. ಹೆಸರರಿಯದ ಲಿಂಗತೇಜವನ್ನು ಊಹಿಸಿದರು. ಅವರ ಮುಂದೆ ಬಡ ವಿದ್ಯಾರ್ಥಿಯ ಸೋಗಿನಲ್ಲಿ ಭಕ್ತಿ ಭಾಂಡಾರಿ ಬಸವೇಶ್ವರನೇ ಪರೀಕ್ಷೆ ಮಾಡಲು ಬಂದಂತಿತ್ತು ! ಅನೇಕ ವಿದ್ಯಾ ರ್ಥಿಗಳನ್ನು ಕರಡೆಪ್ಪನವರು ತಮ್ಮ ಪಾಠಶಾಲೆಯಲ್ಲಿ ದಿನನಿತ್ಯ ನೋಡುತ್ತಾರೆ, ಆಶೆ–ಆತುರ–ಅಸಂತುಷ್ಟಿ–ಕಳವಳ–ನಿರ್ವಿಣ್ಣತೆ-ನಿಸ್ಸತ್ವಗಳ ಮಿಶ್ರಣ ಆ ಹುಡುಗರ ಮುಖದ ಮೇಲೆ ಕಾಣುತ್ತಿತ್ತು. ಆದರೆ ಈ ಬಾಲಕನ ಮುಖದ ಮೇಲೆ ಯಾವದೇ ಬಗೆಯ ಲೌಕಿಕ ಕ್ಲಿಷ್ಟತೆಯೂ ಇಲ್ಲ. ಅವನ ಮೊಗ ನಿರಭ್ರವಾದ ಆಕಾಶದ ಹುಣ್ಣಿವೆ ಚಂದ್ರನಂತೆ, ಶಾಂತ ಸರೋವರದಲ್ಲಿ ಮಂದಸ್ಮಿತವಾಗಿ ಪ್ರಫುಲ್ಲಿತವಾಗಿ ಅರಳಿದ ಕಮಲದಂತೆ, ಅದೇ ಆಗ ಲಿಂಗಾರ್ಚನೆಯನ್ನು ತೀರಿಸಿ ಪ್ರಸಾದವನ್ನು ಸ್ವೀಕರಿಸಿ ಭಕ್ತರನ್ನು ಉದ್ಧರಿಸಲು ಹೊರಬಂದ ಸಿದ್ಧ ಶಿವಯೋಗಿಯಂತೆ ಕಾಣುತ್ತಿದ. ಆದರೂ ಆ ಹುಣ್ಣಿಮೆಯ ಚಂದ್ರನಲ್ಲಿ ಎಷ್ಟೊಂದು ಸಂಕೋಚ ! ಎಷ್ಟೊಂದು ವಿನಯ !! ಎಷ್ಟೊಂದು ದಾಸಭಾವನೆ !! ಕರಡೆಪ್ಪನವರಿಗೆ ತಮ್ಮ ಕರುಳು ಮಂಗಳಾರತಿ ಯನ್ನು ಹಾಡಿದಂತಾಯಿತು. ಮಂಗಳಾರತಿಯೊಂದರ ಪಾದ ಅವರ ತುಟಿ ಯಿಂದ ಅವರಿಗರಿಯದಂತೆಯೇ ಹೊರಸೂಸಿತು. ಆ ಜ್ಞಾನಪೂರ್ಣಜ್ಯೋತಿ, ಕರ್ಪೂರದಾರತಿ, ನಿರ್ಮಲ ಪರಂಜ್ಯೋತಿ ಅವರ ಮುಂದೆಯೇ ಬಡ ವಿದ್ಯಾರ್ಥಿಯ ರೂಪದಿಂದ ಮೈವೆತ್ತು ಬಂದಿದೆ ! ಅವರ ಕರುಳಿಗೆ ಅರ್ಥ ವಾಗುತ್ತಿದೆ. ಚರ್ಮಚಕ್ಷುಗಳು ತಮ್ಮ ಗಡಿಯನ್ನು ದಾಟಿಹೋಗಲು ಅಸಮರ್ಥವಾಗಿವೆ. ಒಂದು ವೇಳೆ ಈ ಬಾಲಕನ ಭವಿಷ್ಯದ ಸಾವಿರದರ

ಒಂದರಷ್ಟು ಅತ್ಯಲ್ಪ ಭಾಗವೇನಾದರೂ ಅವರಿಗೆ ಆ ಸಮಯದಲ್ಲಿ ಹೊಳೆದಿದ್ದರೆ, ಒಮ್ಮೆಲೇ ಹಿಗ್ಗಿ–ಹಾರೈಸಿ ಮಹಾಪಂಡಪ್ರಣಾಮಗೈದು, ಹೊತ್ತುಕೊಂಡು ಕುಣಿಯುತ್ತಿದ್ದರೋ ಏನೋ !

ಆಗಲೇ ಒಂದೆರಡು ಕ್ಷಣ ಜಾರಿದವು.

ಈಗ ಕರಡೆಪ್ಪನವರು ಮತ್ತೆ ಕೇಳಿದರು–

'ಈಗ ತಾವು ಬರಲು ಕಾರಣ ?'

ಮಳೆಯಪ್ಪ ಧೈರ್ಯ ತಂದುಕೊಂಡು ಉತ್ತರಿಸಿದ–

'ಸಸಿವಾಳದ ಬಸವಲಿಂಗಸ್ವಾಮಿಗಳು ನನ್ನನ್ನು ತಮ್ಮಲ್ಲಿಗೆ ಕಳಿಸಿದರು'

ಕರಡೆಪ್ಪನವರ ಕಣ್ಣುಗಳು ಒಮ್ಮೆಲೇ ಅರಳಿದವು. ಮಿಂಚಿನ ನಗೆಯೊಂದು ಥಕ್ಕನೇ ಅವರ ತುಟಿಯ ಮೇಲೆ ಜಿಗಿದು ಚಕ್ಕಂದವಾಡಿತು. ಹೇಳಿದರು–

'ಓಹೋ ಬಸವಲಿಂಗಸ್ವಾಮಿಗಳೇ ? ಸರಿ ಸರಿ. ಬಹಳ ದಿನಗಳಾದವು ಅವರನ್ನು ನೋಡದೆ'

ಮಳೆಯಪ್ಪ ಗೋಣು ಹಾಕಿದ. ಸಾವುಕಾರರೇ ಕೇಳಿದರು–

'ನಿಮ್ಮನ್ನೇಕೆ ಕಳಿಸಿದರು ?'

ಗಂಭೀರವಾಗಿ ಹೇಳಿದ–

'ತಮ್ಮ ಸಂಸ್ಕೃತ ಪಾಠಶಾಲೆಯಲ್ಲಿ ವ್ಯಾಸಂಗಕ್ಕೆಂದು ನನ್ನನ್ನು ಕಳಿಸಿದರು. ಕರ್ನಾಟಕದಲ್ಲಿ ನೀವೊಬ್ಬರೇ ಸಂಸ್ಕೃತ ಪಾಠಶಾಲೆಯನ್ನು ನಡೆಸುವ ದೊಡ್ಡ ಉದಾರಿಗಳು ಎಂದು........'

ಕರಡೆಪ್ಪನವರು ತಮ್ಮ ವರ್ಣನೆಯನ್ನು ಮಧ್ಯದಲ್ಲೇ ತಡೆದು ಹೇಳಿದರು–

'ಇರಲಿ. ಇರಲಿ. ನಾನು ಉದಾರಿ ಅಲ್ಲ. ಆ ಉದಾರಿ ಇದ್ದವನೇ ಬೇರೆ! ಹುಂ. ಇರಲಿ. ನಿಮ್ಮ ಹೆಸರು ?'

"ಮಳೆಯಪ್ಪಯ್ಯ"

"ತಂದೆ ತಾಯಿ ?"

"ಇದ್ದಾರೆ"

"ಜಂಗಮರೋ"

'ಹೌದು'

'ಬಡವರೋ ?'

'ಹುಂ'

'ಸಸಿವಾಳದವರೋ ?'

'ಹುಂ'

'ಬಸವಲಿಂಗಸ್ವಾಮಿಗಳಿಗೆ ಪರಿಚಿತರೋ ?'

'ಹುಂ'

'ಇಲ್ಲಿ ಸಂಸ್ಕೃತ ಕಲಿಯಲು ಬಂದಿರಾ ?'

'ಹುಂ'

'ಸಂಸ್ಕೃತ ಅಭ್ಯಾಸದಲ್ಲಿ ನಿಮಗೆ ಬಹಳ ಅಭಿರುಚಿಯೆ ?'

'ಹುಂ'

'ಆಗಲಿ, ಇನ್ನು ಮೇಲೆ ಇಲ್ಲೇ ಕಲಿಯಿರಿ'

'ಹುಂ'

'ಹುಂ'ಕಾರದಲ್ಲೇ ಮಳೆಯಪ್ಪನ ಭೆಟ್ಟಿ ಮುಗಿಯಿತು. ಈತನ ಹೆಸರು ವಿಳಾಸ ಬರೆದುಕೊಂಡು, ಪಾಠಶಾಲೆಯ ತರಗತಿಗಳಿಗೆ ಹಾಜರುಪಡಿಸಬೇಕೆಂದು ಕರಡೆಪ್ಪನವರು ತಮ್ಮ ಕಾರಭಾರಿಗೆ ಅಪ್ಪಣೆ ಇತ್ತರು.

ಮಳೆಯಪ್ಪ ಮೆಲ್ಲನೇ ಅವರಿಗೆ ವಂದಿಸಿ, ದಿಗ್ವಿಜಯುವನ್ನು ಸಂಪಾದಿಸಿದ ಚಕ್ರವರ್ತಿಯಂತೆ ಹೊರಬಿದ್ದ. ಆತನ ಕಾಲುಗಳು ಅವನಿಗರಿಯದಂತೆ ಬಾಳೆಯ ತೋಟದ ದಾರಿಗೆ ನಡೆದವು.

# ಭವತಿ ಭಿಕ್ಷಾಂದೇಹಿ !

'ಭವತಿ ಭಿಕ್ಷಾಂದೇಹಿ'

ಮೂರು ವರುಷದ ಹೆಣ್ಣು ಮಗು ಮನೆಯಿಂದ ಓಡಿ ಬಂತು; ಭಿಕ್ಷೆ ನೀಡಿತು.

ಮತ್ತೊಂದು ಮನೆ–

'ಭವತಿ ಭಿಕ್ಷಾಂದೇಹಿ'

ತುಂಬಿದ ಗರ್ಭಿಣಿ ಸ್ತ್ರೀಯೊಬ್ಬಳು, ಭಸ್ಮಧಾರಿಣಿಯಾಗಿ, ಮೆಲ್ಲನೇ ಹೊರಬಂದು ಭಿಕ್ಷೆ ನೀಡಿದಳು. ಪಾದಪದ್ಮಗಳಿಗೆ ಕುಂಕುಮದ ಹಣೆಯನ್ನು ಒತ್ತಿ ನಮಸ್ಕರಿಸಿದಳು.

ಮತ್ತೊಂದು ಮನೆ–

'ಭವತಿ ಭಿಕ್ಷಾಂದೇಹಿ'

ಅಲ್ಲಿ ಆಗಲೇ ನಾಲ್ಕಾರು ಜನ ಭಿಕ್ಷೆ ನೀಡಲೋಸುಗ ಕಾಯ್ದು ಕುಳಿತಿದ್ದಾರೆ. ಬಾಗಿಲ ಬಳಿ ವಾಣಿಯನ್ನು ಕೇಳಿದ್ದೇ ಸರಿ, ಮನೆಯಿಂದ ಮೊದಲು ಇರಿಸಿದ ಪಂಚಪಕ್ವಾನ್ನಗಳನ್ನು ನೀಡಿ, ಭಕ್ತಿಪುರಸ್ಸರವಾಗಿ ಪ್ರೊಡಮಟ್ಟರು.

ಮತ್ತೊಂದು ಮನೆ–

'ಭವತಿ ಭಿಕ್ಷಾಂದೇಹಿ'

ವೃದ್ಧ ಮುತ್ತೈದೆಯೊಬ್ಬಳು ಗದ್ಗದನೆ ನಡಗುತ್ತ ಬಂದು, ಪಾದ ಪೂಜೆಗೈದು, ತೀರ್ಥಜಲವನ್ನು ಮೈತುಂಬ ನೇವರಿಸಿಕೊಂಡು ನಮಿಸಿದಳು. ಅವಳ ಹಿಂದೆಯೇ ಮನೆಯ ಸೊಸೆ ಬಂದು ಆರತಿಯನ್ನು ಬೆಳಗಿದಳು. ಮುದುಕಿ ತೃಪ್ತಿತೀರದೇ, ಸನ್ಯಾಸಿಯ ಗಲ್ಲ ಹಿಡಿದು ಪ್ರೀತಿಯ ಲಟಿಗೆ ಮುರಿದಳು.

ಆಯ್ತು ಭಿಕ್ಷಾಟನ, ಮಹಾಸನ್ಯಾಸಿಯ ಪಾದಪದ್ಮಗಳು ಮತ್ತೆ ಅದೇ ತೋಟಕ್ಕೆ ಮರಳಿದವು. ಮನೆ ಮನೆಯ, ಓಣಿ ಓಣಿಯ ಸ್ತ್ರೀ ಪುರುಷರ ಕಣ್ಣುಗಳು ನಟ್ಟಿಗಣ್ಣಿನಿಂದ ಅವನನ್ನೇ ನೋಡುತ್ತಿದ್ದವು. ಆತನ ಕಣ್ಣುಗಳು ತನ್ನ ಮುಂದಿನ ನೆಲದಲ್ಲಿ ಮಾತ್ರ ನೆಟ್ಟು, ಮೌನದಲ್ಲಿ ಸಾಗುತ್ತಿದ್ದವು.

ಬಳ್ಳಾರಿಯ ಭಕ್ತ ಮಾಹೇಶ್ವರರ ಮನೆಮನೆಗಳಲ್ಲಿ ಇದೊಂದು

ಅಪೂರ್ವ ಸುದ್ದಿಯಾಯಿತು. ವಿಚಿತ್ರ ಜಂಗಮನ ದರ್ಶನ! ಕೇವಲ ನಾಲ್ಕು ಮನೆ ಭಿಕ್ಷಾಟನೆ ಆದರೆ ತೀರಿತು. ಆ ಮನೆಯವರು 'ನಮ್ಮ ಮನೆಗೆ ಇವತ್ತು ಶಿವಯೋಗಿಗಳು ದಯಮಾಡಿಸಿದರು' ಎಂದು ಇಡೀ ದಿನ ಕುಣಿದಾಡು ತ್ತಿದ್ದರು. ಉಳಿದ ಮನೆಯವರು ತಮ್ಮ ಮನೆಗೆ ಜಂಗಮಪಾದ ಬರಲಿಲ್ಲ-ವಲ್ಲಾ ಎಂದು ಅಂತರಂಗದಲ್ಲಿ ದುಃಖಿಸುತ್ತಿದ್ದರು. 'ನಮ್ಮ ಪಾಪ ಹರಿದಿಲ್ಲ. ಆದ್ದರಿಂದ ತಪಸ್ವಿಗಳು ನಮ್ಮ ಮನೆಗೆ ಬರಲಿಲ್ಲ' ಎಂದು ಕೆಲವರು ತಮ್ಮನ್ನೇ ಜರಿದುಕೊಂಡು ನಿಟ್ಟುಸಿರುಗರಿಯುತ್ತಿದ್ದರು. ಅನೇಕರ ತೃಪ್ತಿ ಇಷ್ಟಕ್ಕೇ ತೀರಲಿಲ್ಲ. ಆತನು ವಾಸವಾಗಿದ್ದ ಬಾಳೆತೋಟದ ಹುಲ್ಲು ಜೋಪಡಿಗೂ ನುಗ್ಗಿದರು. ಆಶೀರ್ವಾದ ಪಡೆದುಕೊಂಡು ಧನ್ಯರಾದೆವೆಂದು ಮರಳಿದರು.

ಪ್ರಾತಃಕಾಲ ಬ್ರಾಹ್ಮೀ ಮುಹೂರ್ತದಲ್ಲಿ ಏಳುವದು. ಆಕಾಶದಲ್ಲಿ ಜುಮುಜುಮು ಬೆಳಗು ಸುಳಿಯುವ ಮುನ್ನವೇ ಬಾವಿಯ ಹಾಸುಗಲ್ಲಿನ ಮೇಲೆ ಸ್ನಾನಮಾಡುವದು, ಸ್ನಾನ ಮಾಡುವಾಗ ಪ್ರತಿಯೊಂದು ಕೊಡಕ್ಕೂ ಅದರ ಜಲಕ್ಕೂ ಪಂಚಾಕ್ಷರಿ ಮಂತ್ರದಿಂದ ಸಂಸ್ಕಾರಗೈದು ಆ ಮೇಲೆ ಬಸವ ನಾಮಾವಳಿಯನ್ನು ಉಚ್ಚರಿಸುತ್ತ ಮಜ್ಜನ ಪೂರ್ಣ ಮಾಡುವದು. ಮಡಿಯಿಂದಲೇ ಹೂದೋಟದ ಹೂಗಳನ್ನು ಲಿಂಗಪೂಜೆಗೆ ಆಯ್ದುಕೊಳ್ಳು ವದು. ಅದೂ ಕೂಡ, ಭ್ರಮರಗಳು ಮುದ್ದಿಕ್ಕಿ ಎಂಜಲು ಸುರಿಯದ, ಮಂದ ಮಾರುತ ಕಾಮಿಸಿ ಕಲುಷಿತವಾಗದ ಹಾಗೂ ಸೂರ್ಯಕಿರಣಗಳು ಭೋಗಿಸದ ಹೂ ಕನ್ನೆಯರನ್ನೇ ಭಕ್ತಿಸಂಪನ್ನೆಯರನ್ನೇ ಆಯ್ದುಕೊಳ್ಳುವದು. ಶಿವನ ಪಾದಕ್ಕೆ ಸಲ್ಲುವದೆಲ್ಲ ಶಿವಮಯವಾಗಿರಬೇಕಲ್ಲವೇ? ಮಲ್ಲಿಗೆ, ಸಂಪಿಗೆ ಮೊದಲಾದ ನಾನಾ ಕುಸುಮಗಳಲ್ಲದೇ ನವವಿಧ ಪತ್ರಿಯನ್ನು ತಿರಿಯುವದು. ನಂತರ ನಿರ್ಮಲಗೊಳಿಸಿದ ಹುಲ್ಲು ಜೋಪಡಿಯಲ್ಲಿ ಪ್ರಾತಃಕಾಲದ ಸುದೀರ್ಘ ಲಿಂಗಪೂಜೆ. ಇಷ್ಟಲಿಂಗದ ಅರ್ಚನೆ—ಅಭಿಷೇಕ—ಅನುಸಂದಾನ ಗಳಲ್ಲಿ ಒಂದೊಂದೇ ಮೆಟ್ಟಲನ್ನು ಹತ್ತುತ್ತ, ಭಕ್ತಸ್ಥಲದ ಭಕ್ತಿಯಿಂದ ಮಹೇಶಸ್ಥಲದ ನಿಷ್ಠೆಯಿಂದ ಪ್ರಸಾದಿಸ್ಥಲದ ಅವಧಾನಕ್ಕೆ ಸಾರಿ, ಪ್ರಸಾದಿ ಸ್ಥಲದ ಅವಧಾನದಿಂದ ಪ್ರಾಣಲಿಂಗಿಸ್ಥಲದ ಅನುಭವವನ್ನು ತೂರಿ, ಪ್ರಾಣಲಿಂಗಿಸ್ಥಲದ ಅನುಭವದಿಂದ ಆನಂದವನ್ನು ಕೋರಿ, ಶರಣಸ್ಥಲದ

ಆನಂದದಿಂದ ಐಕ್ಯಸ್ಥಲದ ಸಮರಸದಲ್ಲಿಸೇರಿ ಬೆಲ್ಲಸಕ್ಕರೆ ಕೂಡಿ, ಸಕ್ಕರೆಜೇನು-ತುಪ್ಪವ ಬೆರೆಸಿ, ಜೇನುತುಪ್ಪ ದ್ರಾಕ್ಷಾಪಾಕದಲ್ಲಿ ಕೂಡಿ, ದ್ರಾಕ್ಷಾಪಾಕ ರಸಬಾಳೆಯಲ್ಲಿ ಕಲೆಸಿ, ರಸಬಾಳೆ ನಾಲಿಗೆಗೆ ಸುರಿಸಿ, ನಾಲಿಗೆ ಆನಂದಕ್ಕೆ ಮೆರೆಸಿ, ಆನಂದ ಅಮೃತಕ್ಕೆ ನಿಲ್ಲಿಸಿ; ಆತ್ಮಾನುಭೂತಿಯ ಸಮುಸಮುಚ್ಚಯ ಯೋಗ ಮಾರ್ಗದಲ್ಲಿ ವಿರಾಜಮಾನವಾಗುತ್ತಿದ್ದ. ಕರದ ಲಿಂಗಯ್ಯನಿಗೆ ಕರುಣಾರ್ದ್ರ ಹೃದಯದಿಂದ ಆತ್ಮಾರ್ಪಣೆ ಮಾಡಿ ಕಣ್ಣೀರ ಕೋಡಿಯನ್ನು ಸುರಿಸುತ್ತಿದ್ದ. ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ, ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ ಅಪ್ರಮಾಣ ಅಗೋಚರ ಅಪ್ರತಿಮ ಲಿಂಗವೇ ನೀವೆನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಲ್ಲಾ – ಎಂದು ಭಾವದಲ್ಲಿ ಹಾರೈಸಿ, ಹೃದಯದಲ್ಲಿ ಹಿಗ್ಗಿ ಕರಣದಲ್ಲಿ ಕಳೆಏರಿ, ರೋಮದಲ್ಲಿ ಜಿಮರೇರಿ, ಕಣ್ಣಲ್ಲಿ ನೀರ್ ತುಳುಕಿ, ಮುಖ ಕೆಂಪೇರಿ, ತುಟಿ ಕಂಪನ ಊರಿ, ಮಂತ್ರ ಮೆರುಗೇರಿ, ದೇಹ ನಿರ್ದೇಹವಾಗಿ, ಮನ ನಿರ್ಮನವಾಗಿ, ಜೀವ ನಿರ್ಜೀವವಾಗಿ, ಅಂಗ ಲಿಂಗವಾಗಿ, ಲಿಂಗ ಅಂಗವಾಗಿ, ಸಂಗ ಸಮರಸವಾಗಿ, ಸಮರಸ ಸುಧಾರಸವಾಗಿ, ಸುಧಾರಸ ಶೂನ್ಯವಾಗಿ, ಶೂನ್ಯ ನಿಶ್ಶೂನ್ಯದಲ್ಲಿ ಸೇರಿ, ನಿಶ್ಶೂನ್ಯ ನಿರಾಲಂಬ-ನಿಸ್ಸೀಮ-ನಿಗೋಚರ-ನಿರ್ಲೇಪ-ನಿತ್ಯತೃಪ್ತ ಮಹಾಸಿಂಹಾಸನವನ್ನು ಏರಿ, ಆಚೆ ಆಚೆ ಆಚೆಯಾಚೆಯ ಆಚೆಗೆ ಸೇರಿಬಿಡುತ್ತಿದ್ದ!

ಲಿಂಗಪೂಜಾನಂತರ ಪೂರ್ವದಿಗಂತದ ಸೂರ್ಯನೇ ತನ್ನ ಕಿರಣಗಳಿಂದ ಈತನ ಪಾದಕ್ಕೆ ಮೊಟ್ಟಮೊದಲು ವಂದಿಸುತ್ತಿದ್ದನೇನೊ! ತಂಗಾಳಿ ಮಂಗಳ ಹಾಡುತ್ತಿತ್ತು. ಪಕ್ಷಿಗಳು ಜಯ ಜಯಕಾರ ಗೈಯುತ್ತಿದ್ದವು.

ನಂತರ ಮಧ್ಯಾಹ್ನದ ವರೆಗೆ ಕುಟೀರದಲ್ಲೇ ಸಂಸ್ಕೃತಾಧ್ಯಯನ. ವ್ಯಾಕರಣ ನಿಯಮಗಳು, ಅಮರಕೋಶದ ಪಾಠ, ನೀತಿ ಶ್ಲೋಕಗಳು ಇವುಗಳ ಕಂಠಪಾಠ ನಡೆಯುತ್ತಿತ್ತು. ಮಧ್ಯಾಹ್ನಕ್ಕೆ ಮುಂಚಿತವಾಗಿ ಮತ್ತೆ ಅಪರಾಹ್ನದ ಸ್ನಾನಪೂಜೆಗಳು, ಕ್ರಮಬದ್ಧವಾಗಿ ಸಾಂಗವಾಗುತ್ತಿದ್ದವು. ನಂತರ ಶುದ್ಧಾಚಾರ ಸಂಪನ್ನರಾದ ಭಕ್ತ ಮಾಹೇಶ್ವರರ ಮನೆಗೆ ಹೋಗಿ ಭಿಕ್ಷಾನ್ನ ಸ್ವೀಕರಿಸುವುದು ಕೇವಲ ನಾಲ್ಕು ಮನೆಗಳು ಮಾತ್ರ. ತನ್ನ ಪರ್ಣ

ಕುಟೀರದಲ್ಲಿ ಅದನ್ನೇ ಪ್ರಸಾದವಾಗಿ ಕೈಕೊಂಡರೆ ತೀರಿಹೋಯಿತು. ದಿನಕ್ಕೆ ಒಂದೇ ಒಂದು ಸಲ ಊಟ.

ಇಷ್ಟಾದ ಮೇಲೆ ಪಾಠಶಾಲೆಗೆ ನಿರ್ಗಮನ. ಪಂಡಿತ ಪ್ರಾಚಾರ್ಯರ ನಿರ್ದೇಶನದಲ್ಲಿ ವೇದ, ವೇದಾಂತ, ಆಗಮ, ಭಗವದ್ಗೀತೆ, ಅನೇಕ ಭಾಷ್ಯಗಳು, ಅಷ್ಟಾಂಗಯೋಗ, ಷಡ್ದರ್ಶನ, ಷಟ್‌ಸ್ಥಲ ಶಾಸ್ತ್ರ, ವ್ಯಾಕರಣ ಅಲಂಕಾರ, ಕಾವ್ಯ, ತರ್ಕ ಮೊದಲಾದ ಹಲವು ವಿಧ ಶಾಸ್ತ್ರಗ್ರಂಥಗಳಲ್ಲಿ ಆಯಾ ಸಮಯಕ್ಕನುಸಾರವಾಗಿ ತಲ್ಲೀನನಾಗುವದು. ಈ ಎಲ್ಲ ಗ್ರಂಥಗಳಲ್ಲಿ ಮಳೆಯಪ್ಪನಿಗೆ ಪಂಡಿತನಾಗುವದು ಬೇಕಾಗಿರಲಿಲ್ಲ, ಆದರೆ; ಅವುಗಳ ಅರುಹಿನ ರಸಘಟ್ಟಿಯನ್ನು ಮಾತ್ರ ಸೇವಿಸುವದು ಬೇಕಾಗಿತ್ತು.

ಪಾಠಶಾಲೆಯ ವರ್ಗದಲ್ಲಿ ಉಳಿದ ಸಹಾಧ್ಯಾಯಿಗಳ ರೀತಿಯೇ ಬೇರೆ; ಇವನ ರೀತಿಯೇ ಬೇರೆ. ಅವರಲ್ಲಿ ಆಧ್ಯಾತ್ಮ ಲೌಕಿಕ ಎರಡೂ ಹಾಸುಹೊಕ್ಕಾಗಿದ್ದವು. ಅನೇಕ ಸಲ ಹರಟೆಪ್ರಪಂಚಕ್ಕೆ ಇಳಿಯುತ್ತಿದ್ದರು. ಆದರೆ ಇವನ ದಾರಿಯೇ ಬೇರೆ. ಕೇವಲ ಮೌನ. ತನ್ನ ಮಟ್ಟಿಗೆ ತಾನು, ತಾನೇ ತಾನು. ಆತ್ಮಲೀಲಾ ವಿನೋದಿಯಾಗಿದ್ದ. ಬಾಹ್ಯದಲ್ಲಿ ಹುಚ್ಚನಾಗಿದ್ದರೆ ಅಂತರಂಗದಲ್ಲಿ ನಿಚ್ಚಳನಾಗಿದ್ದ. ಮಾತಾಡಿದರೆ ತೂಕ ಮಾಡುವ ಪ್ರವೃತ್ತಿ. ತನ್ನ ಮಾತು–ಮೌನ–ನಡಿಗೆ–ಉಡಿಗೆ–ಭಾವ–ಭಂಗಿ – ಪೂಜೆ–ಪ್ರಸಾದ–ಜಾಗ್ರತ–ನಿದ್ರೆ ಎಲ್ಲದರಲ್ಲೂ ಒಂದೇ ಸಮನಾಗಿದ್ದ. ಹೀಗಾಗಿ ಉಳಿದ ವಿದ್ಯಾರ್ಥಿಗಳಿಗೆ ಈತ ಗೌರವಾರ್ಹನಾಗಿದ್ದ. ಬಹಿರಂಗದಲ್ಲಿ ಕೆಲವರು ಅಸೂಯೆ ಪಟ್ಟರೂ ಅಂತರಂಗದಲ್ಲಿ ಮಣಿಯುತ್ತಿದ್ದರು. ಇನ್ನು ಕೆಲವರು ಈತನ ಗುಣಗಾನ ಮಾಡುವಲ್ಲೇ ಕಾಲಕಳೆದರೆ, ಮತ್ತೆ ಹಲವರು 'ಅವನೇನು ಏಕಾಂತದ ರಾಮಯ್ಯ !' ಎಂದು ಚೇಷ್ಟೆಮಾಡುತ್ತಿದ್ದರು.

ಪಾಠ ಹೇಳುವ ಅಧ್ಯಾಪಕರ ಹೃದಯವನ್ನು ಈತ ಭಕ್ತಿ–ವಿಶ್ವಾಸ–ಲಿಂಗತೇಜ–ಆತ್ಮೀಯತೆಗಳಿಂದ ಗೆದ್ದುಕೊಂಡ. ಗುರುಗಳಿಗೆ ತಕ್ಕ ಶಿಷ್ಯನಾದ. ಅನೇಕ ಗುರುಗಳು ವಿದ್ಯಾರ್ಥಿಗಳಿಗೆ—'ಮಳೆಯಪ್ಪನನ್ನು ನೋಡಿ ಬಾಳಲು ಕಲಿಯಿರಿ' – ಎಂದು ಉಪದೇಶಿಸುತ್ತಿದ್ದರು. ಹೀಗಾಗಿ ಈತ ಅಲ್ಲಿ ಎಲ್ಲರಿಗೂ ಆದರ್ಶದ ಒಂದು ಸಂಕೇತವಾಗಿದ್ದ.

ಇದು ಈತನ ಪಾಠಶಾಲೆಯ ಸಂಯಮನ. ನಂತರ ಸಂಜೆ ನೇರವಾಗಿ

ಹುಲ್ಲುಗುಡಿಸಲಿಗೆ ಪ್ರಯಾಣ. ಮೂರನೆಯ ಸಲ ಸ್ನಾನ, ಪೂಜೆ. ಲಿಂಗ ತೀರ್ಥವೇ ಸಂಜೆಯ ಪ್ರಸಾದ. ಆ ಮೇಲೆ ಹುಲ್ಲುಗುಡಿಸಲಿನ ಚಾಪೆಯೊಂದರ ಮೇಲೆ ಯೋಗನಿದ್ರೆ. ಇದು ಮಳೆಯಪ್ಪನ ಕ್ರಮಬದ್ಧವಾದ ದೈನಂದಿಕ ಕಾರ್ಯವಾಯಿತು. ಆಲಸ್ಯ, ವ್ಯಸನ, ಬಳಲಿಕೆ, ಬೇಸರ, ಜಾಡ್ಯ, ಮೌಢ್ಯ, ಚಾಂಚಲ್ಯ, ಚಪಲತೆ, ದಾಹ, ಧಾರ್ಷ್ಟ್ಯ, ಔದ್ಧತ್ಯ, ಐಹಿಕತೆ ಮೊದಲಾದ ಯಾವ ದೈಹಿಕ ಗುಣಗಳೂ ಆತನ ವೇಳಾಪಟ್ಟಿಯನ್ನು ಸಡಿಲಿಸಲಿಲ್ಲ. ಆತ ನಿಷ್ಠುರ ನಡತೆಗೆ ಯಂತ್ರವಾಗಿದ್ದ. ಯೋಗಕಾಯಕ್ಕೆ ಮಂತ್ರನಾಗಿದ್ದ. ಈ ಗುಣದಿಂದ ಬಳ್ಳಾರಿಯನ್ನೇ ಗೆದ್ದ. ಗುರುಗಳ ಹೃದಯವನ್ನು ವಶಪಡಿಸಿಕೊಂಡ. ಅಷ್ಟೇ ಅಲ್ಲ ಕೆಲದಿನಗಳಲ್ಲೇ ಸಕ್ಕರೆ ಕರಡೀಶ ಶರಣರ ಆತ್ಮವನ್ನೇ ಸೂರೆಗೈದ.

# ಸಿದ್ಧಿಯ ಶಿಖರಕ್ಕೆ

ಎಂದಿನಂತೆ ಭಿಕ್ಷಾಟನೆಗೆ ನಡೆದಿದ್ದಾನೆ ಮಳೆಯಪ್ಪ. ಆದರೆ ಅಂದಿನ ಪರಿಯೇ ಬೇರೆಯಾಯಿತು. ಅಂತರಂಗದಲ್ಲಿ–'ಇಂದು ಕರಡೆಪ್ಪನವರ ಮನೆಗೆ ಭಿಕ್ಷಾನ್ನಕ್ಕೆ ಹೋಗಲೇ ?' ಎಂದು ಪ್ರಶ್ನೆ ಉದಿಸಿತು. ಕಾಲುಗಳೂ ಅತ್ತ ಮೆಲ್ಲನೆ ತಿರುಗತೊಡಗಿದವು. ಆಗಲೇ ಜಾಗೃತ ಪ್ರಜ್ಞೆಯ ಮನಸ್ಸು–

'ಬೇಡ ಬೇಡ ಬೇಡ. ಅಲ್ಲಿ ಶ್ರೀಮಂತಿಕೆ ಇದೆ. ದುಡ್ಡಿನ ರಾಶಿ ಇದೆ' ಎಂದಿತು. ಮತ್ತೆ ಆತನ ಅಂತರಂಗ ಕೇಳಿತು–

'ಶ್ರೀಮಂತಿಕೆ ಇದೆ ನಿಜ. ದುಡ್ಡಿನ ರಾಶಿಯೂ ನಿಜ. ಆದರೆ ಭಕ್ತಿ ಇಲ್ಲವೇ ? ಶರಣ ಧರ್ಮ ಇಲ್ಲವೇ ?'

ಮತ್ತೆ ಕೂಗು–

'ಇದೆ. ಇದೆ. ಆದರೆ ನೀನು ಉಗ್ರ ನಿಷ್ಠಾವಂತ. ಬಡವರ ಮನೆಗೆ ಮಾತ್ರ ಹೋಗು. ದೊಡ್ಡವರ ಮನೆಯ ಲಾಲಸೆ ಬೇಡ'

ಮತ್ತೆ ಪ್ರಶ್ನೆ–

'ಇದೆಂಥ ಮಾತು ? ಬಡವರು ಶ್ರೀಮಂತರು ಈ ಭೇದ ಸಾಧಕನಾದ ನನಗೇಕೆ ? ಸರ್ವವೂ ಲಿಂಗಮಯವಲ್ಲವೆ ?'

'ಇಲ್ಲವೆಂದು ಯಾರು ಅಂದರು ? ಸರ್ವವೂ ಲಿಂಗವೆಂದು ತಿಳಿದು ಬಾಳಬಲ್ಲವನು ಶಿವಯೋಗಿಯೊಬ್ಬನೇ. ಆದರೆ ನೀನಿನ್ನೂ ಸಾಧಕ. ಇನ್ನೂ ಸಾಧನೆಯ ಮೆಟ್ಟಿಲುಗಳನ್ನು ಏರಬೇಕಾಗಿದೆ. ಜಾರಿಬೀಳಬೇಡ.'

'ಅಯ್ಯೋ ಇದೆಂಥ ಉಪದೇಶ! ಶಿವಶರಣ ಸಕ್ಕರೆ ಕರಡೆಪ್ಪನವರ ಮನೆಗೆ ಭಿಕ್ಷೆಗೆ ಹೋದರೆ ಜಾರಿಬಿದ್ದಂತೆಯೇ ? ಇದು ಶುದ್ಧ ಮೋಸ. ವಂಚನೆ.'

'ಮೋಸವೂ ಅಲ್ಲ. ವಂಚನೆಯೂ ಅಲ್ಲ. ನಿನ್ನಲ್ಲಿ ಸಂಪೂರ್ಣ ಆತ್ಮ ವೈರಾಗ್ಯವಿದ್ದರೆ ದುಡ್ಡಿನ ರಾಶಿಯ ಮೇಲೆ ಮಲಗಬಹುದು. ರೂಪವತಿ ಯರು ಬಳಿ ಸುಳಿದರೂ ವಿಚಲಿತನಾಗದೇ ಮೌನವಾಗಿರಬಹುದು. ಬಿರುಗಾಳಿ ಸಿಡಿಲುಗಳೇ ಏರಿಬಂದರೂ ಮಂದಹಾಸದಿಂದ ಓಡಿಸಬಹುದು. ಆದರೆ ನೀನಿನ್ನೂ ಆ ಎತ್ತರ ಮುಟ್ಟಿಲ್ಲ. ಆದರ್ಶಸಾಧಕನಾಗಿರುವೆ. ಅಷ್ಟೆ.'

'ಹಾಗಾದರೆ ನನ್ನಲ್ಲಿ ವೈರಾಗ್ಯಬಂದಿಲ್ಲವೆಂದು ನಿನ್ನ ಅಭಿಪ್ರಾಯವೇ?'

'ಬಂದಿದೆ. ಬಂದಿದೆ. ಬಂದಿದೆಯಂತಲೇ ಹೇಳುವದು. ಆದರೆ ಅವಸರ ಬೇಡ.'

'ಆಗಲಿ. ಒಪ್ಪಿದೆ. ಒಪ್ಪಿದೆ. ಆದರೆ ಭಗವಂತನೇ ನನ್ನನ್ನು ಅಲ್ಲಿ ಭಿಕ್ಷಾನ್ನಕ್ಕೆ ಕಳಿಸಲು ಬಯಸಿದರೆ ಹೋಗಲೇ'

'ಅಗತ್ಯವಾಗಿ. ಅದಕ್ಕೇನಂತೆ. ಭಗವದಿಚ್ಛೆಯೇ ಭಕ್ತನ ಇಚ್ಛೆ'

ಆಯಿತು ಆತ್ಮಮಂಥನ. ಕರಡೆಪ್ಪನವರ ಮನೆಕಡೆಗೆ ಹತ್ತು ಹೆಜ್ಜೆ ಹೋದರೂ ಮತ್ತೆ ಮರಳಿದ. ದೃಢಸಂಕಲ್ಪದ ಬೆಂಕಿಯ ಕುದುರೆಯನ್ನೇರಿ ಸಿಡಿಲಿನ ಕಡಿವಾಣ ಜಗ್ಗಿದ.

ಹಾಗೆಯೇ ಸಾಗಿದ. ಆದರೆ ಘಟನೆ ಮತ್ತೂ ವಿಚಿತ್ರವಾಯಿತು. ಎದುರಿಗೇ ಕರಡೆಪ್ಪನವರು ಬರುತ್ತಿದ್ದಾರೆ! 'ಇದೇನು ಶಿವನೋ ಅಥವಾ ಶಿವನ ಮೋಸವೋ?' ಎಂದು ಮಳೆಯಪ್ಪ ಚಿಂತಿಸುವಷ್ಟರಲ್ಲಿ ಕರಡೆಪ್ಪನವರೇ ಕೇಳಿದರು–

'ಮಳೆಯಪ್ಪನವರೇ ತಾವು ಯಾವಕಡೆಗೆ.......'

ಅನೇಕ ಸಲ ಕರಡೆಪ್ಪನವರ ಸಂಪರ್ಕ ಬಂದದ್ದರಿಂದ ಅವರ ಬಗ್ಗೆ ಭಯಭೀತಿ ಮಾಯವಾಗಿ ವಾತ್ಸಲ್ಯವು ಮಳೆಯಪ್ಪನಲ್ಲಿ ಮೂಡಿತ್ತು. ಪ್ರಶಾಂತನಾಗಿ ಉತ್ತರಿಸಿದ—

'ಭಿಕ್ಷಾನ್ನಕ್ಕೆ'

'ಭಿಕ್ಷಾನ್ನಕ್ಕೆ ನಡೆದಿರಾ? ಚನ್ನಾಯ್ತು!'

'ಏಕೆ?'

'ಬಡ ವಿದ್ಯಾರ್ಥಿಗಳಿಗಾಗಿ ಶಿವ ನನ್ನಿಂದ ಪ್ರಸಾದನಿಲಯ ಇರಿಸಿದರೆ; ನೀವು ಭಿಕ್ಷೆ ಬೇಡಬೇಕೆ?'

'ಅದು ನಿಮ್ಮ ಕರ್ಮನಿಷ್ಠೆ, ನಿಯಮ ಪಾಲನೆ.'

'ಇರಲಿ. ಆದರೆ ನಿಮ್ಮ ನಿಯಮ ಪಾಲನೆಗೆ ನನ್ನ ದಾಸೋಹ ಹೊರತಾಗಿದೆಯೇ?'

'ಖಂಡಿತ ಹೊರತಾಗಿಲ್ಲ ಸಾವುಕಾರರೇ. ಆದರೆ ನಾನು ಕೈಕೊಂಡ ಪ್ರಾಚಾಧರ್ಮ ಸ್ವಲ್ಪ ಉಗ್ರ. ದಾಸೋಹದಲ್ಲಿ ಅನೇಕರ ಜೊತೆಗೆ.......'

'ಹೌದು. ಹೌದು. ಈ ನಿಮ್ಮ ವಿಚಾರ ನನಗೆ ಮೊದಲೇ ತಿಳಿದಿದೆ. ಆದರೆ.......'

'ಏನು?'

'ನೀವು ಇನ್ನೂ ಅಭ್ಯಾಸಿಗಳು. ಭಿಕ್ಷೆ ಬೇಡುವದರಿಂದ ವೃಥಾ ಕಾಲ ಹರಣವಲ್ಲವೇ?'

'ಹಾಗೆಂದು ನಾನು ತಿಳಿದಿಲ್ಲ ಯಜಮಾನರೆ. ಅದೂ ಒಂದು ಪೂಜೆ ಯೆಂಬೇ ಬಗೆದಿದ್ದೇನೆ. ಅದರಲ್ಲಿ ಅಹಂಕಾರನಿರಸನವಿದೆ. ಜಂಗಮಕಾರ್ಯ ಕರ್ಮದ ಬೇರು ಇದೆ, ಸನ್ಯಾಸಿಗೆ ಸಂಚಾರವೇ ಆತ್ಮಾವಲೋಕನದ ಮೂಲ ಸೂತ್ರವಲ್ಲವೇ?'

'ನಿಮ್ಮ ವಿಚಾರ ನನಗೆ ತಿಳಿಯದು'

'ಅದೇಕೆ ಹಾಗೆನ್ನುವಿರಿ?'

'ಹೌದು. ನೀವು ಸನ್ಯಾಸಿಗಳಾದರೂ ಶಿಕ್ಷಣಾರ್ಥಿಯಾಗಿ ಇಲ್ಲಿ ಬಂದಿರು ವಿರಿ. ನಿಮಗೆ ಭಿಕ್ಷಾನ್ನ ಎಷ್ಟು ಪವಿತ್ರವೋ ಅಷ್ಟೇ ಸಮಯ ಪರಿಪಾಲ ನೆಯೂ ಪವಿತ್ರ. ತ್ರಿಕಾಲ ಪೂಜೆಬೇರೆ ಮಾಡಿರುವಿರಿ. ಮತ್ತೆ ಭಿಕ್ಷಾನ್ನಕ್ಕೆ ಬೇರೆ ಸಮಯ. ಇದೇಕೆ ಹೀಗೆ ಎಂದು ಕೇಳಬಹುದೆ?'

'ಅಗತ್ಯವಾಗಿ. ನಾನು ಓದುತ್ತಿರುವ ಗ್ರಂಥಗಳು ಜ್ಞಾನಸಿದ್ಧಿಯನ್ನು ಬೋಧಿಸುತ್ತವೆ. ಆದರೆ ಜ್ಞಾನ ಸಿದ್ಧಿಗೆ ಕರ್ಮಕ್ಷೇತ್ರ ಬೇಡವೇ? ಭಿಕ್ಷಾಟ ನೆಯೇ ಕರ್ಮಕ್ಷೇತ್ರ. ಇಲ್ಲಿಯೂ ನನ್ನ ಅಭ್ಯಾಸ ಪೂರ್ಣ ಆಗಬೇಕು; ಆಗಲೇ ಭಕ್ತಿ – ಜ್ಞಾನ – ಕರ್ಮಗಳು ಶಿವಯೋಗದಲ್ಲಿ ಪೂರ್ಣಯೋಗದ ಸಮಷ್ಟಿಯನ್ನು ಹೊಂದುತ್ತವೆ.'

'ಮಳೆಯಪ್ಪನವರೇ....'

'ಏನು ಯಜಮಾನರೆ....'

'ಒಂದು ಮಾತು ಕೇಳುವಿರಾ?'

'ಅಗತ್ಯವಾಗಿ. ಶಿವನಾಜ್ಞೆ'

'ಕರ್ಮಯೋಗದಲ್ಲಿ ನಾನು ಬಲ್ಲಿದನಲ್ಲ. ಆದರೂ ನನ್ನ ಎರಡು ಹುಡುಗು ನುಡಿಗಳನ್ನು ಕೇಳಬೇಕು.'

'ಆಗಲಿ'

'ಕೇವಲ ಭಿಕ್ಷಾಟನೆಯೊಂದೇ ಕರ್ಮಮಾರ್ಗದ ಅನುಸಂಧಾನವಲ್ಲವೆಂದು ನನ್ನ ನಂಬಿಕೆ. ಭೌತಿಕದಲ್ಲಿ ನಾವು ನಡೆಸುವ ಕರ್ಮಗಳೆಲ್ಲವೂ ಕರ್ಮಯೋಗ ವಾಗಬಲ್ಲವೆಂದು ಕೇಳಿದ್ದೇನೆ. ಉಸಿರಾಟವೂ ಕರ್ಮವೇ; ವ್ರತಪರಿಪಾಲ ನೆಯೂ ಕರ್ಮವೇ; ಒಪ್ಪುತ್ತೀರಾ?'

'ಸತ್ಯದ ಸತ್ಯ. ಮತ್ತೇನು?'

'ಅಂದಮೇಲೆ ನಿಮ್ಮ ಈ ಬ್ರಹ್ಮಚರ್ಯಾಶ್ರಮದ ಪವಿತ್ರ ಸಮಯ ಅಭ್ಯಾಸಕ್ಕೆ ಲಿಂಗಪೂಜೆಗೆ ಮೀಸಲಾಗಿರಲಿ. ಜೀವನಾನುಭವ ಆಮೇಲೆ ಬರಲಿ, ಇದಕ್ಕೆ ದಯವಿಟ್ಟು ಒಪ್ಪಿರಿ'

'ಸಾಹುಕಾರರೇ....'

'ಹೇಳಿರಿ'

'ನನ್ನ ಮಾತನ್ನು ಕಟ್ಟಿಹಾಕಿದಿರಿ'

'ಖಂಡಿತ ಇಲ್ಲ, ನೀವು ಯೋಗಿಗಳು ನಾನು ಒಬ್ಬ ಸಂಸಾರಿ,'

'ಅದೇಕೆ ಹಾಗೆನ್ನುವಿರಿ? ಯೋಗಿಗಳು ಬಾಳಿಬದುಕಿದ್ದೇ ಸಂಸಾರಿಗರ ಆಧಾರದಿಂದಲ್ಲವೇ? ಯೋಗಿಗಳು ಸಂಸಾರವನ್ನು ಸರ್ವಥಾ ತ್ಯಾಗಮಾಡಿ ದರೂ ಸಂಸಾರಿಗಳು ಯೋಗಿಗಳನ್ನು ತ್ಯಾಗಮಾಡಲಿಲ್ಲ. ಬದಲಾಗಿ ಯೋಗಿ ಗಳಿಗೆ ಆಧಾರಸ್ತಂಭರಾದರು. ಅನ್ನ-ಆಶ್ರಯ-ವಸತಿಗಳಿಗೆ ಪ್ರಾಣಪ್ರದ ರಾದರು. ನಾವಾದರೂ ನಿಮ್ಮ ಮೇಲೆಯೇ ಹೊರೆಹಾಕಿ ಕುಳಿತಿಲ್ಲವೇ?

'ಹಾಕಿದ್ದೀರಿ. ಆದರೆ ಸರಿಯಾಗಿ ಹಾಕಿಲ್ಲ.'

'ಮತ್ತೆ ನನ್ನನ್ನು ಮಾತಿನ ಪರೀಕ್ಷೆಗೆ ಎಳೆಯುತ್ತಿದ್ದೀರಿ.'

'ಇಲ್ಲ ಮಳೆಯಪ್ಪನವರೇ ಇಲ್ಲ. ನೀವೇ ನನ್ನಂಥ ಬಡಪಾಯಿಯನ್ನು ಪರೀಕ್ಷೆ ಮಾಡುತ್ತಿದ್ದೀರಿ.'

'ಅದು ಹೇಗೆ'

'ನಿಮಗೆ ಭಕ್ತರೆಂದರೆ ಬೇಸರವೇ?'

'ಇಲ್ಲ'

'ಭಕ್ತರ ಮನೆಯ ಪ್ರಸಾದದಲ್ಲಿ ವಿಷವಿರುತ್ತದೆಯೋ?'

'ಶಿವಶಿವಾ....ಶಿವಶಿವಾ. ಹಾಗೆನ್ನಬೇಡಿರಿ ಅದು ಅಮೃತ'

'ನೀವು ಆ ಪ್ರಸಾದವನ್ನು ತೊರೆಯುವದಿಲ್ಲವಷ್ಟೇ?'

'ಶಿವನಾಣೆಗೂ ಇಲ್ಲ'

'ಹಾಗಾದರೆ ಇಂದಿನಿಂದ ನಿಮ್ಮ ಪೂಜಾ-ಪ್ರಸಾದ ನಮ್ಮ ಮನೆಯಲ್ಲೇ ಆಗಲಿ. ಮರುಮಾತು ಬೇಡ.'

'.... .... .... .... ....!'

ಮಳೆಯಪ್ಪ ತಬ್ಬಿಬ್ಬಾಗಿ ಹೋದ. ಆತನ ಬಾಯಿಗೆ ಹತ್ತು ಮೊಲಿಗೆಗಳು ಬಿದ್ದಂತಾದವು. ಮತ್ತೆ ಕರಡೆಪ್ಪನವರೇ --

'ಹುಂ. ವಿಚಾರ ಬೇಡ. ಇದು ಶಿವನಾಜ್ಞೆ. ಒಪ್ಪಿರಿ.'

'.... .... .... ....'

ಮಳೆಯಪ್ಪ ಮತ್ತೂ ಗಾಢವಾದ ಮೌನಕ್ಕೆ ಇಳಿದ.

'ಹುಂ, ಮಳೆಯಪ್ಪನವರೇ ತಮ್ಮ ಪಾದ ಈ ಬಡಪಾಯಿ ಭಕ್ತನ ಮನೆಗೆ ದಯಮಾಡಿಸಲಿ. ಭಕ್ತನ ಇಚ್ಛೆಯೇ ಶಿವನಿಚ್ಛೆಯೆಂದು ತಿಳಿಯಿರಿ. ತಡಮಾಡಬೇಡಿರಿ.'

ಆಯ್ತು. ಶಿವಸಂಕಲ್ಪ ಗೆದ್ದಿತು. ಕರಡೆಪ್ಪನವರ ಭಕ್ತಿ ಪ್ರಾರ್ಥನೆ ಜಯಭೇರಿ ಹೊಡೆಯಿತು. ಈಗ ಮಳೆಯಪ್ಪ ಮಳೆಯಪ್ಪನಾಗಲಿಲ್ಲ. ಮಹಾ ಜಂಗಮನಾದ. ಸಿದ್ಧ ಸಾತ್ವಿಕನಾದ. ಆತನ ಪಾದಗಳು ಅವನರಿಯದಂತೆ ಕರಡೆಪ್ಪನವರ ಅರಮನೆಗೆ ಸಾಗಿದವು. ಅಂದಿನಿಂದ ಭಿಕ್ಷಾನ್ನಕ್ಕೆ ಕೊನೆಯ ಪರದೆಬಿತ್ತು. ಮುಂದಿನ ಜೀವನಮಾರ್ಗ ಇನ್ನೂ ಗಂಭೀರವಾದ ಯೋಗ ಮಾರ್ಗದಲ್ಲಿ ಮುನ್ನಡೆಯಿತು. ಸಿದ್ಧಿಯು ಶಿಖರಕ್ಕೆ ಏರಲು ಪ್ರಾರಂಭವಾಯಿತು.

## ಹೊಸ ಯುಗ ತರುವ ಶಂಕರನಲ್ಲಿ ಕೋರಿಕೆ

ಇದೋ ಇಲ್ಲಿದೆ ಚಿತ್ತರಗಿ ಪೀಠ !

ಶ್ರೀಮನ್ನಿರಾಭಾರಿ ದೇಶಿಕವರೇಣ್ಯಾನಾಂ ಪಿಂಡಾದಿಜ್ಞಾನ ಶೂನ್ಯಾಂತ ಮಾಧ ಏಕೋತ್ತರ ಷಟ್‌ಸ್ಥಲ ಸ್ಥಾಪನಾಚಾರ್ಯ ಚಿನ್ಮೂಲಾದ್ರಿವಾಸ ಚಿತ್ತ ಸಿಂಹಾಸನಾಧಿಕಾರಿಗಳಾದ, ಚಿತ್ತರಗಿ ಶಿವಾನುಭವ ಚರಾಧ್ಯಕ್ಷರಾದ ಹಾಗೂ ಚಿತ್ತರಗಿ ಪೀಠದ ಹದಿನೈದನೆಯ ಪಟ್ಟಾಧಿಕಾರಿಗಳಾದಂಥ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಗುರುಮಹಾಂತ ಸ್ವಾಮಿಗಳು ಲಿಂಗೈಕ್ಯರಾದರು ! ಲಿಂಗೈಕ್ಯರಾದರು !! ಲಿಂಗೈಕ್ಯರಾದರು !!!

ಹೌದು, ಲಿಂಗೈಕ್ಯರಾದರು. ಸುದ್ದಿ ಶೀಘ್ರವಾಗಿ–ಹತ್ತು ದಿಕ್ಕಿಗೆ ಹಬ್ಬಿತು. ಇವರು ಆಳುತ್ತಿದ್ದ ಐವತ್ತಾರು ಮಠಗಳು ಒಮ್ಮೆಲೇ ತಬ್ಬಲಿ ಯಾದವು. ನೂರಾರು ಊರಿನ ಭಾವುಕರು ಕಂಗೆಟ್ಟರು. ಅಸಂಖ್ಯ ಭಕ್ತರು ಆತುರಿಸಿ ಓಡಿಬಂದರು.

ಆ ದಿನ ಇಳಕಲ್ಲು ಜನಜಂಗುಳಿಯ ಮಹಾಸಾಗರವಾಯಿತು. ಕಾರಣ ಇವರ ಸಮಾಧಿಯಾದುದು ಇದೇ ಊರಲ್ಲಿ. ಚಿತ್ತರಗಿ ಇವರ ಮೂಲಪೀಠ. ಅದಕ್ಕೆ ಅಂಗವಾಗಿ ಐವತ್ತಾರು ಶಾಖಾಮಠಗಳು ಇವೆ. ಎಲ್ಲ ಮಠಗಳಿಗೂ ಇವರು ಅಧಿಕಾರಿಗಳು ಅವುಗಳಲ್ಲಿ ಇಳಕಲ್ಲು ಶಾಖಾಮಠ. ಆದರೆ ಇತಿಹಾಸ ಬೆಳೆದಂತೆ ಚಿತ್ತರಗಿ ಚಿಕ್ಕದಾಯಿತು. ವ್ಯಾಪಾರ–ಉದ್ಯಮಗಳ ಭಾರೀ ಕೇಂದ್ರ ಸ್ಥಾನವಾದ ಇಳಕಲ್ಲು ಬೃಹದಾಕಾರವಾಗಿ ಬೆಳೆಯಿತು. ಆದ್ದರಿಂದ ಗುರು ಮಹಾಂತಸ್ವಾಮಿಗಳಿಗೆ ಇಳಕಲ್ಲು ಚಿತ್ತರಗಿ ಪೀಠದ ಆಡಳಿತ ಕೇಂದ್ರವಾಯಿತು. ಮುಖ್ಯ ಕಛೇರಿಯಾಯಿತು. ಇಳಕಲ್ಲಿನ ಭವ್ಯ ಮಠದಿಂದಲೇ ಐವತ್ತಾರು ಮಠಗಳ, ನೂರಾರು ಗ್ರಾಮಗಳ, ಅಸಂಖ್ಯಾತ ಭಕ್ತರ ಸಾರೋದ್ಧಾರ ವಾಯಿತು.

ಇಳಕಲ್ಲು ವೈಭವದ ಪಟ್ಟಣ. ಒಂದು ದೃಷ್ಟಿಯಿಂದ ದಕ್ಷಿಣ ಹಿಂದು ಸ್ತಾನದ ತಾಯಿ. ಸೀರೆಗಳ ತವರೂರು. ದುಡ್ಡಿನಲ್ಲಿ ಹೆಚ್ಚು ಕಡಿಮೆಯಾ ದರೂ ಭಕ್ತಿಯಲ್ಲಿ ಸರ್ವರೂ ಚಿತ್ತರಗಿ ಪೀಠದ ಪರಮ ಭಕ್ತರು. ಚಿತ್ತರಗಿ ಅವರ ಚಿತ್ತದ ತೈಲಚಿತ್ರವಾಗಿದೆ. ಕನಸಿನ ಕಳಸವಾಗಿದೆ.

'ಶಿವನಾಣೆಗೂ ಇಲ್ಲ'

'ಹಾಗಾದರೆ ಇಂದಿನಿಂದ ನಿಮ್ಮ ಪೂಜಾ-ಪ್ರಸಾದ ನಮ್ಮ ಮನೆಯಲ್ಲೇ ಆಗಲಿ. ಮರುಮಾತು ಬೇಡ.'

'.... .... .... .... ....!'

ಮಳೆಯಪ್ಪ ತಬ್ಬಿಬ್ಬಾಗಿ ಹೋದ. ಆತನ ಬಾಯಿಗೆ ಹತ್ತು ಹೋಳಿಗೆಗಳು ಬಿದ್ದಂತಾದವು. ಮತ್ತೆ ಕರಡೆಪ್ಪನವರೇ --

'ಹುಂ. ವಿಚಾರ ಬೇಡ. ಇದು ಶಿವನಾಜ್ಞೆ. ಒಪ್ಪಿರಿ.'

'.... .... .... ....'

ಮಳೆಯಪ್ಪ ಮತ್ತೂ ಗಾಢವಾದ ಮೌನಕ್ಕೆ ಇಳಿದ.

'ಹುಂ, ಮಳೆಯಪ್ಪನವರೇ ತಮ್ಮ ಪಾದ ಈ ಬಡಪಾಯಿ ಭಕ್ತನ ಮನೆಗೆ ದಯಮಾಡಿಸಲಿ. ಭಕ್ತನ ಇಚ್ಛೆಯೇ ಶಿವನಿಚ್ಛೆಯೆಂದು ತಿಳಿಯಿರಿ. ತಡಮಾಡಬೇಡಿರಿ.'

ಆಯ್ತು. ಶಿವಸಂಕಲ್ಪ ಗೆದ್ದಿತು. ಕರಡೆಪ್ಪನವರ ಭಕ್ತಿ ಪ್ರಾರ್ಥನೆ ಜಯಭೇರಿ ಹೊಡೆಯಿತು. ಈಗ ಮಳೆಯಪ್ಪ ಮಳೆಯಪ್ಪನಾಗಲಿಲ್ಲ. ಮಹಾ ಜಂಗಮನಾದ. ಸಿದ್ಧ ಸಾತ್ವಿಕನಾದ. ಆತನ ಪಾದಗಳು ಅವನಿಗರಿಯದಂತೆ ಕರಡೆಪ್ಪನವರ ಅರಮನೆಗೆ ಸಾಗಿದವು. ಅಂದಿನಿಂದ ಭಿಕ್ಷಾನ್ನಕ್ಕೆ ಕೊನೆಯ ಪರದೆಬಿತ್ತು. ಮುಂದಿನ ಜೀವನಮಾರ್ಗ ಇನ್ನೂ ಗಂಭೀರವಾದ ಯೋಗ ಮಾರ್ಗದಲ್ಲಿ ಮುನ್ನಡೆಯಿತು. ಸಿದ್ಧಿಯ ಶಿಖರಕ್ಕೆ ಏರಲು ಹವಣಿಸಿದಾಯಿತು.

## ಹೊಸ ಯುಗ ತರುವ ಶಂಕರನಲ್ಲಿ ಕೋರಿಕೆ

ಇದೋ ಇಲ್ಲಿದೆ ಚಿತ್ತರಗಿ ಪೀಠ !

ಶ್ರೀಮನ್ನಿರಾಭಾರಿ ದೇಶಿಕವರೇಣ್ಯಾನಾಂ ಪಿಂಡಾದಿಜ್ಞಾನ ಶೂನ್ಯಾಂತ ಮಾದ ಏಕೋತ್ತರ ಷಟ್‌ಸ್ಥಲ ಸ್ಥಾಪನಾಚಾರ್ಯ ಚಿನ್ಮೂಲಾದ್ರಿವಾಸ ಚಿತ್ತ ಸಿಂಹಾಸನಾಧಿಕಾರಿಗಳಾದ, ಚಿತ್ತರಗಿ ಶಿವಾನುಭವ ಚರಾಧ್ಯಕ್ಷರಾದ ಹಾಗೂ ಚಿತ್ತರಗಿ ಪೀಠದ ಹದಿನೈದನೆಯ ಪಟ್ಟಾಧಿಕಾರಿಗಳಾದಂಥ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಗುರುಮಹಾಂತ ಸ್ವಾಮಿಗಳು ಲಿಂಗೈಕ್ಯರಾದರು ! ಲಿಂಗೈಕ್ಯರಾದರು !! ಲಿಂಗೈಕ್ಯರಾದರು !!!

ಹೌದು, ಲಿಂಗೈಕ್ಯರಾದರು. ಸುದ್ದಿ ಶೀಘ್ರವಾಗಿ–ಹತ್ತು ದಿಕ್ಕಿಗೆ ಹಬ್ಬಿತು. ಇವರು ಆಳುತ್ತಿದ್ದ ಐವತ್ತಾರು ಮಠಗಳು ಒಮ್ಮೆಲೇ ತಬ್ಬಲಿ ಯಾದವು. ನೂರಾರು ಊರಿನ ಭಾವುಕರು ಕಂಗೆಟ್ಟರು. ಅಸಂಖ್ಯ ಭಕ್ತರು ಆತುರಿಸಿ ಓಡಿಬಂದರು.

ಆ ದಿನ ಇಳಕಲ್ಲು ಜನಜಂಗುಳಿಯ ಮಹಾಸಾಗರವಾಯಿತು. ಕಾರಣ ಇವರ ಸಮಾಧಿಯಾದುದು ಇದೇ ಊರಲ್ಲಿ. ಚಿತ್ತರಗಿ ಇವರ ಮೂಲಪೀಠ. ಅದಕ್ಕೆ ಅಂಗವಾಗಿ ಐವತ್ತಾರು ಶಾಖಾಮಠಗಳು ಇವೆ. ಎಲ್ಲ ಮಠಗಳಿಗೂ ಇವರು ಅಧಿಕಾರಿಗಳು ಅವುಗಳಲ್ಲಿ ಇಳಕಲ್ಲು ಶಾಖಾಮಠ. ಆದರೆ ಇತಿಹಾಸ ಬೆಳೆದಂತೆ ಚಿತ್ತರಗಿ ಚಿಕ್ಕದಾಯಿತು. ವ್ಯಾಪಾರ–ಉದ್ಯಮಗಳ ಭಾರೀ ಕೇಂದ್ರ ಸ್ಥಾನವಾದ ಇಳಕಲ್ಲು ಬೃಹದಾಕಾರವಾಗಿ ಬೆಳೆಯಿತು. ಆದ್ದರಿಂದ ಗುರು ಮಹಾಂತಸ್ವಾಮಿಗಳಿಗೆ ಇಳಕಲ್ಲು ಚಿತ್ತರಗಿ ಪೀಠದ ಆಡಳಿತ ಕೇಂದ್ರವಾಯಿತು. ಮುಖ್ಯ ಕಛೇರಿಯಾಯಿತು. ಇಳಕಲ್ಲಿನ ಭವ್ಯ ಮಠದಿಂದಲೇ ಐವತ್ತಾರು ಮಠಗಳ, ನೂರಾರು ಗ್ರಾಮಗಳ, ಅಸಂಖ್ಯಾತ ಭಕ್ತರ ಸಾರೋದ್ಧಾರ ವಾಯಿತು.

ಇಳಕಲ್ಲು ವೈಭವದ ಪಟ್ಟಣ. ಒಂದು ದೃಷ್ಟಿಯಿಂದ ದಕ್ಷಿಣ ಹಿಂದು ಸ್ತಾನದ ತಾಯಿ. ಸೀರೆಗಳ ತವರೂರು. ದುಡ್ಡಿನಲ್ಲಿ ಹೆಚ್ಚು ಕಡಿಮೆಯಾ ದರೂ ಭಕ್ತಿಯಲ್ಲಿ ಸರ್ವರೂ ಚಿತ್ತರಗಿ ಪೀಠದ ಪರಮ ಭಕ್ತರು. ಚಿತ್ತರಗಿ ಅವರ ಚಿತ್ತದ ತೈಲಚಿತ್ರವಾಗಿದೆ. ಕನಸಿನ ಕಳಸವಾಗಿದೆ.

ಮಡಿವಂತಿಕೆ ಬಹಿರಂಗದಲ್ಲಿ ಗಡ್ಡ ಮೀಸೆಗಳಾಗಿ ಬೆಳೆದರೆ, ಅಂತರಂಗದಲ್ಲಿ ಸಂಯಮ ಹಾಗೂ ಸಿದ್ಧಿಗಳೆಂಬ ಗಡ್ಡ ಮೀಸೆಗಳು ಬೆಳೆದಿವೆ.

ಇನ್ನು ನನ್ನ ಮುಂದಿನ ಭವಿಷ್ಯವೆಲ್ಲಿ? ನಾನು ವಿದ್ಯಾಭ್ಯಾಸ ಪೂರೈಸಿದ ತರುವಾಯ ಯಾವ ಅರಣ್ಯ ಸೇರಲಿ. ಈಗ ಕರಡೆಪ್ಪನವರು ಆಶ್ರಯ ಗೊಟ್ಟಂತೆ ಮುಂದೆ ನನಗೆ ಯಾರು ಆಶ್ರಯ ನೀಡಬಲ್ಲರು? ಆಗ ನನ್ನ ಊಟ ಉಪಚಾರದ ಪರಿಸ್ಥಿತಿ ಏನು? — ಎಂದು ಮೊದಲಾಗಿ ಒಂದೂ ಸಮಸ್ಯೆ ಮಳೆಯಪ್ಪಾರ್ಯನ ಅಂತರಂಗದಲ್ಲಿ ಸುಳಿಯಲಿಲ್ಲ. ಆತ ನಿತ್ಯತೃಪ್ತನಾಗಿದ್ದ. ಭವಿಷ್ಯವನ್ನು ಭಗವಂತನೇ ರೂಪಿಸಬೇಕಾಗಿತ್ತು.

ಈಶ್ವರನ ಸಂಕಲ್ಪವೇ? ಮಳೆಯಪ್ಪಾರ್ಯನ ಜೀವನದಲ್ಲಿ ಇನ್ನೂ ವಿಚಿತ್ರವಾದ ಕಾರ್ಯವನ್ನು ಆ ದೈವಲೀಲೆ ಮಾಡಿಬಿಟ್ಟಿತು. ಕೇಳುವದೇನು? ಒಂದು ದಿನ ಪ್ರಾತಃಕಾಲದ ಸಮಯ ಮಳೆಯಪ್ಪಾರ್ಯ ಶಿವಪೂಜೆಯನ್ನು ಪರಿಪೂರ್ಣಗೊಳಿಸಿ. ಹುಣ್ಣಿಮೆಯ ಪೂರ್ಣ ಚಂದ್ರನಂತೆ ಕುಳಿತಿದ್ದಾನೆ. ಆಗ ಕರಡೆಪ್ಪನವರು ಆತುರದಿಂದ ಆವೇಶದಿಂದ, ಏನೋ ದೊಡ್ಡ ವಿಷಯವನ್ನು ಅರುಹಬೇಕೆಂಬ ತವಕದಿಂದ ಭರ್ರನೇ ಬಂದರು. ಅವರಿಗೆ ಏನೋ ಕಳವಳ, ಏನೆನ್ನುವರೋ ಎಂಬ ಭೀತಿ, ಆದರೂ ಹೇಳದೇ ತೃಪ್ತಿ ಇಲ್ಲ. ಗುಟ್ಟನ್ನು ಅರುಹದೇ ಸಮಾಧಾನವಾಗುವಂತಿರಲಿಲ್ಲ. ಕರಡೆಪ್ಪನವರು ಮೆಲ್ಲನೆ ತಾವು ಬಂದ ವೃತ್ತಾಂತವನ್ನು ಬಿಚ್ಚಲು ಮೊದಲು ಮಾಡಿದರು.

ಹೌದು.... ಅದೊಂದು ಅತಿದೊಡ್ಡ ಇತಿಹಾಸ! ಅದ್ಭುತ ಚರಿತ್ರೆ !!

# ಅದೊಂದು ಅದ್ಭುತ ಚರಿತ್ರೆ

ಕಾಲಚಕ್ರ ಗತಿಸಿತು.

ಶ್ರೀಮಂತಿಕೆಯ ಸುಪ್ಪತ್ತಿಗೆಯ ಮಧ್ಯದಲ್ಲಿ ವೈರಾಗ್ಯದ ಮೊಗ್ಗು ಕರಡೆಪ್ಪನವರ ಮನೆಯಲ್ಲಿ ಅರಳುತ್ತಿದೆ. ಕರಡೆಪ್ಪನವರು ತಮ್ಮ ಮೂರನೆ ಮಹಡಿಯ ಏಕಾಂತ ಸ್ಥಾನವನ್ನು ಮಳೆಯಪ್ಪಾರ್ಯನ ಲಿಂಗಾರ್ಚನೆಗೆ ಅಭ್ಯಾಸಕ್ಕೆ ನೀಡಿದ್ದಾರೆ. ಸ್ನಾನ-ಲಿಂಗಪೂಜೆ—ಪ್ರಸಾದಗಳಿಗೆ ಸೇವಕರನ್ನು ನೇಮಿಸಿದ್ದಾರೆ. ಮನೆಯ ಆ ಸೇವಕರು ಪ್ರತಿನಿತ್ಯ ಈತನ ಸೇವೆಯನ್ನು ಪೂರ್ಣ ಮಡಿಯಿಂದ ಮಾಡುತ್ತಿದ್ದಾರೆ. ಮೊದಮೊದಲು ದೂರ ಉಳಿಯು ತ್ತಿದ್ದ ಕರಡೆಪ್ಪನವರ ಪುಣ್ಯವತಿಯಾದ ಮಡದಿ ಈಗ ಸೇವಕರನ್ನು ಸರಿಸಿ ತನ್ನ ಪಾಲಿನ ಸೇವೆಯನ್ನು ನೀಡುತ್ತಿದ್ದಾಳೆ. ಅವಳ ಮಕ್ಕಳು, ಸೊಸೆಯಂ ದಿರು, ಬಂಧುಬಳಗ ಎಲ್ಲರೂ ಕೆಲಕಾಲದಲ್ಲೇ ಈ ತರುಣ ಯೋಗಿಗೆ ಸಮೀ ಪದವರಾದರು. ಆದರೆ ಇವನು ಅಷ್ಟಕ್ಕಷ್ಟೇ. ಹತ್ತಕ್ಕೆ ಒಂದು ಮಾತು. ಇವನ ಸ್ವಭಾವವನ್ನರಿತ ಅವರು ಈತನ ಏಕಾಂತಕ್ಕೆ ತೊಂದರೆ ತರಲಿಲ್ಲ. ಮೌನದಿಂದಲೇ ಎಲ್ಲ ಆಗುಹೋಗುಗಳಲ್ಲಿಯೂ ಕೈ ನೀಡುತ್ತಿದ್ದರು. ಕರಡೆಪ್ಪ ನವರು ಈಗ ಅನ್ನ ನೀಡುವ ಧನಿಯಾಗಿ ತೋರಲಿಲ್ಲ. ಒಮ್ಮೆ ಸಾಕು ತಂದೆ ಯಂತೆ, ಇನ್ನೊಮ್ಮೆ ಪೋಷಣೆಗೈವ ತಾಯಿಯಂತೆ, ಮತ್ತೊಮ್ಮೆ ನಮ್ರ- ಸೇವಕನಂತೆ ಮಗದೊಮ್ಮೆ ದ್ವಾರಬಾಗಿಲ ದೂತನಂತೆಕಾಣುತ್ತಿದ್ದರು. ಅದಕ್ಕೆ ಕಾರಣ ಈತನ ಅತ್ಯುಗ್ರವಾದ ಲಿಂಗಪೂಜಾ ವಿಧಾನ. ಕಠೋರವಾದ ನಿತ್ಯ ಜೀವನ. ಹೀಗಾಗಿ ಕೆಲಕಾಲದಲ್ಲೇ ಮಳೆಯಪ್ಪಾರ್ಯನ ಕೋಣೆಯೇ ಅವರ ಮನೆಯ ದೇವರ ಕೋಣೆಯಾಯಿತು ಮಳೆಯಪ್ಪಾರ್ಯನೇ ಜಗುಲಿಯ ದೇವರಾದ. ಆತನನ್ನು ಅರ್ಚಿಸಿ ಆರಾಧಿಸುವದೇ ಅವರಿಗೆ ನಿತ್ಯ ರುದ್ರಾ ಭಿಷೇಕವಾಯಿತು.

ಮಳೆಯಪ್ಪಾರ್ಯ ಈಗೀಗ ಪ್ರಬುದ್ಧ ಋಷಿಯಾಗಿ ಕಾಣುತ್ತಿದ್ದಾನೆ. ಗಡ್ಡ ಮೀಸೆಗಳು ಉದ್ದುದ್ದ ಬೆಳೆದಿವೆ. ತಲೆಯಲ್ಲಿ ಜಡೆ ಪರ್ವತ ಶೈಲದಂತೆ ಏರುತ್ತಿದೆ. ಮೊದಲೇ ಗಂಭೀರ ಮೂರ್ತಿ. ಗಡ್ಡ—ಮೀಸೆ—ಜಟೆಗಳಿಂದ ಗಂಭೀರಕ್ಕೆ ಉಗ್ರತೆಯ ಕಿರೀಟ ತೊಡಿಸಿದಂತಾಗಿದೆ. ಶೀಲವೇ ಅವನ ಸಂಪತ್ತಾ ಗಿದೆ. ಶುದ್ಧ ಮಡಿಯು ಸದಾಚಾರವಾಗಿದೆ. ಈ ಶೀಲ ಹಾಗೂ ಅವನ

ಅಂದಮೇಲೆ ಪೂಜ್ಯ ಗುರುಮಹಾಂತ* ಸ್ವಾಮಿಗಳು ಲಿಂಗೈಕ್ಯರಾದ ಸುದ್ದಿ ಯಾರನ್ನೂ ದಂಗುಬಡಿಸಲಿಕ್ಕಿಲ್ಲ! ಇವರು ರಾಜಗುರುಗಳಂತೆ

* ಪೂಜ್ಯ ಗುರು ಮಹಾಂತಸ್ವಾಮಿಗಳು ಈ ಪೀಠದ ೧೫ನೆಯವರು. ಪವಾಡ ಪುರುಷರಾದ ವಿಜಯ ಮಹಾಂತ ಸ್ವಾಮಿಗಳಿಗಿಂತ ಹಿಂದಿನವರು. ಇಳಕಲ್ಲ ಹಳ್ಳದ ಸುಂದರ ಸಂಗಮದಲ್ಲಿ, ಭವ್ಯವಾದ ಆಲಂಕಾರದಿಂದ ಶೃಂಗರಿಸಲ್ಪಟ್ಟ ಜೋಡು ಗೋಪುರಗಳುಳ್ಳ ಶಿಲಾಮಂಟಪದ ಎದುರಿಗೆ ನಾವು ಹೋಗಿ ನಿಂತರೆ ನಮ್ಮ ಎಡಭಾಗಕ್ಕೆ ಆಗುವದೇ ಇವರ ಗದ್ದುಗೆ. ನಮ್ಮ ಬಲಬಾಗಕ್ಕೆ ಆಗುವದೇ, ಈ ಚರಿತ್ರ ನಾಯಕನಾದ ಶ್ರೀವಿಜಯ ಮಹಾಂತ ಶಿವಯೋಗಿಯ ಜಾಗೃತ ಕರ್ತೃಗದ್ದುಗೆ. ಈ ಗದ್ದುಗೆಗೆ ಉರಿಯುತ್ತಿರುವ ಬೆಂಕಿಯಕೆಂಡವೆಂದು ಜನ ಅನ್ನುತ್ತಾರೆ. ಇವರು ಈ ಪೀಠದ ೧೬ನೆಯ ಸ್ವಾಮಿಗಳು. ಇವರ ಸುಂದರ ಶಿಲಾಮೂರ್ತಿಯೂ ಇಲ್ಲಿ ಸ್ಥಾಪಿಸಲ್ಪಟ್ಟಿದೆ. ಇವರ ತರುವಾಯ ಕ್ರಿ.ಶ.೧೯೨೮ ರಿಂದ ೧೯೪೪ರ ವರೆಗೆ ಶ್ರೀಗುರುಮಹಾಂತ ಸ್ವಾಮಿಗಳು ಆಳಿದರು. ಇವರು ಪೀಠದ ೧೭ನೆಯ ಸ್ವಾಮಿಗಳು. ಇವರ ಗದ್ದುಗೆಯು ತೇರಿನ ಮನೆಯ ಬಲ ಭಾಗದ ಕಟ್ಟಡದಲ್ಲಿದೆ. ಇದರ ಮೇಲೆ ಒಂದು ಚಿಕ್ಕ ಗೋಪುರವೂ ಇದೆ. ಇವರ ತರುವಾಯ ಕೊಪ್ಪದ ಮಹಾಂತ ಸ್ವಾಮಿಗಳು ಕೆಲ ವರ್ಷ ಪೀಠದ ಆಡಳಿತೆಯನ್ನು ನಿರ್ವಹಿಸಿಕೊಂಡು ಹೋದರು. ಜೋಡುಗೋಪುರಗಳ ಶಿಲಾ ಮಂಟಪದ ಹಿಂದುಗಡೆ ಏಕೈಕವಾಗಿ ಇರುವ, ಸುಂದರವಾದ ಶಿಖರವುಳ್ಳ ಗದ್ದುಗೆಯೇ ಇವರದು. ಈ ಸ್ವಾಮಿಗಳು ನುರಿತ ವಾಗ್ಮಿಗಳಾದರು. ಮೇಲಿಂದ ಮೇಲೆ ಮೌನವ್ರತ ಆಚರಿಸುತ್ತಿದ್ದರು. ಮುಂದೆ ಕ್ರಿ.ಶ. ೧೯೬೪ಕ್ಕೆ ಬಂದ ಗುರುಮಹಾಂತ ಸ್ವಾಮಿಗಳು ಈ ಪೀಠದ ೧೮ನೇಯವರು. ಇವರು ಇಳಕಲ್ಲಿನಲ್ಲಿ ಸ್ಥಾಪಿತವಾದ ಶ್ರೀವಿಜಯ ಮಹಾಂತೇಶ್ವರ ವಿದ್ಯಾವರ್ಧಕ ಸಂಘದ ಸಂಸ್ಥಾಪಕರು. ಅದಕ್ಕೆ ಜೀವಾವಧಿಯ ಅಧ್ಯಕ್ಷರು. ಆ ಸಂಸ್ಥೆಗೆ ೪೫೦೦೦ ರೂಪಾಯಿ ದಾನವಿತ್ತರು. ೧೫೦ ವಿದ್ಯಾರ್ಥಿಗಳ ಉಚಿತ ಪ್ರಸಾದ ನಿಲಯ ನಡೆಸಿದರು. ಸಾವಿರಾರು ರೂಪಾಯಿ ಖರ್ಚುಮಾಡಿ "ಶ್ರೀ ಬಸವಕಾವ್ಯ ದರ್ಶನಂ" ಕಾವ್ಯವನ್ನು ಅಚ್ಚು ಹಾಕಿಸಿದರು. ಇವರಿಂದ ಬೀಳುಹೊಲಗಳೆಲ್ಲ ಸಾಗುವಳಿಯಾದವು. ಶ್ರೇಷ್ಠ ಕರ್ಮಯೋಗಿಗಳಾಗಿದ್ದರು, ಆದರೆ ಅಲ್ಪಾವಧಿಯಲ್ಲಿ ಶಿವೈಕ್ಯರಾದರು. ಇವರ ಗದ್ದುಗೆಯೂ ತೇರಿನ ಪಕ್ಕದ ಕಟ್ಟಡದಲ್ಲಿ ಎಡಭಾಗದ ಮೂಲೆಯ ಕೋಣೆಯಲ್ಲಿದೆ. ಇಂದು ಪೀಠದಲ್ಲಿ ವಿರಾಜಮಾನರಾದ ಪೂಜ್ಯ ಮಹಾಂತಸ್ವಾಮಿಗಳು ಪೀಠದ ೧೯ ನೆಯವರು. ಇವರು ಸವದಿ ಮಹಾಂತ ಸ್ವಾಮಿಗಳೆಂದು ಪ್ರಸಿದ್ಧವಾಗಿದ್ದು, ಒಳ್ಳೇ ವಾಗ್ಮಿಗಳೂ ಶಿವಪೂಜಾನಿಷ್ಠರೂ ಆಗಿದ್ದಾರೆ. ಹುಬ್ಬಳ್ಳಿ ಮೂರುಸಾವಿರ ಮಠದ ಪೂಜ್ಯ ಜಗದ್ಗುರುಗಳು ಇವರಿಗೆ "ಅಭಿನವ ಚೆನ್ನಬಸವಣ್ಣ" ಎಂದು ಬಿರುದು ಇತ್ತಿದ್ದಾರೆ.

ವೈಭವಶಾಲಿಗಳಾಗಿದ್ದರು. ರಾಜಯೋಗಿಯೆಂದು ಜನತೆಯಿಂದ ಕರೆಸಿಕೊಂಡ ಮಹಿಮರು. ಈಸ್ಟ್ ಇಂಡಿಯಾ ಕಂಪನಿಯು ಸರ್ವಾಧಿಕಾರವನ್ನು ಸ್ವೀಕರಿಸಿ ಭಾರತಕ್ಕೆ ಆಗಮಿಸಿದ ಸೇನಾಪತಿ ಬಾಲ್ಮೆನ್ ಸಾಹೇಬರು ಆ ಕಾಲದ ಬ್ರಿಟಿಷ ಸೈನಿಕ ಠಾಣೆಯಾದ ಛಾವಣಿಯಲ್ಲಿ ಕೆಲಕಾಲ ತಂಗಿದ್ದರು. ಇವರು ಗುರುಮಹಾಂತ ಸ್ವಾಮಿಗಳ ಅಭೂತಪೂರ್ವ ವ್ಯಕ್ತಿತ್ವಕ್ಕೆ ಮಾರು ಹೋಗಿದ್ದರು. ಅವರಿಗೆ ದಾಸಾನುದಾಸರಾಗಿದ್ದರು. ಇವರ ವ್ಯಕ್ತಿತ್ವಕ್ಕೆ ಮಾರುಹೋದ ರಾಯಚೂರ ಜಿಲ್ಲೆಯ ಡೆಪ್ಯುಟಿ ಕಮಿಶನರ್ ಬಟಲರ್ ಸಾಹೇಬರು ನಿಜಾಂ ಸರಕಾರದ ಪರವಾಗಿ ಇವರ ಮಠಕ್ಕೆ ತಾ. ೧೯-೧-೧೮೬೧ ರಂದು 'ಚಪರಾಶಿ' ಬಿಲ್ಲೆಯನ್ನು ಕೊಡಮಾಡಿದರು. ಈ ಸ್ವಾಮಿಗಳು ಹಂಪೆಗೆ ದಯಮಾಡಿಸಿದಾಗ ಶೃಂಗೇರಿ ಪೀಠದ ಜಗದ್ಗುರುಗಳೇ ಇವರಿಗೆ ಅಭೂತಪೂರ್ವ ಸ್ವಾಗತವನ್ನು ಸಲ್ಲಿಸಿದರಂತೆ. ಸುರಪುರದ ಎರಡನೆಯ ವೆಂಕಪ್ಪನಾಯಕ ಇವರ ಕೇವಲ ಶಿಷ್ಯ. ಇವರ ಆಳಿಕೆಯ ಇನ್ನೊಂದು ಅಪೂರ್ವ ಸಂಗತಿಯೆಂದರೆ ಮುರ್ತುಜಾ ಖಾದರಿ. ಹೇರೂರ ಬಾಬಾ ಹಾಗೂ ರುದ್ರಮುನಿಸ್ವಾಮಿ ಮೊದಲಾದ ಮಹಾಶರಣರು ಇವರ ಆತ್ಮೀಯತೆಗೆ ಪಾತ್ರರಾಗಿದ್ದರು. ಮೇಲಿಂದ ಮೇಲೆ ಪರಸ್ಪರರನ್ನು ಸಂಧಿಸಿ ಆತ್ಮಾವಲೋಕನ ಗೈಯ್ಯುವ ಆ ದೇವಸನ್ನಿವೇಶಗಳನ್ನು ಯಾರು ತಾನೆ ಮರೆಯಬಲ್ಲರು? ಲಿಂಗೈಕ್ಯರಾದ ಗುರುಮಹಾಂತ ಸ್ವಾಮಿಗಳು ಅಪೂರ್ವರು. ಅವರ ಚಿತ್ತರಗಿ ಪೀಠವೂ ಅಪೂರ್ವ, ಅವರ ಗುರುಪರಂಪರೆಯೂ ಅಪೂರ್ವ. ಅವರ ಗುರುಗಳೆಂದರೆ ಸಾಮಾನ್ಯರೇ ? ಕೇವಲ ಅವರನ್ನು ನೆನೆದರೆ ಮುಕ್ತಿಯು ಹದಿನಾಲ್ಕು ಮೊಳ ಹತ್ತಿರವಾದಂತೆ ಹದಿನಾಲ್ಕು ಜನ ಗುರುಪರಂಪರೆ ! ಹದಿನೈದನೇಯವರೇ ಇವರು ?

ಲೆಕ್ಕಕ್ಕೆ ಹದಿನೈದಾದರೂ ಸತ್ಯಕ್ಕೆ ಈ ಮಹಾಪೀಠ ಇನ್ನೂ ಇನ್ನೂ ಹಿಂದೆ ಹೋಗಿ, ಹನ್ನೆರಡನೆಯ ಶತಮಾನದ ಅನುಭವಮಂಟಪದಲ್ಲಿ ಅಲ್ಲಮ ಪ್ರಭುದೇವರು ಸ್ಥಾಪಿಸಿದ ಶೂನ್ಯಸಿಂಹಾಸನಕ್ಕೂ ಏರಿದೆ. ಈ ದೀರ್ಘಕಾಲದಲ್ಲಿ ಈ ಪೀಠ ಕೆಲಕಾಲ ಕೀರ್ತಿಯ ಬಾವುಟ ಎತ್ತಿದೆ. ಕೆಲಕಾಲ ಕಾಲಪುರುಷನ ಪೆಟ್ಟು ತಿಂದಿದೆ. ಇನ್ನು ಕೆಲಕಾಲ ಪರಕೀಯ ವಿಧ್ವಂಸಕರ ಸಂಹಾರದಲ್ಲಿ

ಪಾತಾಳಸೇರಿ ಬೇತಾಳವಾಗಿದೆ. ಒಮ್ಮೊಮ್ಮೆ ಉಗ್ರನಾರಸಿಂಹನ ರೂಪತಾಳಿ ಲೋಕವನ್ನೇ ನಡುಗಿಸಿದೆ.

ಹಿಂದಿನ ಕಥೆ. ತೀರ ಹಿಂದಿನ ಕಥೆ. ಒಬ್ಬರು ಲಿಂಗೈಕ್ಯರಾದಾಗ ಹಿಂದಿನವರೆಲ್ಲ ನೆನಪಾಗುವದಿಲ್ಲವೇ ? ಹಾಗೆ ? ಹನ್ನೆರಡನೆಯ ಶತಮಾನದ ಕಲ್ಯಾಣದ ಕ್ರಾಂತಿ ಮುಗಿಯಿತು. ಶರಣಕುಲ ಕಂಗೆಟ್ಟು ಓಡಿತು. ಬಸವಣ್ಣನವರು ಸಂಗಮಕ್ಕೆ ಆಗಮಿಸಿದರು. ಪ್ರಭುದೇವರು ಶ್ರೀಶೈಲಕ್ಕೆ ನಡೆದರು. ಅವರ ಮೂರುಸಾವಿರ ವಿರಕ್ತ ಶಿಷ್ಯರಲ್ಲಿ ಒಬ್ಬರು ಮಲಪ್ರಭೆಯ ದಂಡೆಯ ಮೇಲೆ ಹಳೆಯ ಚಿತ್ತರಗಿಯ ಹೊರವಲಯದಲಿ ಉಳಿದರು. ಅವರೇ ಮಠವಾದರು. ಮಠವೇ ಅವರಿಂದ ನಿರ್ಮಾಣವಾಯಿತು. ಅನೇಕ ಚರಮೂರ್ತಿಗಳು ಈ ಸತ್ಸಂಪ್ರದಾಯದ ಮಠದ ಪಾವನ ಜ್ಯೋತಿಯನ್ನು ಬೆಳಗಿಸಲು ಹೆಣಗಿದರು. ದ್ವಿತೀಯ ಪ್ರಭುದೇವರಾಗಿ ಎಡೆಯೂರ ತೋಂಟದ ಸಿದ್ಧಲಿಂಗ ಶಿವಯೋಗೀಶ್ವರ ವೈಭವೆತ್ತಿಬಂದ. ಈತ ಮಹಾತಪಸ್ವಿ, ಮಹಾಜ್ಞಾನಿ, ಮಹಾದಾರ್ಶನಿಕ. ಜೊತೆಗೆ ಪ್ರಚಂಡ ಕ್ರಿಯಾಸಾಮರ್ಥ್ಯ ಪರಿಣತ. ಈತನ ಪ್ರಚಂಡ ತಪಸ್ಸಿಗೆ ಹುತ್ತು ಬೆಳೆಯಿತು ! ಅವಿರಳ ಜ್ಞಾನಕ್ಕೆ ವಚನ ಸಾಹಿತ್ಯ ಮರುಸುಗ್ಗಿಯನ್ನು ಕಂಡಿತು !! ಅಸ್ಖಲಿತ ದಾರ್ಶನಿಕತೆಗೆ ಷಟ್‌ಸ್ಥಲಶಾಸ್ತ್ರ ಸುಸಂಘಟಿತವಾಯಿತು !!! ಅಲ್ಲದೇ ಕಾಲರಾಕ್ಷಸನ ಹಲ್ಲುಗಳಲ್ಲಿ ಹುರುಪಳಿಸಿ ಹಿಪ್ಪೆಯಾಗಿ ಹುಡಿಗೂಡಿಹೋದ ಶರಣಸ್ಥಲದ ಮಠಗಳೆಲ್ಲ ಪುನರುಜ್ಜೀವನದ ಪ್ರಖರ ಚೈತನ್ಯವನ್ನು ತುಂಬಿಕೊಂಡು ಮೇಲೆದ್ದು ನಿಂತವು. ಅಸಂಖ್ಯ ನವೀನ ಮಠಗಳು ಚಿನ್ಮಯದ ಚೈತನ್ಯ ಪಕ್ಷಿಗಳಾಗಿ ಮೇಲೆದ್ದವು. ಒಟ್ಟಿನಲ್ಲಿ ಹನ್ನೆರಡನೆಯ ಶತಮಾನದ ಮಹಾಕ್ರಾಂತಿಗೆ ಮರುಕ್ರಾಂತಿ ಕೇಕೆಹಾಕಿತು !

ಈ ಮಹಾಮಹಿಮ ತನ್ನ ನೂರೊಂದು ವಿರಕ್ತರ ಪ್ರಚಂಡ ವೈರಾಗ್ಯ ಸೈನ್ಯವನ್ನು ಕಟ್ಟಿಕೊಂಡು ಸೀಮೋಲ್ಲಂಘನೆಗೆ ನಡೆದ. ಈತನ ಈ ಮಿಂಚಿನ ದಾಳಿಗೆ ಭೋಗಸುಂದರಿ ಭೋರೆಂದು ಓಡಿದಳು ! ಜನತೆಯ ನಿರ್ವೀರ್ಯತೆ ತೊಲಗಿತು. ನಾಸ್ತಿಕತೆ ನಾಸ್ತಿಯಾಯಿತು.

ಹದಿನೈದನೆಯ ಶತಮಾನದ ಉತ್ತರಾರ್ಧ. ಚಿತ್ರಭಾನು ಸಂವತ್ಸರ ಶಾ. ಶ. ೧೩೮೪ (ಕ್ರಿ. ಶ. ೧೪೬೨) ಚೈತ್ರ ಮಾಸದಲ್ಲಿ ಈ ತೋಂಟದ ಸಿದ್ಧಲಿಂಗ ಯತಿಯ ಅಗ್ನಿಪಾದಗಳ ಚಿತ್ತರಗಿಯ ಪುರಾತನ ಮಠಕ್ಕೆ ದಯಮಾಡಿ

ಸಿದವು! ಈತನ ನೂರೊಂದು ವಿರಕ್ತರಲ್ಲೇ ಮಹಾ ನೇಮನಿಷ್ಠಾನಿಧಿಯಾದ, ಪ್ರಕಾಂಡ ಪಂಡಿತನಾದ ಗುರುಮಹಾಂತ ಶಿವಯೋಗಿ ರಾರಾಜಿಸುತ್ತಿದ್ದ!! ದೀಪದಿಂದ ದೀಪಗಳು ಹತ್ತಿಕೊಳ್ಳುವಂತೆ ಈ ಗುರುಮಹಾಂತ ಶಿವ ಯೋಗಿಯ ವರಶಿಷ್ಯ ಲಲಾಮರಾಗಿ ವಿಜಯ ಮಹಾಂತ ದೇಶಿಕೋತ್ತಮರು, ಅನ್ನದಾನೀಶ್ವರ ಹಾಗೂ ಕೊಟ್ಟೂರೇಶ್ವರರು ಲೋಕದಲ್ಲಿ ಬೆಳಗುತ್ತಿದ್ದರು!!! ಮಹಾಪೂಜ್ಯನಾದ ತೋಂಟದ ಸಿದ್ಧಲಿಂಗ ಯತಿಯ ಅಪ್ಪಣೆಯ ಮೇರೆಗೆ ಗುರುಮಹಾಂತ ಶಿವಯೋಗೀಶ್ವರನು ತನ್ನ ಶಿಷ್ಯನಾದ ವಿಜಯ ಮಹಾಂತ ದೇಶಿಕೋತ್ತಮನಿಗೆ ಚಿತ್ತರಗಿ ನಿರಂಜನ ಪೀಠದ ನಿರಾಭಾರ ಪಟ್ಟಾಭಿಷೇಕ ವನ್ನು ಮಾಡಿದ. ಅಂದಿನಿಂದ ಈ ಗುರುಪರಂಪರೆಯಾದ ಗುರುಮಹಾಂತ ಶಿವಯೋಗಿ ಹಾಗೂ ವಿಜಯಮಹಾಂತ ಶಿವಯೋಗಿ ಇಲ್ಲವೇ ಮಹಾಂತ ಶಿವಯೋಗಿ ಎಂಬ ಪರಂಪರಾಗತವಾದ ಹೆಸರುಗಳು ಈ ಮಠದ ಪೀಠಾಚಾರ್ಯ ರಲ್ಲಿ ಬಂದವು. ಅಂದಿನಿಂದಲೇ ಶ್ರೀ ಚಿತ್ತರಗಿ ವಿಜಯ ಮಹಾಂತೇಶ್ವರ ಪೀಠ ಪ್ರಾರಂಭವಾಯಿತು. ಶ್ರೀ ವಿಜಯ ಮಹಾಂತ ಸ್ವಾಮಿಯು ಈ ನಿರಂಜನ ಪೀಠದ ಪ್ರಪ್ರಥಮ ಪೀಠಾಚಾರ್ಯನೆನಿಸಿದರು.

ಈ ಮಹಾಯಾತ್ರೆಯಲ್ಲಿ ಇಂದು ಶುಭಯಾತ್ರೆ! ಈ ಪೀಠದ ಹದಿನೈದ ನೆಯ ಪೀಠಾಚಾರ್ಯರಾದ ಗುರುಮಹಾಂತಸ್ವಾಮಿಗಳು ಲಿಂಗೈಕ್ಯರಾದ ಅಪೂರ್ವ ಯಾತ್ರೆ!!

ಅಂತ್ಯಯಾತ್ರೆ ಮುಗಿಯಿತು. ಇನ್ನು ಚಿತ್ತರಗಿ ಪೀಠ ಹೊಸ ಸಂಧಿ ಯನ್ನು ತೆರೆಯಲಿದೆ. ಹೊಸ ಯುಗವನ್ನೇ ಆರಂಭಿಸಲಿದೆ. ಚುಕ್ಕಿಗಳು ಮಾಯವಾಗಿ ಮಹಾಸೂರ್ಯ ಪ್ರತಾಪಶಾಲಿಯಾಗಿ ಬೆಳಗಲಿದ್ದಾನೆ. 'ನಮ್ಮ ಗುರುಮಹಾಂತ ಸ್ವಾಮಿಗಳು ರಾಜಯೋಗಿಯಾಗಿದ್ದರು. ಮಹಾ ಪಂಡಿತ ರಾಗಿದ್ದರು. ಇನ್ನು ಮುಂದಿನವರು ಎಂಥವರು ಬರುವರೋ?' ಎಂದು ಜನಸ್ತೋಮ ತಮ್ಮತಮ್ಮಲ್ಲೇ ಮಾತಾಡಿಕೊಂಡಿತು. ಭವಿಷ್ಯವೇ ಅವರ ಪ್ರಶ್ನೆಗೆ ಸರಿಯಾದ ಉತ್ತರವನ್ನೀಯಲು ಸಾಧ್ಯವಾಯಿತು. ಮಹಾಪುರುಷನ ಆಗಮನಕ್ಕೆ ವಿಶ್ವವೇ ಮಡಿಯುಟ್ಟು ಮಂತ್ರ ನುಡಿದು ನಿಂದಿತು. ಆಕಾಶದಲ್ಲಿ ಸಹಸ್ರದಲ ಮಲ್ಲಿಗೆ ಅರಳಿತು. ಭೂಮಿ ಜೀವಂತ ಪರಂಜ್ಯೋತಿಯಾಯಿತು! ನೆಲಬಾನು ಒಕ್ಕೊರಲಿನಿಂದ ಹಾಡತೊಡಗಿದವು—

ಓಹೋ ಬಾರೈ ಹೊಸ ಯುಗ ತಾರೈ
ತಾರೈ ತಾರೈ ಭರ ಭರ ಬಾರೈ
ಜೀವದ ಜಂಜಡ ಕೇರುತ ಬಾರೈ
ಮೋಹದ ಮಾಯೆಯ ತೊರೆಯುತ ಬಾರೈ
ಕತ್ತಲೆ ಕೂಟವ ಕೇಳುತ ಬಾರೈ
ಭೋಗದ ಕಾಮಿನಿ ತುಳಿಯುತ ಬಾರೈ
ಕಾಮದ ಕೇಶಿಣಿ ಕಿತ್ತುತ ಬಾರೈ
ಓಹೋ ಬಾರೈ ಬಾರೈ ಶಂಕರ !
ವಿಶ್ವವೆ ನಿನ್ನನೆ ಕೂಗಿಹುದು
ಬೇಗನೆ ಬಾರೈ ಮೊಗವನು ತೋರೈ
ಲೋಕವೇ ನಿನ್ನನೆ ಕರೆದಿಹುದು.

# ಚಕ್ಕಡಿ ಹಳ್ಳಿಕ್ಕೆ ಉರುಳಿತು !

ಗುರುಮಹಾಂತಸ್ವಾಮಿಗಳಿಗೆ ತಮ್ಮ ಅಂತ್ಯಕಾಲದ.... ಮುನ್ಸೂಚನೆ ತಿಳಿದಿತ್ತೆಂದು ಕಾಣುತ್ತದೆ. ಯಾಕೆಂದರೆ ಅವರು ಇಪ್ಪತ್ತು ಜನ ಶಿಷ್ಯರಲ್ಲಿ ಪ್ರಬುದ್ಧರಾದ ಮದ್ದಾನೇಶ್ವರರಿಗೆ ಪೀಠದ ಅಧಿಕಾರವನ್ನು ನಿರ್ವಹಿಸಿದ್ದರು. ಮದ್ದಾನೇಶ್ವರರು ಪೀಠದ ಪರಮ ಶಿಷ್ಯರಾದುದರಿಂದ, ಗುರುಮಹಾಂತ ಸ್ವಾಮಿಗಳು ಲಿಂಗೈಕ್ಯರಾದ ನಂತರ ಚಿತ್ತರಗಿಯ ಶೂನ್ಯಸಿಂಹಾಸನವನ್ನು ವೈರಾಗ್ಯದ ನಿಮಿತ್ತ ಆರೋಹಣ ಮಾಡಲಿಲ್ಲ. ಅಧಿಕಾರ ಮಾತ್ರ ಗುರುಗಳ ಅಪ್ಪಣೆಯ ಮೇರೆಗೆ ಸ್ವೀಕರಿಸಿದರು. ಅವರಿಗೆ ತಮಗಿಂತ ಪೀಠದ ಯಶದಲ್ಲಿ ಆಸ್ಥೆ ಅಧಿಕ. ಆದ್ದರಿಂದ ಶ್ರೇಷ್ಠ ಜಂಗಮ ಪುಂಗವನನ್ನು ಹುಡುಕಲು ನಾಲ್ಕು ವರ್ಷ ಕಳೆದರು. ಕೊನೆಗೂ ವ್ಯರ್ಥವಾಯಿತು.

ಮದ್ದಾನೇಶ್ವರರಲ್ಲಿ ನಿಷ್ಠೆಯುಳ್ಳ ಕೆಲವು ಭಕ್ತರು ಅವರಿಗೆ— "ಸ್ವಾಮಿಗಳೇ, ನೀವೇ ಪೀಠದ ಅಧಿಕಾರದಲ್ಲಿರುವಿರಿ. ಅಂದಮೇಲೆ ಪಟ್ಟವನ್ನೂ ಧರಿಸಿ ಸಿಂಹಾಸನಾರೋಹಣವನ್ನು ಮಾಡಿಬಿಡಿರಿ" ಎಂದರು. ಅವರಿಗೆ ಕೊಟ್ಟ ಮದ್ದಾನೇಶ್ವರರ ಉತ್ತರ ಎಂದಿಗೂ ಮರೆಯುವಂತಿಲ್ಲ—

"ಇದು ತಪಸ್ವಿಗಳು ಮೆರೆದ ಸ್ಥಳ. ಇಂಥ ಪೀಠಕ್ಕೆ ನಾನೇ ಅಧಿಪತಿ ಯಾದರೆ ಹೂಮಾರಿದ ಅಂಗಡಿಯಲ್ಲಿ ಹುಲ್ಲುಮಾರಿದಂತಾಗುವದಿಲ್ಲವೇ ? "

ಆಯಿತು, ಒಂದೇ ಉತ್ತರ ಸಾಕಾಯ್ತು. ಮತ್ತೆ ಸಮಸ್ಯೆ ಸಮಸ್ಯೆ ಯಾಗಿ ಉಳಿಯಿತು. ಆದರೆ ದೈವಲೀಲೆಗೆ ಇದು ಸಮಸ್ಯೆಯಾಗಿರಲಿಲ್ಲ. ಅದರ ಉದ್ದೇಶವೇ ಆಗಿತ್ತು. ಕಾರಣ ಗುರುಮಹಾಂತ ಸ್ವಾಮಿಗಳು ಲಿಂಗವಾದ ಮೇಲೆ ಮಹಾತ್ಮರೊಬ್ಬರು ಪೀಠಕ್ಕೆ ಅವತರಿಸಬೇಕಾಗಿತ್ತೋ ಏನೋ ! ಅವರು ಬರುವ ವರೆಗಿನ ಕಾಲಾವಧಿಯನ್ನು ತುಂಬಲು ದೈವವೇ ಜಾಣ್ಮೆ ಯಿಂದ ಮದ್ದಾನೇಶ್ವರರನ್ನು ಇರಿಸಿತು !! ಇತಿಹಾಸ ಗರ್ಭದಲ್ಲಿ ಹುದುಗಿ ಹೋದ ಈ ಅದ್ಭುತ ದೈವರಹಸ್ಯವನ್ನು....ಯಾರು ತಾನೇ ಊಹಿಸಬಲ್ಲರು?

ಶ್ರೀಮಂತ ರಾಮಪ್ಪ ದೇಸಾಯಿಯವರು ಅಮರಾವತಿ ಸಂಸ್ಥಾನದ ಅಧಿಪತಿಗಳು, ಪೀಠದ ಪರಮ ಭಕ್ತರು, ಧರ್ಮಭೀರುಗಳು, ಪೀಠಾಚಾರ್ಯ ನೊಬ್ಬನನ್ನು ಆಯ್ಕೆಮಾಡುವಲ್ಲಿ ಇವರು ಪರಮ ಪರಿಶ್ರಮಪಟ್ಟರು.

ರಾಮಪ್ಪ ದೇಸಾಯಿಯವರು ಹೊಸಪಟುವನ್ನು ಹುಡುಕುವಲ್ಲಿ ಒಂದು ಭಾರೀ ಜಾಣತನವನ್ನು ತೋರಿಬಿಟ್ಟರು. ತಮ್ಮ ದೇಸಗತಿಯ ರಾಜ್ಯಭಾರ ದಲ್ಲಿ ಅನೇಕ ಮಠಮಾನ್ಯಗಳಿಗೆ, ಆಶ್ರಮಗಳಿಗೆ, ಅಳಿದುಳಿದ ಗುರುಕುಲಗಳಿಗೆ ಭೆಟ್ಟಿ ಇತ್ತರು. ಹತ್ತೆಂಟು ಪಟುಗಳನ್ನು ಚಿತ್ತರಗಿ ಪೀಠದ ಸಿಂಹಾಸನ ಏರಲು ಕೇಳಿಕೊಂಡರು. ತತ್‌ಕ್ಷಣವೇ ಅವರೆಲ್ಲ 'ಆಗಲಿ' ಎಂದು ಒಪ್ಪಿ ಕೊಂಡರು. ಅದೇ ಅವರು ರಾಮಪ್ಪ ದೇಸಾಯಿಯವರ ಪರೀಕ್ಷೆಯಲ್ಲಿ ನಾಪಾ ಸಾಗಲು ಕಾರಣ! 'ನಾನು ಒಲ್ಲೆ' ಎಂದು ಯಾರಾದರೂ ಅಂದಿದ್ದರೆ ಅವರು ದೇಸಾಯರ ಪರೀಕ್ಷೆಯಲ್ಲಿ ಪಾಸಾಗಿಬಿಡುತ್ತಿದ್ದರು. ಆದರೆ ಆ ಪಟುಗಳಿಗೆ ಶ್ರೀಮಂತಿಕೆಯ ಮಠವೊಂದೇ ಕಣ್ಣಿಗೆ ಕಾಣುತ್ತಿತ್ತು. ಒಮ್ಮೆಲೆ 'ಆಗಲಿ' ಎಂದು ಒಪ್ಪಿಕೊಂಡುಬಿಡುತ್ತಿದ್ದರು.

ದೇಸಾಯರ ಈ ಅತ್ಯಂತ ಸುಲಭವಾದ, ಆದರೆ ಯಾರಿಗೂ ಪಾಸಾ ಗಲು ಅಸಾಧ್ಯವಾದ ಪರೀಕ್ಷೆಯಲ್ಲಿ ತೇರ್ಗಡೆಯಾಗುವವರು ಸಿಗುವ ಆಸೆ ದೂರಾಯಿತು. ದೇಸಾಯರೇ ತಮ್ಮ ಪರೀಕ್ಷೆಗೆ ತಾವೇ ಕಂಗೆಟ್ಟರು.

ಹೀಗಿರುವಾಗ ಆಕಸ್ಮಿಕ ಘಟನೆಯೊಂದು ನಡೆಯಿತು. ಒಂದು ಸಲ ದೇಸಾಯರು ಪುಂಗನೂರಿನಲ್ಲಿರುವ ತಮ್ಮ ಬೀಗರ ಮನೆಗೆ ಹೋದರು. ಆದರೆ ತಾವು ಹೋದ ಕಾರ್ಯವೇ ಬೇರೆ ಎಂದು ಅವರಿಗೆ ಹೊಳೆಯಲಿಲ್ಲ. ಮರಳಿ ಬರುವಾಗ ಆಕಸ್ಮಿಕವಾಗಿ ಬಳ್ಳಾರಿಯಲ್ಲಿ ತಂಗಿದರು. ಶ್ರೀಮಂತರಿಗೆ ಶ್ರೀಮಂತರ ಪರಿಚಯವಿರದೇ ಇದ್ದೀತೆ? ಅದು ಸಕ್ಕರಿ ಕರಡೆಪ್ಪನವರೆಂದರೆ ಇನ್ನೂ ವಿಶೇಷ ಆತ್ಮೀಯತೆ. ಅವರ ಅತಿಥಿ ಸತ್ಕಾರದಲ್ಲಿ ಒಂದು ದಿನ ತಂಗಿದರು. ಆ ರಾತ್ರಿ ಇಬ್ಬರದೂ ಸುಖಭೋಜನವಾಯಿತು. ವೀಳ್ಯೆ ಮೆಲ್ಲುತ್ತ ಜಗುಲಿಯ ಮೇಲೆ ಆ ಮಾತು ಈ ಮಾತು ಆಡುತ್ತ ಕುಳಿತರು. ಆಗ ಕಗ್ಗತ್ತಲೆಯಲ್ಲಿ ಒಮ್ಮೆಲೇ ಥಕ್ಕನೇ ಬೆಳಕು ಬಿದ್ದಂತೆ ಮಹಾಜಂಗಮ ಪುಂಗವನೊಬ್ಬ ಇವರ ಪಕ್ಕದಲ್ಲೇ ಸುಳಿದು ಮೇಲಿನ ಮಜಲಿಗೆ ಮೌನವಾಗಿ ನಡೆದುಹೋದ. ದೇಸಾಯರ ಕೈಗಳು ತಮಗರಿಯದಂತೆ ಮಹಾವಂದನೆ ಯನ್ನು ಸಲ್ಲಿಸಿದವು. ಆ ದಿವ್ಯತೇಜ, ಶ್ವೇತಪ್ರಕಾಶಿತ ಕಫನಿ, ಮಿಂಚಿನ ಭಸ್ಮ, ರುದ್ರಾಕ್ಷಿ ಮಾಲೆ, ಲಿಂಗವಸ್ತ್ರ, ಸಂನ್ಯಾಸ ಜೀವನದ ಗಡ್ಡ-ಮೀಸೆ-ಜಟೆ ಎಲ್ಲವೂ ಅಮರಾವತಿ ದೇಸಾಯರಿಗೆ ಅಪೂರ್ವಪ್ರಭಾವವನ್ನು ಬೀರಿದವು.

ಕುತೂಹಲದಿಂದ ಕೇಳಿದರು–

'ಕರಡೆಪ್ಪನವರೆ ಯಾರಿವರು?'

ಕರಡೆಪ್ಪನವರು ತುಸು ಗಂಭೀರವಾಗಿಯೇ ಹೇಳಿದರು–

'ಇವರು ನಮ್ಮ ಮನೆಯ ಭಾಗ್ಯ. ಬಳ್ಳಾರಿಯ ಪುಣ್ಯ.'

'ಹೌದೇ? ಹೆಸರು?'

'ಸಸಿವಾಳದ ಮಳೆಯಪ್ಪಾರ್ಯರು. ಇವರ ಕಥೆಯೇ ವಿಚಿತ್ರ!'

'ಹಾಂ?'

'ಹೌದು. ತಾಯಿ-ತಂದೆಯನ್ನು ಎಂದೋ ತೊರೆದು ಬಂದರು. ಕಲ್ಬೆಟ್ಟದಲ್ಲಿ ಉಗ್ರ ತಪಸ್ಸು ಮಾಡಿದರಂತೆ. ಪಾಪ ಇನ್ನೂ ಚಿಕ್ಕ ವಯಸ್ಸು. ಬಳ್ಳಾರಿಗೆ ಬಂದರು. ನಮಗೆ ಅನ್ನಛತ್ರದಲ್ಲಿ ಪ್ರಸಾದ ಸ್ವೀಕರಿಸಲಿಲ್ಲ. ಭಿಕ್ಷಾನ್ನವನ್ನು ಆಧರಿಸಿದರು. ನಾನೇ ಒಂದು ಸಲ ಇವರನ್ನು ಜಾಣತನದಿಂದ ಇಲ್ಲಿ ಕರೆದುಕೊಂಡು ಬಂದೆ. ಈಗ ಇಲ್ಲಿಯೇ ಅನುಷ್ಠಾನ-ಜಪ-ಪೂಜಾವಿಧಾನ ಗಳನ್ನು ಗೈಯುತ್ತಿದ್ದಾರೆ. ಆದರೆ.......'

'ಆದರೆ? ಆದರೆ ಏನು?'

'ಇವರಲ್ಲಿ ಎಲ್ಲಾ ಇದೆ. ಆದರೆ ಒಂದು ಮಾತ್ರ ಇಲ್ಲ'

'ಹಾಂ?'

'ಹೌದು ದೇಸಾಯರೆ. ಒಂದು ಗುಣದ ಕೊರತೆ ಮಾತ್ರ ಇವರಲ್ಲಿ ಇದ್ದದ್ದು ನನಗೆ ಭಾರೀ ದೊಡ್ಡ ಚಿಂತೆಗೆ ಕಾರಣವಾಗಿದೆ.'

'ಹೌದೆ? ಯಾವುದೆಂದು ಕೇಳಬಹುದೇ?'

'ಕೇಳಿರಿ. ಅದಕ್ಕೇನಂತೆ. ಹೇಳುತ್ತೇನೆ. ಇವರು ತಕ್ಕಷ್ಟು ಓದಿಕೊಂಡ ವರು. ಕಟ್ಟಾ ವೈರಾಗಿಗಳು. ಉಗ್ರ ಅನುಷ್ಠಾನ ಪ್ರಿಯರು. ನಿರ್ಮೋಹಿ ಗಳು. ಆದರೇನು ಮಾಡುವದು? ಎಲ್ಲಾ ವ್ಯರ್ಥ. ಇವರನ್ನು ಯಾವುದಾದ ರೊಂದು ದೊಡ್ಡ ಮಠಕ್ಕೆ ಅಧಿಕಾರಿಗಳನ್ನಾಗಿ ಮಾಡಬೇಕೆಂದು ನನ್ನ ಆಶೆ ಇತ್ತು. ಆದರೆ ಆ ಆಶೆಯನ್ನು ಬೇರಿನಲ್ಲೇ ಕಡಿದೊಗೆದರು. ಅನೇಕ ಮಠ ಮಾನ್ಯದವರು ಒಬ್ಬ ಪಟುವನ್ನು ಕೊಡಲು ನನ್ನನ್ನು ವಿಚಾರಿಸಿದರು. ನಾನು ಇವರಿಗೆ ಅಧಿಕಾರ ಸ್ವೀಕರಿಸಲು ಪರಿಪರಿಯಾಗಿ ಬೇಡಿಕೊಂಡೆ. ಆದರೆ ಅಧಿಕಾರವೆಂದರೆ ಹಾವು ಕಂಡು ಜಿಗಿದಂತೆ ಮಾಡುತ್ತಾರೆ. ಏನು ಮಾಡಲಿ

ದೇಸಾಯರೇ? ನನ್ನ ಪಾಠಶಾಲೆಯಿಂದ ಜಂಗಮಜ್ಯೋತಿಯೊಂದನ್ನು ನಾಡಿನಲ್ಲಿ ಹಚ್ಚಬೇಕೆಂಬ ನನ್ನ ಆಶೆ ವಿಫಲವಾಗುತ್ತಿದೆ. ಏನು ಮಾಡಲಿ?'

ದೇಸಾಯರಿಗೆ ತಾವು ಈ ಲೋಕದಲ್ಲೇ ಇದ್ದಂತೆ ಅನಿಸಲಿಲ್ಲ. ಪರಮಾತ್ಮನ ಸಾಕ್ಷಾತ್ಕಾರ ಪಡೆದ ಭಕ್ತ, ನಿರ್ವಿಕಲ್ಪ ಸಮಾಧಿಯಲ್ಲಿ ನೆಲಸುವಂತೆ ಆಶ್ಚರ್ಯದ ಅಂಬುಧಿಯಲ್ಲಿ ಮುಳುಗಿಹೋದರು. ತಾವು ಅನೇಕ ವರ್ಷಗಳಿಂದ ಹುಡುಕುತ್ತ ಹೊರಟ ಸೂರ್ಯ ಇಲ್ಲೇ ಇವರ ಮನೆಯಲ್ಲೇ ಅಡಗಿಕೊಂಡಿದ್ದಾನೆಂದು ಗೊತ್ತಾಯಿತು. ಇನ್ನು ಬಿಡಬಾರದು. ಬಿಟ್ಟರೆ ಕೆಟ್ಟೆ ಎಂದು ನಿರ್ಣಯಿಸಿ, ತಾವು ಅನೇಕ ದಿನಗಳಿಂದ ಚಿತ್ತರಗಿ ಶೂನ್ಯ ಸಿಂಹಾಸನಕ್ಕಾಗಿ ಸರ್ವಸಂಗ ಪರಿತ್ಯಾಗಿಯಾದ ವೈರಾಗ್ಯದ ವಟುವನ್ನು ಅರಸುತ್ತಿರುವ ವೃತ್ತಾಂತವನ್ನು ಕರಡೆಪ್ಪನವರಿಗೆ ಹೇಳಿದರು. ಏನೇ ಆಗಲಿ ಈ ವಟುವರರನ್ನು ಒಪ್ಪಿಸಿಯೇ ಬಿಡಿರಿ ಎಂದು ಪ್ರೇರೇಪಿಸಿದರು. ಕರಡೆಪ್ಪನವರಿಗೆ ಇದು ಮತ್ತೊಂದು ಕಗ್ಗಂಟು ಆಯಿತು. ಉಕ್ಕಿನ ಅರಮನೆಯನ್ನು ಇಲಿ ಕೊರೆಯಬಲ್ಲದೇ ? ಈ ಕಠೋರ ನಿಷ್ಠೆಯ ವಟುವರರನ್ನು ಮಾತಾಡಿಸುವದೇ ಗಂಡಾಂತರ. ಮುಂದೆ ಫಲಸಿದ್ಧಿ ಅಸಾಧ್ಯ. ಆದರೂ ಶಿವನಿಚ್ಛೆ. ಒಂದು ಸಲ ಪ್ರಯತ್ನಿಸಿ ನೋಡುವೆನೆಂದು ಕರಡೆಪ್ಪನವರು ದೇಸಾಯರ ಮಾತಿಗೆ ಒಪಂಬಟ್ಟರು.

ಅದೇ ಆ ಮರುದಿನದ ಪ್ರಾತಃಕಾಲದ ಘಟನೆ. ನೆನಪಿದೆಯೇ? ಮಳೆಯಪ್ಪಾರ್ಯ ಶಿವಪೂಜೆಯನ್ನು ಪೂರ್ಣಗೊಳಿಸಿ ಕುಳಿತಾಗ ನಡೆದ ಘಟನೆ. ಆಗ ಕರಡೆಪ್ಪನವರು ಆತುರದಿಂದ, ಆವೇಶದಿಂದ, ಆಳವಾದ ದುಡುಕಿನಿಂದ ಅಲ್ಲಿಗೆ ಬಂದರು. ಮೊಗದ ಮೇಲೆ ಕಳವಳ ಸೆರಗು ಚಲ್ಲಿದೆ. ಭಯ ಕೈಯಾಡಿಸಿದೆ. ಮೆಲ್ಲನೇ ಮಳೆಯಪ್ಪಾರ್ಯನಿಗೆ ಮಣಿದು, ತಾವು ಬಂದ ವೃತ್ತಾಂತವನ್ನು ಬಿಚ್ಚಲು ಮೊದಲು ಮಾಡಿದರು–

'ಮಳೆಯಪ್ಪಾರ್ಯರೇ........'

'ಬನ್ನಿರಿ ಕರಡೆಪ್ಪನವರೇ. ಕೂತುಕೊಳ್ಳಿರಿ.'

'ಪೂಜೆಯಾಯಿತೇ?'

'ಆಯಿತು. ತಮ್ಮದು?'

'ಆಯಿತು ಬುದ್ಧಿ'

ಸ್ವಲ್ಪ ಮೌನ. ನಂತರ ಮಳೆಯಪ್ಪಾರ್ಯನೇ ಮಾತಾಡಿಸಿದ—

'ನಿನ್ನೆ ರಾತ್ರಿ ಯಾರೋ ತಮ್ಮೊಂದಿಗೆ........?'

'ಹೌದು. ಹೌದು. ಅವರೇ ಅಮರಾವತಿಯ ಶ್ರೀಯುತ ರಾಮಪ್ಪ ದೇಸಾಯರು. ಅದಕ್ಕೆಂತಲೇ ನಾನು........'

'ಏನು?'

'........ಇಲ್ಲಿಗೆ ಬಂದದ್ದು.'

'ಹೌದೆ? ಏನು ಸಮಾಚಾರ ಕರಡೆಪ್ಪನವರೇ?'

'ಏನೂ ಇಲ್ಲ ಬುದ್ಧಿ. ಆದರೆ ನೀವು ನಮ್ಮನ್ನು ನಿರಾಶೆಪಡಿಸುವ ದಿಲ್ಲವೆಂದರೆ ಮಾತ್ರ ಹೇಳುತ್ತೇನೆ.'

'ನಿಮಗೆ ನಿರಾಶೆಯೇ? ಛೇ ಅದು ಹೇಗೆ?'

'ಹೌದು ದಯವಿಟ್ಟು ನನ್ನ ಮಾತಿಗೆ ಒಪ್ಪಿರಿ.'

ಮಳೆಯಪ್ಪಾರ್ಯ ಸ್ವಲ್ಪ ತಡೆದು, ಏನೋ ಆತ್ಮಾವಲೋಕನ ಮಾಡಿಕೊಂಡು ಕೇಳಿದ....

'ಅದು ಏನೆಂಬುದನ್ನು ಹೇಳಿಯಾದರೂ ಹೇಳಬಾರದೇ?'

'ಹೇಳುತ್ತೇನೆ. ಮೊದಲು ಒಪ್ಪಿಗೆ ಕೊಡಿರಿ'

ಈಗ ಮಳೆಯಪ್ಪ ಗಂಭೀರನಾದ. ಆತನ ಮಂದಹಾಸ ದೂರ ಓಡಿತು. ಬಿಗುವಿನಲ್ಲೇ ಉತ್ತರಿಸಿದ.

'ಕರಡೆಪ್ಪನವರೇ ಕ್ಷಮಿಸಿರಿ. ಮೊದಲೇ ಒಪ್ಪಿಗೆ ಕೊಡುವದು ಸಾಧ್ಯ ವಿಲ್ಲ. ನಾನು ಸನ್ಯಾಸಿ. ಮಾನವ ಸಂಕಲ್ಪಕ್ಕೆ ಬಲಿಬೀಳಬಾರದು. ಮೊದಲು ಹೇಳಿ. ಆಮೇಲೆ ನನ್ನ ಸನ್ಯಾಸಧರ್ಮಕ್ಕೆ ಒಪ್ಪುವಂತಿದ್ದರೆ ಪ್ರಾಣವನ್ನಾ ದರೂ ಅರ್ಪಿಸಲು ಸಿದ್ಧ.'

ಆಯಿತು ಮಾತಿನ ಚಕಮಕಿಯಲ್ಲಿ ಕರಡೆಪ್ಪನವರು ಮೊದಲನೇ ಸಲವೇ ನಿರುತ್ಸಾಹಭರಿತರಾದರು. ಆದರೂ ಮೂಗಿಗೆ ಮಣ್ಣು ಹತ್ತಿದರೂ ಪ್ರಯತ್ನ ವನ್ನು ನಿಲ್ಲಿಸಲಿಲ್ಲ. ಮತ್ತೆ ಮುಂದುವರೆದು—

'ಹಾಗೇನು ಇಲ್ಲ–ಮಳೆಯಪ್ಪಾರ್ಯರೇ, ನಿಮ್ಮ ಸನ್ಯಾಸ ಧರ್ಮಕ್ಕೆ ಒಪ್ಪುವಂಥದು. ಮೊದಲು ನಿರ್ಭಯವಾಗಿ ಒಪ್ಪಿಬಿಡಿರಿ'

ಮಳೆಯಪ್ಪಾರ್ಯ ಮತ್ತೂ ಗಂಭೀರನಾದ. ಉತ್ತರ ಅವನ ಬಾಯಿಂದ ಹೊರಬೀಳಲು ತಡವಾಗಲಿಲ್ಲ–

'ದಯವಿಟ್ಟು ಒತ್ತಾಯ ಮಾಡಬೇಡಿರಿ ಶರಣರೆ. ಮೊದಲು ಆರುಹಿರಿ. ಆ ಮೇಲೆ.......'

ಕರಡೆಪ್ಪನವರಲ್ಲಿ ಮೊದಲಿನ ಉತ್ಸಾಹ ಮೂರು-ಪಾಲಿಗೆ ಇಳಿಯಿತು. ಗಂಟಲು ಒಣಗಿತು. ನಿರುಪಾಯರಾಗಿ ಉಗುಳುನುಂಗುತ್ತ ಹೇಳಿದರು —

'ಮಳೆಯಪ್ಪಾರ್ಯರೇ ನೀವು ತುಂಬ ಕಟ್ಟಿಗೆ ನಿಂತಿರಿ. ನಾನೇ ಸೋಲುತ್ತೇನೆ. ಅಲ್ಲಮ ಪ್ರಭುಗಳಿಂದ ಸ್ಥಾಪಿತವಾದ ಚಿತ್ತರಗಿ ಪೀಠ ಬಹು ದೊಡ್ಡ ಸ್ಥಾನ. ಅದರ ಅಂಗವಾಗಿ ಐವತ್ತಾರು ಮಠಗಳಿವೆ. ಸಾವಿರಾರು ಭೂಮಿಗಳಿವೆ. ಅಸಂಖ್ಯ ಭಕ್ತರಿದ್ದಾರೆ. ಆದರೆ ಗುರುಮಹಾಂತ ಸ್ವಾಮಿಗಳು ಲಿಂಗೈಕ್ಯರಾದುದರಿಂದ ಆ ಪೀಠ ಬರಿದಾಗಿದೆ. ಅಮರಾವತಿಯ ರಾಮಪ್ಪ ದೇಸಾಯರು ಆ ಭಾಗದ ದೊರೆಗಳು. ಪೀಠದ ಪರಮ ಭಕ್ತರು. ಅದಕ್ಕಾಗಿ ಯೋಗ್ಯವಟುವರನನ್ನು ಹುಡುಕುತ್ತಾ ಬಂದಿದ್ದಾರೆ. ಅನೇಕ ಸಲ ನೀವು ನನ್ನನ್ನು ನಿರಾಶೆ ಮಾಡಿದ್ದೀರಿ. ದಯವಿಟ್ಟು ಈ ಸಲ ಮಾತ್ರ........'

'....ನಿರಾಶೆ ಮಾಡಬಾರದೆಂದು ನಿಮ್ಮಿಚ್ಛೆಯೋ? ಆದರೆ ನಾನೇನು ಮಾಡಲಿ ಕರಡೆಪ್ಪನವರೇ? ನಿಮಗೆ ನಿರಾಶೆ ಮಾಡಬಾರದೆಂದು ನನ್ನ ಜೀವನ ವನ್ನೇ ಬಲಿಕೊಡಲೆ?'

ಕರಡೆಪ್ಪನವರ ಆಶಾ ಬಳ್ಳಿ ಕತ್ತರಿಸಿ ಉರುಳಿತು! ಮಳೆಯಪ್ಪಾರ್ಯನ ವೈರಾಗ್ಯದ ಕೊಡಲಿ ಬೇರಿಗೆ ತಾಗಿತ್ತು!!

ಕೆಲಕಾಲ ಕಳೆಯಿತು. ಇಬ್ಬರೂ ದೀರ್ಘಮೌನವನ್ನು ಆಚರಿಸಿದರು. ವೀರರಿಬ್ಬರು ಗದಾಯುದ್ಧವನ್ನು ಆಡುವದಕ್ಕಿಂತ ಮುಂಚೆ. ಶಾಂತವಾಗಿ ತಮ್ಮನ್ನು ತಾವೇ ಮನದಲ್ಲಿ ಬಲಪಡಿಸಿಕೊಳ್ಳುವಂತೆ ಕಾಲ ಕಳೆದರು. ಮತ್ತೆ ಮಾತಿನ ಗದಾಪ್ರಹಾರ ಏಟಿಗೆ ಏಟಾಗಿ, ಸಂದಿಗೆ ಸಂದಾಗಿ ನಾಜೂಕಿನಿಂದ ಚುರುಕಿನಿಂದ ನಡೆಯಿತು. ಕರಡೆಪ್ಪನವರೇ ಮಾತು ಎತ್ತಿದರು.

'ಮಳೆಯಪ್ಪಾರ್ಯರೇ; ನಿಮ್ಮ ಹಠ ನನಗೆ ಸರಿಯಾಗಿ ಕಾಣುವದಿಲ್ಲ. ಇದು ಸನ್ಯಾಸಿಗೆ ಯೋಗ್ಯವೂ ಅಲ್ಲ. ಸನ್ಯಾಸಿಯ ಕರ್ತವ್ಯವಾದರೂ ನಿಮಗೆ ಗೊತ್ತೆ?'

'ದಯವಿಟ್ಟು ಹೇಳಿರಿ ಕರಡೆಪ್ಪನವರೇ.'

ಉತ್ತರದಲ್ಲಿ ನಿರ್ಧಾರತೆ ತುಂಬಿತ್ತು-

'ಸನ್ಯಾಸಿ ಸಂಸಾರದ ಸಂಗವನ್ನು ತೊರೆದರೂ ಲೋಕದ ಸೇವಕ. ಆತನು ತನ್ನ ಮೋಕ್ಷವನ್ನು ಮಾತ್ರ ತಾನು ಗಳಿಸಿಕೊಂಡರೆ ಅದು ಒಂದು ಸ್ವಾರ್ಥವಲ್ಲವೆ?'

'ಅಲ್ಲವೆಂದು ಯಾರು ಅಂದರು ಯಜಮಾನರೆ?'

'ಅಂದಮೇಲೆ? ನೀವು ನಿಮ್ಮ ಮೋಕ್ಷವನ್ನು ಮಾತ್ರ ಬಯಸುತ್ತಿದ್ದೀರಿ. ಲೋಕದ ಚಿಂತೆ ನಿಮಗಿಲ್ಲವೆ? ಉತ್ತರಿಸಿರಿ.'

ಮಳೆಯಪ್ಪ ಮಂಜುಮಳೆಯ ಶೀತಲ ಹನಿಗಳಂತೆ ಶಾಂತವಾಗಿ ಉತ್ತರಿಸಿದ—

'ಸಾವುಕಾರರೆ, ನಿಮ್ಮ ಮಾತು ಸರಿ. ಒಪ್ಪುತ್ತೇನೆ. ಆದರೆ ಲೋಕವನ್ನು ಉದ್ಧಾರಮಾಡುವ ಸನ್ಯಾಸಿ ಯಾವುದಾದರೂ ಒಂದು ಪೀಠದ ಸಿಂಹಾಸನವನ್ನೇ ಏರಬೇಕೆ? ಪೀಠದಿಂದ ಹೊರಗುಳಿದು ಲೋಕೋದ್ಧಾರ ಸಾಧ್ಯವಿಲ್ಲವೆ? ನೀವು ಉತ್ತರಿಸಿರಿ.'

ಕರಡೆಪ್ಪನವರು ಕಂಠದಲ್ಲಿ ಸ್ವಲ್ಪ ಕೆಳಗಿಳಿದರು. ಆದರೂ ಗಾಂಭೀರ್ಯ ಸಡಲಿಸಲಿಲ್ಲ. ಹೇಳಿದರು—

'ಸಾಧ್ಯವಿದೆ. ಏಕಿಲ್ಲ. ಆದರೆ ಈಗ ಬಂದಿರುವ ಪ್ರಸ್ತುತ ಪ್ರಶ್ನೆಯೇ ಬೇರೆ. ನಿಮ್ಮಂತೆ ಎಲ್ಲ ಸನ್ಯಾಸಿಗಳೂ ಪೀಠವೇ ಬೇಡವೆಂದು ಕುಳಿತರೆ ಪೀಠಗಳೇನಾಗಬೇಕು? ಅವು ಹಾಳು ಸುರಿಯಬೇಕೆ?'

'ಅವೇಕೆ ಹಾಳು ಸುರಿಯಬೇಕು? ಪೀಠವನ್ನೇರಿ ಲೋಕೋದ್ಧಾರ ಮಾಡಬಯಸುವ ಬಯಕೆಯುಳ್ಳ ಉತ್ಸಾಹಿ ವಟುಗಳಿಗೇನು ಕೊರತೆಇದೆ?'

ಈ ಪ್ರಶ್ನೆಗೆ ಕರಡೆಪ್ಪನವರು ಸ್ವಲ್ಪ ನಕ್ಕು ಹೇಳಿದರು—

'ಮಳೆಯಪ್ಪಾರ್ಯರೇ, ಈ ನಾಡಿನಲ್ಲಿ ಪೀಠವನ್ನು ಏರಬೇಕೆಂಬ ಆಶೆಯುಳ್ಳ ಜನರಿಗೆ ಎಂದಿಗೂ ಕೊರತೆ ಇಲ್ಲ. ಆದರೆ ಅದಕ್ಕೆ ಅರ್ಹತೆ ಇದ್ದವರ ಕೊರತೆಯಿದೆ. ದುಡ್ಡಿಗಾಗಿ–ಅಧಿಕಾರಕ್ಕಾಗಿ–ಭೋಗಕ್ಕಾಗಿ ಯೋಗ ಪೀಠಗಳನ್ನು ಅನೇಕರು ಏರುತ್ತಿದ್ದಾರೆ: ಧರ್ಮಪೀಠಗಳನ್ನು ಸ್ವಾರ್ಥಿಗಳು ತಮ್ಮ ವಜ್ರಮುಷ್ಟಿಯಲ್ಲಿ ಹಿಡಿಯುತ್ತಿದ್ದಾರೆ. ಅವು ರಾಜಕೀಯ ಘುದ್ದೆಗಳಾಗಿವೆ,

ಅವುಗಳಿಗಾಗಿಯೂ ಸ್ಪರ್ಧೆ ನಡೆಯುತ್ತಿದೆ. ಇಂದು ಯೋಗಕ್ಕಾಗಿ ಸ್ವಾಮಿಗಳಾಗುತ್ತಿಲ್ಲ; ಭೋಗಕ್ಕಾಗಿ ಸ್ವಾಮಿಗಳಾಗುತ್ತಿದ್ದಾರೆ. ಶ್ರೀಮಂತ ಭಕ್ತರು, ಶ್ರೀಮಂತ ಮಠ, ಶ್ರೀಮಂತ ಭೋಗಗಳಿಗಾಗಿ ಅನೇಕರು ಸಾಮಿಗಳಾಗುತ್ತಿದ್ದಾರೆ. ಸ್ವಾಮಿಗಳೆಲ್ಲರೂ ಸ್ವಾಮಿಗಳಲ್ಲ. ಸ್ವಾಮಿತ್ವವುಳ್ಳವರು ಸ್ವಾಮಿಗಳು. ಬೆಕ್ಕು ಮಠದ ಸಿಂಹಾಸನ ಏರಿದರೆ ಶಿವಯೋಗಿಯಾದೀತೆ? ಎಲ್ಲಿ ಪಾಪ ಸುಳಿಯುತ್ತದೆಯೋ ಅಲ್ಲಿ ಪುಣ್ಯ ಓಡಿಹೋಗುತ್ತದೆ. ಎಲ್ಲಿ ಭೋಗವು ಬಲವಾಗುತ್ತದೆಯೋ ಅಲ್ಲಿ ಯೋಗ–ವಿಯೋಗವಾಗುತ್ತದೆ. ಇದು ಕನ್ನಡ ನಾಡಿನ ಮಠಗಳಿಗೆ ಅಂಟಿಕೊಂಡ ಕುಷ್ಠ ರೋಗ. ಈ ಮಾತು ಸುಳ್ಳೇ?'

'ಹೌದು ಕರಡೆಪ್ಪನವರೇ ಹೌದು. ನೀವು ಈ ಕ್ಷೇತ್ರದಲ್ಲಿ ತುಂಬ ಅನುಭವಿಗಳು, ನುರಿತವರು. ನಾನು ಅನನುಭವಿ, ಅಲ್ಪಜ್ಞ. ನಿಮಗಿಂತ ಬಲ್ಲಿದ ನಾನಲ್ಲ.'

'ಆ ಮೇಲೆ ನಿಮ್ಮಂಥ ವೀರವ್ರತಿಗಳು ಪೀಠಾಚಾರ್ಯರಾಗಿ ಧರ್ಮ-ಕ್ಷೇತ್ರಗಳನ್ನು ಕಾಪಾಡಿ ಸ್ವೈರ ರಾಕ್ಷಸಿಯ ಕುರುಕ್ಷೇತ್ರವನ್ನು ಉಚ್ಚಾಟನೆ ಮಾಡಲು ಹಿನ್ನೆಗೆದರೆ ಮುಂದೆ ಗತಿ-ಏನು ಬಲ್ಲಿರಾ? ಪರಮ ಪಾವನ ಮೂರ್ತಿಗಳು ಸ್ಥಾಪಿಸಿದ, ಯೋಗ ಸಾಧನೆಯ ಅಗ್ನಿರಕ್ತವನ್ನು ಎರೆದು ಕಟ್ಟಿದ, ಪುಣ್ಯಪೀಠಗಳು ಭೋಗಾಸಕ್ತರ ಕೈಗೊಂಬೆಗಳಾಗುತ್ತವೆ. ಆಗ ಎಲ್ಲಿ ಏನೂ ಆಗಲಾರದೋ ಅಲ್ಲಿ ಅದೆಲ್ಲ ಘಟಿಸುತ್ತದೆ. ಏನು ಕೇಳಬಾರದೋ ಅದೆಲ್ಲ ಕಣ್ಣಾರೆ ಕಾಣುತ್ತದೆ. ಪೀಠಗಳು ಮನೆಗಳಾಗುತ್ತವೆ.'

ಮಳೆಯಪ್ಪಾರ್ಯ ಗಾಂಭೀರ್ಯತೆಯಿಂದ ವ್ಯಾಕುಲತೆಗೆ ಇಳಿದ. ನಾಡಿನ ದುರ್ದೆಶೆಗೆ ಮಮ್ಮಲನೇ ಮರುಗಿಹೋದ. ನಿಟ್ಟುಸಿರೊಂದನ್ನು ಗರೆದು ಹೇಳಿದ:

'ನಿಜ. ಕರಡೆಪ್ಪನವರೇ ನಿಜ. ಇದಕ್ಕೆ ಪರಿಹಾರವೇನು?'

'ಪರಿಹಾರ....? ಇದೆ. ಆದರೆ ಅದು ನಮ್ಮಂಥ ಸಂಸಾರಿಗರ ಕೈಯಲ್ಲಿಲ್ಲ. ನಿಮ್ಮಂಥ ವಿರಕ್ತರ ಕೈಯಲ್ಲಿದೆ. ನೀವೇ ಉತ್ತರಿಸಿರಿ ಏನು ಮಾಡಬೇಕೆಂದು?'

ಮಳೆಯಪ್ಪಾರ್ಯ ಚಿರಶಾಂತನಾಗಿ ಮೆಲ್ಲನೇ ನುಡಿದ–

'ಕರಡೆಪ್ಪನವರೇ, ನೀವು ನನ್ನನ್ನು ತಪ್ಪಾಗಿ ಭಾವಿಸಿದ್ದೀರಿ. ನಾನು

ವಿರಕ್ತಾಶ್ರಮವನ್ನೇನೋ ಸ್ವೀಕರಿಸಿದ್ದೇನೆ; ಆದರೆ ಇನ್ನೂ ವಿರಕ್ತನಲ್ಲ. ನಾನಿನ್ನೂ ಮಿಡಿಗಾಯಿ, ಹಣ್ಣಾಗಿಲ್ಲ.'

'ಇರಬಹುದು. ಹಣ್ಣಾಗದಿದ್ದರೇನಂತೆ? ಹಣ್ಣು ಮೊದಲು ಮಿಡಿ ಇದ್ದೇ ಫಲವಾಗುತ್ತದೆ. ಹುಟ್ಟಿದಾಗಲೇ ಹಣ್ಣಾಗುವದಿಲ್ಲ.'

'ಹೌದು '

'ಅಂದಮೇಲೆ ಹಣ್ಣಾಗುವ ಸಾಮರ್ಥ್ಯ ಮಿಡಿಯಾಗಿರುವ ನಿಮ್ಮಲ್ಲಿದೆ.'

'ಇದ್ದರೇ?'

'ನಿರಂಜನ ಪೀಠದ ಅಧಿಕಾರ ಸ್ವೀಕರಿಸಿರಿ.'

'ಹುಃ ಮತ್ತೆ ಅದೇ ಮಾತು. ಕರಡೆಪ್ಪನವರೇ....'

'ಹುಂ, ಹೇಳಿರಿ.'

'ಮಿಡಿ ಹಣ್ಣಾದಮೇಲೆ ಸೇವನೆಗೆ ಯೋಗ್ಯವಲ್ಲವೇ? ಮಿಡಿ ಇದ್ದಾಗಲೇ ಕೊಯ್ಯಲು ಬಯಸುವಿರಾ?'

'ಯಾರು ಕೊಯ್ಯಲು ಬಂದರು?'

'ನೀವು.'

'ಸರಿ. ಗಾಲಿ ಹಳ್ಳಕ್ಕೆ ಬಿದ್ದಿತು. ಇನ್ನು ಚಕ್ಕಡಿ ಉರುಳುವದೇನು ಮಹಾ?'

'ಯಾವ ಚಕ್ಕಡಿ?'

'ನಾನೇ.'

ಮಳೆಯಪ್ಪಾರ್ಯನ ತುಟಿಯ ಮೇಲೆ ಎಳೆ ನಗೆ ಮಿಂಚಿ ಮಾಯವಾಯಿತು. ಮತ್ತೆ ಗಂಭೀರವಾಗಿ ಹೇಳಿದ–

'ಕರಡೆಪ್ಪನವರೇ... '

'ಹುಂ.'

'ನಿಮಗೆ ನಿಮ್ಮ ಹೊಟ್ಟೆಯ ಮಗನಾಗಿ ಬೇಡಿಕೊಳ್ಳುತ್ತೇನೆ.'

'ಏನು?'

'ದಯವಿಟ್ಟು ಈ ಬಂಗಾರ–ಸಿಂಗಾರಗಳ, ಅಧಿಕಾರ–ಅಪ್ಪಟಗಳ ಸುಪ್ಪಾತ್ತಿಗೆಗಳಿಗೆ ನನ್ನನ್ನು ಕಳಿಸಬೇಡಿರಿ. ನಾನು ಅರಣ್ಯದಲ್ಲಿ ತೊಪ್ಪಲನ್ನಾದರೂ ತಿನ್ನಬಲ್ಲೆ. ಆದರೆ ಈ ಅಧಿಕಾರ-ಪೀಠ-ಮೆರವಣಿಗೆ-ಜಯಜಯಕಾರ

ಗಳಿಗೆ ಬಲಿ ಬಿದ್ದು ಬಾಳಲಾರೆ. ಅದು ನನಗೆ ಮರಣಕ್ಕಿಂತಲೂ ಕಠೋರ. ಅದಕ್ಕೆ ನನ್ನ ಮನಸ್ಸು ಸರ್ವಥಾ ಒಪ್ಪದು.'

'ಹೌದೇ? ಇದೇನು ದೊಡ್ಡ ಸಮಸ್ಯೆ? ಅವೆಲ್ಲವುಗಳನ್ನು ದೂರೀಕರಿಸಿ ಇರಬಹುದಲ್ಲ.'

'ಸಾಧ್ಯವಿಲ್ಲ. ನಾನು ದೂರವಿಟ್ಟರೂ ಲೋಕ ತಲೆಯ ಮೇಲೆ ಕೈಯಾಡಿಸುತ್ತದೆ. ರುಂಡ ಕೊಟ್ಟ ಮೇಲೆ ಹುಲಿಗೆ ತಿನ್ನಬೇಡ ಎನ್ನ ಲಾದೀತೇ?'

'ಹಾಗಾದರೆ ಇದು ಶುದ್ಧ ಅಂಜಿಕೆ'

'ಅಂಜಿಕೆಯಲ್ಲ. ಆತ್ಮಜಾಗೃತಿ.'

'ಹಾಗಾದರೆ ನಿಮ್ಮ ಕೊನೆಯ ಅಭಿಪ್ರಾಯವಾದರೂ ಏನು?'

'ಕರಡೆಪ್ಪನವರೇ, ಕೊನೆಯ ಅಭಿಪ್ರಾಯ ನನ್ನಲ್ಲಿಲ್ಲ; ಶಿವನಲ್ಲಿದೆ'

'ಆದರೆ ಆ ಶಿವನೇ ಈಗ ಆ ಪೀಠ ಏರಲು ನಿಮಗೆ ಅಪ್ಪಣೆ ಕೊಡಿಸಿದ್ದಾನೆಂದು ತಿಳಿಯಿರಿ.'

'ಹುss ! ನಮ್ಮ ಇಚ್ಛೆಯನ್ನು ಶಿವನ ಇಚ್ಛೆಯೆಂದು ಆರೋಪಿಸುಸುವದು ಆತ್ಮವಂಚನೆ, ಮನವರಿಯದ ಕಳ್ಳತನವಿಲ್ಲವಲ್ಲ.'

'ಒಂದು ವೇಳೆ ಭವಿಷ್ಯದಲ್ಲಿ ಆ ಶಿವನೇ ಇಚ್ಛಿಸಿದರೆ?'

'ಅದಕ್ಕೆ ಮರುಮಾತಿಲ್ಲ. ಆತ ವಿಷ ಉಣಿಸಿದರೂ ಅಮೃತ ವೆನ್ನಬಲ್ಲೆ.'

'ಹಾಗಾದರೆ ಇದು ಸದ್ಯಕ್ಕೆ ನಿಮ್ಮ ಕೊನೆಯ ನಿರ್ಣಯವೋ?'

'ಅಲ್ಲ. ಮತ್ತೆ ಮತ್ತೆ ಪರೀಕ್ಷೆ ಮಾಡಬೇಡಿರಿ; ಆತನದು....'

'ಆಯಿತು. ನನ್ನ ಮನದ ಇಚ್ಛೆ ಹಾಳಾಯಿತು. ಒಬ್ಬ ಯೋಗ್ಯ ಜಂಗಮನನ್ನು ನನ್ನ ಪಾಠಶಾಲೆಯಿಂದ ಶ್ರೇಷ್ಠ ಮಠಕ್ಕೆ ಕಾಣಿಕೆ ನೀಡುವ ಭಾಗ್ಯ ನನ್ನ ಹಣೆಯಲ್ಲಿ ಬರೆಯಲಿಲ್ಲ. ನಾಡು ಬದುಕಲಿಲ್ಲ.'

ಮಾತು ಮಂಗಳಾರತಿಯಾಯಿತು! ವ್ಯಸನವೇ ಪ್ರಸಾದವಾಯಿತು!! ಕರಡೆಪ್ಪನವರ ಸೋಲೇ ಫಲವಾಯಿತು!!!

ಕರಡೆಪ್ಪನವರು ಮೆಲ್ಲನೇ ಎದ್ದು ಹೋದರು. ಮಹಾಚಾರ್ಯ ಬಾಳೆಯ ಗೊನೆಯಂತೆ ತಲೆವಾಗಿ ಕುಳಿತುಬಿಟ್ಟ.

# ಹೋಗುತ್ತೇನೆಂದು ಹೇಳಿ ಹೊರಟ

"ಒಂದನ್ನು ಬೇಡಿದರೆ ಹನ್ನೊಂದು ಬೆನ್ನು ಹತ್ತುತ್ತವೆ!" ಎಂದು ಮಳೆಯಪ್ಪಾರ್ಯ ಇಡೀ ರಾತ್ರಿ ಚಿಂತಿಸಿದ— "ಮೊದಲು ಕಲ್ಬೆಟ್ಟದಲ್ಲಿದ್ದೆ. ನಂತರ ಬಳ್ಳಾರಿಯ ಕರಡೆಪ್ಪನವರ ಪಾತಶಾಲೆಯಲ್ಲಿ ಜ್ಞಾನಾರ್ಜನೆಯನ್ನು ಬಯಸಿದೆ. ಆಯಿತು ಮುಂದೆ ಒಂದು ಸೂತ್ರಕ್ಕೆ ನೂರೆಂಟು ಸೂತ್ರಗಳು ಹೆಣಿಗೆ ಬಿದ್ದವು. ಸಂಸಾರವೇ ಬೇಡವೆಂದ ನನ್ನನ್ನು ಬಳ್ಳಾರಿಯೇ ವಾತ್ಸಲ್ಯದ ಜೋಗುಳಹಾಡಿ ಕಟ್ಟಿಹಾಕಿತು. ಬಯಸದಿದ್ದರೂ ಶ್ರೀಮಂತ ಕರಡೆಪ್ಪನವರ ಸೇವೆ ದೊರೆಯಿತು. ಅಷ್ಟಕ್ಕೇ ಈ ವಾತ್ಸಲ್ಯದ ಗಂಟು ನಿಲ್ಲಲಿಲ್ಲ. ಚಿಕ್ಕ ಸಂಸಾರದಲ್ಲಿ ಹೆಂಡತಿಯೊಬ್ಬಳೇ ಕೊರಳಿಗೆ ಬೀಳುವಳು. ಆದರೆ ಈ ಮಹಾ ಸಂಸಾರದಲ್ಲಿ ಐವತ್ತಾರು ಮತಗಳ ಅಧಿಪತ್ಯ ನಡೆಸುವ ಮಹಾ ದಾಂಪತ್ಯವೇ ನನ್ನ ಕೊರಳಿಗೆ ಬೀಳಬೇಕೆ? ಅಬ್ಬಾ!"– ಎಂದಿತು ಅವನ ಮನಸ್ಸು.

ಆ ರಾತ್ರಿ ಕಾಳರಾತ್ರಿ. ತನ್ನನ್ನು ಅಂಟಿದ್ದ ವಾತ್ಸಲ್ಯದ ಬಳ್ಳಿಯನ್ನೇ ಕಿತ್ತೊಗೆಯಲು ಆ ರುದ್ರಭಯಂಕರ ಸಾಧಕ ನಿರ್ಣಯಿಸಿದ. ಕಠೋರತೆಯೇ ಅವನಿಗೆ ಕೋಮಲತೆಯಾಗಿತ್ತು. ಶಾಶ್ವತ ಖಡ್ಗಧಾರೆಯ ಮೇಲೆ ಮಲಗಿ, ಅಗ್ನಿಯನ್ನು ಹೊತ್ತುಕೊಂಡು ವಿಷವನ್ನೇ ಸವಿಯುವಂತೆ ಆತನ ಉಗ್ರ ನಿಷ್ಠೆ ಪ್ರೇರೇಪಿಸುತ್ತಿತ್ತು. ಇಡೀ ರಾತ್ರಿ ರೆಪ್ಪೆಗೆ ರೆಪ್ಪೆ ಕೂಡಲಿಲ್ಲ. ಕಾಯಕೊಂಡದ ಕಣ್ಣೀರುಗಳು ವೈರಾಗ್ಯ ಕೆಂಡದಿಂದ ನಿಗನಿಗನೆ ಕಾಯ್ದು ಬಳಬಳನೇ ಉಕ್ಕೇರಿದವು. ಎರಡು ಮಹಾ ಸಮಸ್ಯೆಗಳು ಏರಾಡಿ ಅವನನ್ನು ಕಾಡಿದವು. ನನ್ನ ಸನ್ಯಾಸಕ್ಕೆ ಅಂಟಿಕೊಳ್ಳಲೋ ಅಥವಾ ಕರಡೆಪ್ಪನವರ ವಾತ್ಸಲ್ಯಕ್ಕೆ ಜಾರಿ ಬೀಳಲೋ ಎಂದು ಅಂತರಂಗ ತವಕಿಸಿತು– "ನಾನು ಕಟ್ಟುನಿಟ್ಟಾಗಿ ಸನ್ಯಾಸವನ್ನೇ ಬಯಸಿದರೆ, ಕರಡೆಪ್ಪನವರ ಅಂತರಂಗ ನೊಂದು ನೀರಾಗುತ್ತದೆ. ನನ್ನ ಮೇಲೆ ಅತ್ಯಂತ ಆತ್ಮವಿಶ್ವಾಸ ಪ್ರೀತಿ-ವಾತ್ಸಲ್ಯ ಗೌರವಗಳನ್ನು ಇರಿಸಿದ ಅವರ ಅಪಾರ ಹೃದಯ ಸಾಗರದಲ್ಲಿ ನಾನು ಮಣ್ಣೆರಚಿದಂತಾಗುತ್ತದೆ. ಒಂದು ವೇಳೆ ಅದಕ್ಕೆ ಬಲಿಬಿದ್ದು ಅವರ ಅಭಿಪ್ರಾಯಕ್ಕೆ ಸಮ್ಮತಿಸಿ ಪೀಠಾಚಾರ್ಯನಾದರೆ ನನ್ನನ್ನು ನಾನೇ ಕೊಂದುಕೊಂಡಂತೆ. ಏನನ್ನೂ ಬೇಡವೆಂದ ನಾನು ಬಂಗಾರದ ಸಿಂಹಾಸನ ಏರಬೇಕಾಗುತ್ತದೆ. ಕೀರ್ತಿಯನ್ನು ಬಯಸದಿದ್ದರೂ ಅಡ್ಡಪಲ್ಲಕ್ಕಿ

ಯಲ್ಲಿ ಕುಳಿತು ಜಯಘೋಶ ಕೇಳಬೇಕಾಗುತ್ತದೆ. ಪರಮಾತ್ಮನ ಪೂಜೆ ಮಾಡುವಲ್ಲೇ ಮೊಸಲಾದ ನಾನು, ನನ್ನನ್ನೇ ಜನರು ಪೂಜೆಮಾಡುವದನ್ನು ನೋಡಬೇಕಾಗುತ್ತದೆ. ರಾಜೈಶ್ವರ್ಯವೂ ಈ ಯೋಗೈಶ್ವರ್ಯವೂ ಕೂಡಿ ಬಾಳಲಾರವು. ಛೆ, ಅದು ನನ್ನಿಂದ ಸರ್ವಥಾ ಸಾಧ್ಯವಿಲ್ಲ. ಸಾಧ್ಯವಿಲ್ಲ. ನಾನಿನ್ನು ಇರಲಾರೆ. ಇರಲಾರೆ. ಕ್ಷಣ ಸಹ ನಿಲ್ಲಲಾರೆ. ಈ ಬಂಧನವು ಪ್ರೀತಿಯು ನೆಪದಲ್ಲಿ ಬಂದ ಘಟಸರ್ಪ. ವ್ಯಾಮೋಹದ ನೆರಳಲ್ಲಿ ನಿಂತ ವ್ಯಾಘ್ರ. ಭಕ್ತಿಯು ಸೋಗಿನಲ್ಲಿ ಬಂದ ಪೆಂಡಭೂತ.''

ತರುಣ ಶಿವಯೊಗಿಯ ತಳಮಳ ಮತ್ತೂ ಮತ್ತೂ ಹೆಚ್ಚಾಯಿತು. ಆತ್ಮಪರಂಜ್ಯೋತಿಯ ಕೋಗಿಲೆ ಬಾರಿ ಬಾರಿಗೆ ಕೂಗಿ ಹೇಳಿತು—

''ಹುಂ. ಹೊರಡು ಹೊರಡು ಹೊರಡು ನೀ ಇಲ್ಲಿಂದ.''

ಈತನ ಬಹಿರಂಗ ಮನಸ್ಸು ಮೆಲ್ಲನೇ ಕೇಳಿತು—

''ಏಕೆ ?''

''ಇನ್ನೂ ನೀನು ಪೂರ್ಣವಾಗಿ ಸುಡಬೇಕಾಗಿದೆ''

''ಹೌದೆ ? ಇನ್ನೂ ನಾನು ಸುಟ್ಟಿಲ್ಲವೇ ?''

''ಸುಟ್ಟಿರುವೆ. ಪೂರ್ಣ ಸುಡಬೇಕಾಗಿದೆ''

''ಅಂದರೆ?''

''ನಿನ್ನ ಆತ್ಮಲೋಕದ ವೈರಾಗ್ಯ ಪವಾಡ ರೂಪವಾಗಿ ಹೊರಚಿಮ್ಮ ಬೇಕಾಗಿದೆ''

''ಅಂದರೆ ?''

''ನಿನ್ನ ವಾಣಿ ಸಿದ್ಧವಾಣಿಯಾಗಬೇಕಾಗಿದೆ. ದೇಹ ಮಂತ್ರವಾಗ ಬೇಕಾಗಿದೆ. ಆತ್ಮ ಭಸ್ಮವಾಗಬೇಕಾಗಿದೆ. ಉಸಿರು ಶಿವನಾಗಬೇಕಾಗಿದೆ''

''ಇದೇನು ಬಹಿರಂಗ ಸಿದ್ಧಿಗೋ ?''

''ಬಹಿರಂಗಕ್ಕೂ ಹೌದು. ಅಂತರಂಗಕ್ಕೂ ಹೌದು.''

''ಆದರೆ ಬಹಿರಂಗವನ್ನೇನು ಮಾಡಲಿ? ಕಾಯಲೂ ಬಾರದು. ಕಟ್ಟಲೂ ಬಾರದು. ಅಂತರಂಗ ಸಿದ್ಧಿಯೊಂದು ದೊರೆತರೆ ಸಾಕಾಗುವದಿಲ್ಲವೇ ?''

''ತಕ್ಕಡಿಗೆ ಎರಡು ಪರಡೆಗಳಿರುತ್ತವೆ, ಆತ್ಮಸಿದ್ಧಿಗೆ ಅಂತರಂಗ ಬಹಿರಂಗ ಎಂದು ಎರಡು ಪರಡೆಗಳು.''

''ಅಂತೂ ಇದೂ ತಕ್ಕಡಿಯೇ ಅನ್ನು ?''

''ನಿಸ್ಸಂಶಯವಾಗಿ''

''ಹಾಗಾದರೆ ಅನೇಕ ಯೋಗಿಗಳು ಹಿಮಾಲಯದಲ್ಲಿ ಆತ್ಮಸಾಕ್ಷಾತ್ಕಾರ ವೊಂದನ್ನೇ ಸಾಧಿಸಿ ಐಕ್ಯರಾಗಲಿಲ್ಲವೇ ? ಅವರೇನು ಮೂರ್ಖರೇ ?''

''ಮೂರ್ಖರಲ್ಲ. ಆದರೆ ಆತ್ಮಜ್ಞಾನದ ಸ್ವಾರ್ಥಿಗಳು, ಆತ್ಮಜ್ಞಾನ ದೇವರ ಪ್ರಸಾದದಂತೆ ಅದನ್ನು ಎಲ್ಲರಿಗೂ ಹಂಚಿ ಸ್ವೀಕರಿಸಬೇಕು. ವಂಚಿಸಿ ಒಬ್ಬನೇ ಭುಂಜಿಸಬಾರದು.''

''ಹುಂss. ಅಂತೂ ನೀನು ಉಪದೇಶಕ್ಕೇ ನಿಂತೆಯೆನ್ನು !''

''ಉಪದೇಶವಲ್ಲ. ವಸ್ತು ಸತ್ಯ. ಖಂಡಾಖಂಡಿತ.''

"ಅಂದರೆ ನಾನೇನು ಮಾಡಲಿ ಈಗ ?"

"ಶಿವಪ್ರೇರಣೆಗೆ ಶರಣಾಗತನಾಗು."

"ಆಗಲಿ ಮುಂದ"

"ಆ ಪ್ರೇರಣೆಯೇ ನಿನ್ನ ಬಾಳಿನ ಹೂರಣ ಅರೆಯುವದು."

"ಹೌದ? ಹೂರಣವೆಂದರೆ ಹೋಳಿಗೆಯಾದರೂ ಆಗಬೇಕು, ಕಡಬಾದರೂ ಆಗಬೇಕು. ಯಾವುದಕ್ಕೆ ಹೂರಣ ?"

"ಸೂನ್ಯ ಪೀಠದ ಹೋಳಿಗೆಗೆ"

"ಅಂದರೆ?"

"ಅದು ಹಾಗೆಯೇ !"

"ಅಂದರೆ ? ಒಗಟು ಒಡೆದು ಹೇಳಬಾರದೇ ?"

"ಆಒಗಟು ತಾನೇ ಒಡೆಯುವದು ಕಾಲ ಬಂದಾಗ"

"ಈಗ?"

"ಮೌನವೇ ಮಹಾನವಮಿ. ಶಿವಪ್ರೇರಣೇಯೇ ಶರಣು,"

'ಆಗಲಿ. ಶರಣು. ಶರಣು. ಶರಣು'

ಒಮ್ಮೆಲೇ ಪ್ರಕಾಶಪುಂಜವೊಂದು ಉಜ್ವಲವಾಗಿ ಬೆಳಗಿ, ತರುಣ ಶಿವಯೋಗಿಯ ಹೃದಯದಲ್ಲಿ ಐಕ್ಯವಾದಂತಾಯಿತು. ಎಲ್ಲಿ ನೋಡಿದಲ್ಲೂ ಬೆಳಕು ಬೆಳಕು ಬೆಳಕು. ಮಹಾಬೆಳಕು! ಕತ್ತಲೆ ಬೆವರು ಬಿಟ್ಟಿತು, ಅಜ್ಞಾನ ಮರವಟ್ಟಿತು.

ಫಕ್ಕನೇ ಆತ ಮೇಲೆದ್ದು ಮಹಡಿಯ ಹೊರ ಮಾಳಿಗೆಗೆ ಬಂದು ನೋಡುತ್ತಾನೆ; ನಕ್ಷತ್ರಗಳು ಅಪಾರಗಾನ ಹಾಡುತ್ತಿವೆ. ಮಂದಮಾರುತ ಮಾವಿನ ಚಿಗುರಿನಲ್ಲಿ ವ್ಯಚಾಚಿ ಅರಳಿಸುತ್ತಿದೆ, ಚಂದ್ರಕಿರಣಗಳು ಪೂರ್ವ ದಿಕ್ಕಿನ ಅಭಿಷೇಕ ಮಾಡುತ್ತಿವೆ, ಮೌನವು ಮಂತ್ರೋಚ್ಚಾರಣೆ ನಡೆಸಿದೆ. ಶೂನ್ಯವೂ ಸಾಕಾರವಾಗಿದೆ. ನಿರಾಲಂಬ ಸ್ಥಿತಿಯು ದೃಗ್ಗೋಚರವಾಗಿದೆ. ನಿತ್ಯಸತ್ಯವು ಸ್ಥೂಲರೂಪದಲ್ಲಿ ಕೀಲಿಸಲು ಮೊದಲು ಮಾಡಿದೆ.

ಆಗಲೇ ಅಂತರಾಳದಲ್ಲಿ ಬಲವಾದ ನಿರ್ಧಾರವೊಂದನ್ನು ಕೊನೆಯ ಬಾರಿಗೆ ಮಾಡಿಬಿಟ್ಟ.

ಈ ದಿನ ಯಾವ ಸೇವಕನ ಸಹಾಯವನ್ನು ನಿರುಕಿಸಲಿಲ್ಲ. ನೇರವಾಗಿ ಸ್ನಾನಗೃಹಕ್ಕೆ ಸಾಗಿ ಮಜ್ಜನ ಪೂರೈಸಿದ. ಪೂಜಾ ಮಂದಿರವನ್ನು ಪರಿಶುದ್ಧಗೊಳಿಸಿ, ಲಿಂಗ ಪೂಜಾನಿಮಗ್ನನಾದ. ಧೂಪ–ದೀಪ–ಪತ್ರಿ–ಪುಷ್ಪ–ಗಂಧ–ಅಕ್ಷತಾದಿ ಬಹಿರಂಗ ಸಾಮಗ್ರಿಗಳ ಕಡೆಗೆ ಗಮನ ಕಡಿಮೆಯಾಗಿ ನೇರವಾಗಿ ನಿರಾಳದ ನಿರ್ಬಯಲಲ್ಲಿ ಧುಮುಕಿದ. ಧುಮುಕಿದ್ದೊಂದೇ ಗೊತ್ತು, ಎಲ್ಲೋ ಎಲ್ಲೋ ಹೋಗಿಬಿಟ್ಟ, ಕಾಣಬಾರದ ಕಡಲಲ್ಲಿ, ತೇಲಬಾರದ ತೆಪ್ಪದಲ್ಲಿ, ಸಾರಬಾರದ ಸ್ವರ್ಗದಲ್ಲಿ ತೋರದಂತೆ ಹೋಗಿಬಿಟ್ಟ. ಸವಿಕಲ್ಪ ಸಮಾಧಿಯು ನಿರ್ವಿಕಲ್ಪ ಸಮಾಧಿಯ ಅಂತರಾಳದಲ್ಲಿ ಪ್ರವೇಶಿಸಿತು, ಸಹಸ್ರದಳಕಮಲ ಪಟಪಟನೆ ಅರಳಿತು.

ಎಷ್ಟು ಕಾಲ ಕಳೆದನೋ ಬಲ್ಲರಾರು? ಕಣ್ತೆರೆದಾಗ ಸೂರ್ಯ ಮೈಕಿತ್ತು ಮೇಲೆದ್ದಿದ್ದ, ಪಕ್ಷಿಗಳು ಕಲರವದಿಂದ ವಾತಾವರಣ ತುಂಬಿದ್ದವು.

ಒಂದು ಕ್ಷಣ ಇನ್ನೂ ಕಳೆದಿರಲಿಲ್ಲ. ಅಂತರಂಗದ ಕೂಗೊಂದು ಕೇಳಿ ಬಂತು, — 'ಹುಂ, ಹೊರಡಿನ್ನು'. ಆಯ್ತು ಶಿವನಾಜ್ಞೆ ! ಯಂತ್ರದಂತೆ ಮೇಲೆದ್ದ !!

ಬಂದವನು ಬಂದಂತೆ ನಡೆದ, ಉಟ್ಟ ಕಪನಿ, ಕಾವಿಯ ಪೇಟ, ಕಾಲಲ್ಲಿ ಜೋಡಿಲ್ಲ, ಕೈಯಲ್ಲಿ ಗಂಟುಮೂಟೆ ಇಲ್ಲ, ಹಾಗೆಯೇ ಹೊರಟ, ಕ್ಷಣ ಸಹ ವಿಚಾರ ಮಾಡದೇ ನಡದೇಬಿಟ್ಟ. ಇವನ ವಿಚಿತ್ರ ವೃತ್ತಿಯನ್ನು ಕಂಡ ಸೇವಕ ಮೆಲ್ಲನೆ ಬಳಿಗೆ ಬಂದು–

'ಸ್ವಾಮೀಜಿ? ಈಗ?'

ಎಂದು ಕೇಳಿದ. ಈತ ನಿರ್ಧಾರವಾಗಿ ಹೇಳಿದ–

'ಹೌದು'

'ಎಲ್ಲಿಗೆ?'

'ಗೊತ್ತಿಲ್ಲ.'

ಇನ್ನೂ ಹತ್ತು ಹೆಜ್ಜೆ, ದಾಟಿರಲಿಲ್ಲ. ಸುದ್ದಿ ಕರಡೆಪ್ಪನವರ ಮನೆ ತುಂಬಿತು. ಸೇವಕ ಮಿಂಚಿನಂತೆ ಸುದ್ದಿ ಮುಟ್ಟಿಸಿದ. ಕರಡೆಪ್ಪನವರು ಲಿಂಗ ಪೂಜೆಯನ್ನು ಅರ್ಧಕ್ಕೇ ನಿಲ್ಲಿಸಿ ಓಡಿಬಂದರು. ಹೌಹಾರಿ ಕೇಳಿದರು–

'ಮಳೆಯಪ್ಪಾರ್ಯರೇ....'

'..................'

'ಪಾಠಶಾಲೆಗೆ ಹೊರಟಿರಾ?'

'ಇಲ್ಲ. ಪಾಠಶಾಲೆಯ ವಿದ್ಯಾಭ್ಯಾಸ ಪೂರ್ತಿಯಾಯಿತು'

'ಮತ್ತೆಲ್ಲಿಗೆ?'

'ಗೊತ್ತಿಲ್ಲ'

'ಅಂದರೆ?'

ಸ್ವಲ್ಪ ಗಂಭೀರನಾಗಿ ಮಳೆಯಪ್ಪಾರ್ಯ ನಿಂತ. ಮುಖದ ಮೇಲೆ ಯಾವ ಚಿಂತೆಯೂ ಇಲ್ಲ. ಕಳವಳವೂ ಇಲ್ಲ. ಪ್ರಸನ್ನ ಸುಂದರವಾಗಿದೆ, ಆದರೆ ಇಂದಿನ ಅದರ ಕಳೆಯೇ ಬೇರೆ. ಅದರ ಗುಣಧರ್ಮವೇ ಬೇರೆ. ಯಾವದೋ ನಿರ್ಧಾರ ಕೆರಳಿದ ಸಿಂಹದಂತೆ ಅಲ್ಲಿ ಮೊಗವೆತ್ತಿ ನಿಂತಿದೆ. ಈಗ ಕರಡೆಪ್ಪನವರೇ ಮತ್ತೊಮ್ಮೆ ಕೇಳಿದರು.

'ನಗರ ಸಂಚಾರಕ್ಕೆ ಹೋಗಿ ಬರುವಿರಾ?'

'ಇಲ್ಲ. ದೇಶ ಸಂಚಾರಕ್ಕೆ ಹೊರಟಿದ್ದೇನೆ'

'ಯಾವ ಕಡೆಗೆ'

'ತಿಳಿಯದು'

'ಅಂದರೆ....? ದೇಶಾಂತರಕ್ಕೆ ನಡೆದಿರಾ?'

'ಇದ್ದರೂ ಇರಬಹುದು'

'ಅಯ್ಯೋ ಇದೇನು ಮಳೆಯಪ್ಪಾರ್ಯರೇ ಇದೇನು? ನನ್ನ ದಮ್ಮಯ್ಯಯೆಂದು ಕಾಲಿಗೆ ಬಿದ್ದು ಬೇಡಿಕೊಳ್ಳುತ್ತೇನೆ. ನನ್ನನ್ನು ಬಿಟ್ಟು.......'

'ಹೋಗಬಾರದೆಂದು ಹೇಳುತ್ತೀರಾ?' ಬೇಡ ಕಾಡಪ್ಪನವರೇ, ಶಿವನಾಜ್ಞೆ ಮೀರುವದು ಮಹಾಪಾಪ, ಗಂಡಾಂತರ.'

'ಶಿವನಾಜ್ಞೆಯೇ? ಅದೆಂಥ ಶಿವನಾಜ್ಞೆ? ಹಾಗಾದರೆ ನಾನು ಮಹಾ ಪಾಪಿಯೆಂದನೇ ಆ ನಿಮ್ಮ ಪರಮಾತ್ಮ? ಪಾಪಿಯ ಮನೆಯಲ್ಲಿ ಇರಬೇಡ ವೆಂದು ಬೋಧಿಸಿದನೇ? ನಾನೇನು ಮಾಡಿದೆ?'

'ಆಡಬೇಡಿರಿ, ಶರಣರೇ ಆಡಬೇಡಿರಿ ಈ ಮಾತು. ಇದು ಪುಣ್ಯಸ್ಥಲ. ನೀವು ಪುಣ್ಯಸ್ಥಲದ ಆತ್ಮಸಿಂಧು. ಆದರೆ ನಾನು ಯಾವ ಉದ್ದೇಶಕ್ಕಾಗಿ ನಿಮ್ಮ ಆಶ್ರಮಕ್ಕೆ ಬಂದಿದ್ದನೋ ಅದು ಪೂರ್ಣವಾಯಿತು. ಇನ್ನು ಮುಂದಿನ ಭವಿಷ್ಯ ಬೇರೆಯೇ ಇದೆ.'

'ಅದೇನು ವಿಚಾರ ಮಳೆಯಪ್ಪಾರ್ಯರೆ? ಆ ಭವಿಷ್ಯವನ್ನು ಇಲ್ಲೇ ಈ ಸ್ಥಳದಲ್ಲೇ ರೂಪಿಸಿಕೊಂಡರಾಗದೇ?'

'ಆಗಬಹುದು. ಆದರೆ ಅದು ನನ್ನ ಕೈಯಲ್ಲಿಲ್ಲ. ಆ ಶಿವನ....'

'ಕೈಯಲ್ಲಿದೆ ಎನ್ನುತ್ತೀರಾ? ಲೇಸಾಯ್ತು. ಆ ಶಿವ ನಿಮ್ಮ ಉಪಾಯಕ್ಕೆ ತಕ್ಕ ಮಂತ್ರನಾದ!'

'ಅನ್ನಿರಿ. ಅನ್ನಿರಿ.'

'ಬೇಡ. ಬೇಡ. ನನ್ನ ಅಜ್ಞಾನವನ್ನು ಇದೊಂದು ಸಲ ಕ್ಷಮಿಸಿಬಿಡಿರಿ. ನಿಮಗೆ ನೂರು ಸಲ ಸಾಷ್ಟಾಂಗ ಹಾಕೇನು. ಆದರೆ ನೀವು ಹೊರಡುವದನ್ನು ಕಣ್ಣಾರೆ ನೋಡಲಾರೆ. ಕಿವಿಯಿಂದ ಕೇಳಲಾರೆ. ಬೇಡ ಬೇಡ ತಂದೇ. ಬೇಡ ಬೇಡ. ನಿಮ್ಮ ನಿರ್ಧಾರವನ್ನು ಬದಲಿಸಿರಿ. ಬದಲಿಸಿರಿ. ಈಗ ನಿಮ್ಮ ಸ್ಥಿತಿಯನ್ನು ಕಂಡು ತಾಳಲಾರೆ. ತಾಳಲಾರೆ.'

ಮಳೆಯಪ್ಪಾರ್ಯ ಕಣ್ಣೀರ ಕಡಲಿನ ದಂಡೆಗೆ ನಿಂತ ಆತ್ಮವೈರಾಗ್ಯದ ಆನೆಯಂತೆ ಗಂಭೀರನಾಗಿ ಹೇಳಿದ—

'ಕಾಡಪ್ಪನವರೇ, ನೀವು ನನ್ನ ದೊರೆ. ನನ್ನ ತಂದೆ, ನನ್ನ ತಾಯಿ, ಶಿವನ ಇನ್ನೊಂದು ರೂಪ. ನೀವು ಈ ಬಡ ವಿದ್ಯಾರ್ಥಿಗೆ ತೋರಿದ ಆದರ, ಸಲ್ಲಿಸಿದ ಸೇವೆಯನ್ನು ಮರೆಯಲು ಶತಕೋಟಿ ವರ್ಷಗಳಿಗೂ ಸಾಧ್ಯವಿಲ್ಲ. ನನಗೆ ಅನ್ನದಾನ, ವಸ್ತ್ರದಾನ, ಆಶ್ರಯದಾನ, ವಾತ್ಸಲ್ಯದಾನವಲ್ಲದೇ ನಿಮ್ಮ ಪಾಠಶಾಲೆಯಿಂದ ಅಪಾರವಾದ ಜ್ಞಾನವನ್ನೂ ನೀಡಿದಿರಿ. ನಿಮ್ಮ ಮನೆಯ

ಲ್ಲಿದ್ದು ನಾನು ಅತಿ ದೊಡ್ಡ ಸಾಲಗಾರನಾಗಿದ್ದೇನೆ. ನೀವು ದುಡ್ಡಿನಲ್ಲಿ ಎಷ್ಟು ಶ್ರೀಮಂತರೋ ದೊಡ್ಡಸ್ತಿಕೆಯಲ್ಲಿ ಅದಕ್ಕೆ ನೂರುಪಾಲು ಶ್ರೀಮಂತರು. ನಿಮ್ಮ ವಿಶಾಲವಾದ ಕರುಣಾಸಾಗರದಲ್ಲಿ ಮಗುವಾಗಿ ತೇಲಿದ್ದೇನೆ, ಹಕ್ಕಿಯಾಗಿ ಹಾರಿದ್ದೇನೆ. ಭಿಕ್ಷುಕನಾಗಿ ಬೇಡಿದ್ದೇನೆ. ಯಾವುದಕ್ಕೂ ನೀವು ಇಲ್ಲೆನ್ನಲಿಲ್ಲ. ನಾನು ಬೇಡುವ ಮುಂಚೆಯೇ ಎಲ್ಲವನ್ನೂ ಸಲ್ಲಿಸಿದಿರಿ. ನಿಮ್ಮಿಂದ ಇದಕ್ಕಿಂತ ಹೆಚ್ಚು ಸಾಲವನ್ನು ನಾನು ಬಯಸುವದಿಲ್ಲ. ಸಾಲ ಹೆಚ್ಚಿದಂತೆ ಕೈವಲ್ಯ ದೂರ ದೂರ ಓಡುತ್ತದೆ. ನಿಮ್ಮ ಮುಂದೆ ಕೈ ಮುಗಿದು ನಿಂತು, ಕರುಳ ಕಿತ್ತು ಬೇಡಿಕೊಳ್ಳುತ್ತೇನೆ. ನನ್ನನ್ನು ತಪ್ಪು ಭಾವಿಸಬೇಡಿರಿ. ನಾನು ಇಲ್ಲಿ ಎಷ್ಟು ದಿನ ಇರಬೇಕೆಂದು ಶಿವಸಂಕಲ್ಪವಿತ್ತೋ ಅದು ಪೂರ್ಣವಾಯಿತು. ಇನ್ನು ನನ್ನ ಬಾಳಿನ ಹೆಗ್ಗುರಿಗೆ ಹಿಗ್ಗಿನಿಂದ ಹೋಗಲುಬಿಡಿರಿ. ಕಟ್ಟಿಹಾಕಬೇಡಿರಿ. ಮುಮುಕ್ಷತ್ವಕ್ಕೆ; ಬಂಧನ ಮುಕ್ತಿಯೇ ಮೊದಲು. ದಯವಿಟ್ಟು ನಿರ್ಬಂಧಿಸದಿರಿ; ನಿರ್ಗಮಿಸಲು ಕೈಯೆತ್ತಿ ಮುದ್ದಿಸಿ ಕಳಿಸಿಕೊಡಿರಿ. ಹೋಗಿಬಾ ಚಿನ್ನಾ ಎಂದು ಎದೆತುಂಬಿ ಕಳಿಸಿಕೊಡಿರಿ. ಕಳಿಸಿಕೊಡುವಿರಾ?.... ಕೆರಡೆಪ್ಪನವರೇ....ಕಳಿಸಿಕೊಡುವಿರಾ?....ನಾನಿನ್ನು ಬರಲೇ....? ಹೇಳಿರಿ.... ಮೌನವಾಗಿ ಯಾಕೆ ನಿಂತಿರಿ? ಉತ್ತರಿಸುವದಿಲ್ಲವೇ?....'

ಕರಡೆಪ್ಪನವರು ಕೈ ಮುಗಿದು, ತಾಯಿ ಅಗಲುವಾಗ ಎದೆಕಿತ್ತು ಅಳುವ ಕೂಸಿನಂತೆ ಅತ್ತುಬಿಟ್ಟರು !

'....ಅಯ್ಯೋ, ಎಂತಹ ಹೊತ್ತು ತಂದಿರಿ ಮಳೆಯಪ್ಪನವರೇ .... ಎಂಥಹ ಹೊತ್ತು ತಂದಿರಿ... ನೀವು ಅಗಲುವ ಮುನ್ನ ಶಿವ ನನ್ನ ಮೇಲೆ ಕರುಣೆ ತೋರಿ ನನ್ನ ಅಂತ್ಯವನ್ನು ಮಾಡಿದ್ದರೆ ತೃಪ್ತಿಯಿಂದ ಸಾಯುತ್ತಿದ್ದೆ. ಇದೇನು ಮಾಡಿದಿರಿ? ಇದೇನು ಮಾಡಿದಿರಿ? ಕೊನೆಗೂ ಈ ದುರ್ದೈವಿಗೆ ಕಣ್ಣೀರೇ ಗತಿಯೆಂದು ಹೇಳಿದಿರಾ? ಕತ್ತಲೆಯೇ ಇರಲೆಂದು ಹರಿಸಿದಿರಾ? ಮಳೆಯಪ್ಪಾರ್ಯರೇ....ಮಳೆಯಪ್ಪಾರ್ಯರೇ....ಇನ್ನು ನೀವು ಇಲ್ಲದಾಗ ಈ ಬಾಯಿಂದ ಯಾರನ್ನು ಕರೆಯಲಿ? ಈ ಕಣ್ಣಿಂದ ಯಾರನ್ನು ನೋಡಲಿ? ಈ ಹಣೆಯಿಂದ ಯಾರನ್ನು ವಂದಿಸಿ ಸುಖಪಡಲಿ? ಅಯ್ಯೋ ಅಯ್ಯೋ ನಿರ್ಭಾಗ್ಯವೇ? ಲಿಂಗ ಅಗಲಿದ ಈ ಮನೆಯಲ್ಲಿ ಇನ್ನು ಬಾಳಲೇ? ಜಂಗಮ ಜಾರಿದ ತಾಣದಲ್ಲಿ ಉಳಿಯಲೇ? ಗುರು ಸರಿದು ಹೋದ ಸದನದಲ್ಲಿ ಸುಖ

ಪಡಲೇ? ಮುಗಿಯಿತು.... ಮುಗಿಯಿತು.... ಇಂದಿಗೆ ನನ್ನ ಪುಣ್ಯ ತೀರಿತು.... ಹಕ್ಕಿ ಹಾರಿತು.... ಹೂವು ಬಾಡಿತು....'

'ಕರಡೆಪ್ಪನವರೇ....'

'.............. !'

'ಸಮಾಧಾನ ಮಾಡಿಕೊಳ್ಳಿರಿ ಕರಡೆಪ್ಪನವರೇ, ಸಮಾಧಾನ ಮಾಡಿಕೊಳ್ಳಿರಿ.'

'..............!!'

'ಸಾಕು ಸಾಕು, ಅಳಬೇಡಿರಿ. ಅಳಬೇಡಿರಿ. ನಗುನಗುತ್ತ ಕಳಿಸಿಕೊಡಿರಿ'

'..............!!!'

ಕರಡೆಪ್ಪನವರು ಈಗ ಶ್ರೀಮಂತರಲ್ಲ, ಹಿರಿಯರಲ್ಲ, ಕೇವಲ ಮುಗ್ಧ ಕೂಸು. ತೊಟ್ಟಿಲ ಮಗು. ಹಸುಗೂಸಿನಂತೆ ಬಿಕ್ಕಿ ಬಿಕ್ಕಿ ಅತ್ತರು.

ಒಂದು ಹೊಳೆಗೆ ನೂರು ಹೊಳೆಗಳು ಕೂಡುವಂತೆ ಕರಡೆಪ್ಪನವರ ಹೆಂಡತಿ, ಮುಗ್ಧ ಮಕ್ಕಳು, ಸೊಸೆಯಂದಿರು, ಆಳುಗಳು ಓಡಿಬಂದರು, ವಿಷಯ ತಿಳಿದು, ಮುಳ್ಳು ಕಂಟಿಗೆ ಬಿದ್ದ ಕೂಸಿನಂತೆ ಸಂಕಟಪಟ್ಟು ಅತ್ತರು. ನೆತ್ತಿಗೆ ಮೊಳೆನಟ್ಟ ಮಗುವಿನಂತೆ ಚೀರಿದರು.

ಕರಡೆಪ್ಪನವರ ಹೆಂಡತಿಯಂತೂ ಸೆರಗು ಹಾಸಿ ಅಡಿಗೆ ಬಿದ್ದು ಹಂಬಲಿಸಿ ಬೇಡಿಕೊಂಡಳು—

'ಬೇಡ ಬೇಡ ನನ್ನ ಅಪ್ಪಯ್ಯ.... ಹೋಗಬೇಡ ಹಡೆದಯ್ಯ... ನಿನ್ನ ಸಾಕಿದ ಕೂಸಾಗಿ ಬೇಡಿಕೊಳ್ಳುತ್ತೇನೆ. ನೀನು ಹಾಲುಣಿಸಿ ಬೆಳೆಸಿದ ಮಗಳಾಗಿ ಬೇಡಿಕೊಳ್ಳುತ್ತೇನೆ. ನನ್ನನ್ನು ಚೆಲ್ಲಿ ಹೋಗಬೇಡ. ಮಗಳ ಸುಖ ದುಃಖ ನೋಡದೆಯೇ ಬೆಂಕಿಗೆ ಬಿಡುವೆಯಾ? ಇದೇನು ತಂದೇ.... ತಂದೇ.... ತಂದೇ....?'

'ಅಪ್ಪನವರೇ....'

'ಅಪ್ಪಾಜೀ....'

'ಶಾಂತರಾಗಿರಿ ತಾಯಿ, ಶಾಂತರಾಗಿರಿ....'

'..............'

ಉಕ್ಕೇರಿದ ಕಣ್ಣೀರನ್ನು ಯಾರು ತಾನೇ ನಿಲ್ಲಿಸಿಯಾರು? ವಾತ್ಸಲ್ಯದ

ಸಂಕಟವನ್ನು ಯಾರು ತಾನೇ ಕಳೆದಾರು? ಕರಡೆಪ್ಪನವರ ಮಕ್ಕಳು, ಸೊಸೆಯಂದಿರು ಮೂಕ ಬಸವಣ್ಣಗಳಂತೆ ಮಾತರಿಯದೇ ಅಳತೊಡಗಿದರು. ಕಾಡಿನಲ್ಲಿ ಬಿಟ್ಟ ಕರುವಿನಂತೆ ಬಿಕ್ಕಿ ಬಿಕ್ಕಿ ಅಳತೊಡಗಿದರು. ಎಲ್ಲರೂ ಅಳುತ್ತಳುತ್ತ ಗುಂಪಾಗಿ, ಈ ಶಿವಯೋಗಿಯ ಪಾದದ ಮೇಲೆ ಬಿದ್ದು, ಕಣ್ಣೀರಿನ ಅಭಿಷೇಕ ಮಾಡಿ, ಎದೆಯ ರಕ್ತದ ಹೂವೇರಿಸಿ ಅಳುವ ದೃಶ್ಯವಂತೂ ನೋಡಲಸಾಧ್ಯ.

ತರುಣ ಶಿವಯೋಗಿ ಮುಂದೆ ನಡೆದ. ಕೊನೆಯ ಬಾರಿಗೆ ಕೈಮುಗಿದು ಮುಂದೆ ನಡೆದ ಕರಡೆಪ್ಪನವರ ಮನೆಯೇ ಓಡಿಬಂದಂತೆ ಹಿಂಡು ಹಿಂಡಾಗಿ ಎಲ್ಲರೂ ಹಿಂದೆಯೇ ಬಂದರು. ಪಕ್ಕದಲ್ಲಿದ್ದ ಆಕಳುಗಳು ಮೇವನ್ನು ಸವಿಯದೇ ಕಣ್ಣೀರು ಸುರಿಸಿದವು. ಪಾಠಶಾಲೆಯ ವಟುಗಳು ಓಡಿಬಂದರು. ಅಧ್ಯಾಪಕರು ಬಂದರು. ಸಿಡಿಲು ಬಡಿದು ಮುಗಿಲು ಹರಿದು ಬಿದ್ದಂತೆ ಕಂಗೆಟ್ಟು ನೋಡಿದರು.

ತರುಣ ಶಿವಯೋಗಿ ಮುಂದೆ ಮುಂದೆಯೇ ನಡೆದ. ಅವರೆಲ್ಲ ಹಿಂದೆ ಹಿಂದೆಯೇ ಬಂದರು. ಈ ವಾರ್ತೆ ನಗರದಲ್ಲಿ ಮಿಂಚಿನಂತೆ ಸಂಚರಿಸಿತು. ಈತನಿಗೆ ಭಿಕ್ಷೆ ನೀಡಿದ ಮನೆ ಮನೆಯ ಮುತ್ತೈದೆಯರು ಬಂದರು. ನತ್ತು ತೊಯ್ಯುವಂತೆ ಅತ್ತರು, ನಾ ಮುಂದೆ ತಾ ಮುಂದೆಯೆಂದು ಓಡಿಬಂದು ಅನ್ನ ನೀಡಿದ ಮಕ್ಕಳು ಕಕ್ಕಾವಿಕ್ಕಿಯಾಗಿ ಬಿಕ್ಕಿದವು. ಇವನಿಗೆ ದಿನನಿತ್ಯ ಎಡೆ ನೀಡಿದ ತುಂಬಿದ ಬಸುರಿ, ಈಗ ಮಗನನ್ನು ಟೊಂಕದ ಮೇಲೆ ಹೊತ್ತು, ಕಂತದಲ್ಲಿ ಸಂಕಟಸಿಕ್ಕು ಬಂದಿದ್ದಾಳೆ ತನ್ನ ಮಗನಿಗೆ ಲಿಂಗ ದೀಕ್ಷೆಯನ್ನು ಈತನಿಂದಲೇ ಕೊಡಿಸಬೇಕೆಂಬ ಅವಳ ಹಂಬಲ ಹಾಲೊಡೆದು ಮೊಸರಾಗಿದೆ. ಇವನಿಗೆ ಬಿಸಿರೊಟ್ಟಿ ಬೆಣ್ಣೆಯನ್ನು ನೀಡಿದ ಮುದುಕಿ ಏಳಲಾರದೇ ಹಾಸುಗೆ ಹಿಡಿದಿದ್ದಾಳೆ. ಆದರೂ ಶಕ್ತಿಮೀರಿ ಕಾಲೂರುತ್ತ ಬೀದಿಗೆ ಬಂದಿದ್ದಾಳೆ. 'ಅಯ್ಯೋ ನನ್ನ ಪರಮಾತ್ಮಾ.... ನನ್ನ ಕಂದಪ್ಪ.... ಅಯ್ಯೋ ನನ್ನ ಎಳೆ ಕರುಳೆ....ಅಯ್ಯೋ ನನ್ನ ಮರಿ ಆನೆಯೆ.... ಈ ಬುದ್ಧಿ ಯಾಕೆ ಬಂತಪ್ಪಾ ನಿನಗೆ' ಎಂದು ಬತ್ತಿದ ಮೊಗವನ್ನು ಕಣ್ಣೀರಿನಿಂದ ತೊಯ್ಸಿ ಬಿಕ್ಕಿ ಬಿಕ್ಕಿ ಅಳುತ್ತಿದ್ದಾಳೆ.

ಆದರೆ ಶಿವಯೋಗಿಯ ನಿರ್ಧಾರ ಕದಲಲಿಲ್ಲ. ಶಿವನಿಚ್ಛೆ ಕೊಂಕಲಿಲ್ಲ, ಎಲ್ಲರಿಗೂ ಕೊನೆಯ ನಮಸ್ಕಾರ ಹೇಳಿ ಹೊರಟುಬಿಟ್ಟ. 'ಹೋಗುತ್ತೇನೆ' ಎಂದು ಹೇಳಿದ. 'ಹೋಗಿ ಬರುತ್ತೇನೆ' ಎನ್ನಲಿಲ್ಲ.

# ಹೊಸ ಯುಗಕ್ಕೆ ಪಂಚಾರತಿ

ಯಾವ ಸಮಯದಲ್ಲಿ ಏನು ಘಟಿಸಬೇಕೊ ಅದು ಘಟಿಸಲೇಬೇಕಲ್ಲವೇ? ಅತ್ತ ತರುಣ ಶಿವಯೋಗಿ ನಗರ-ಗ್ರಾಮಗಳನ್ನು ಭಿಕ್ಷಾನ್ನಗಳ ಆಶ್ರಯದಿಂದ ಸಂಚರಿಸಿ ನೇರವಾಗಿ ನರೇಗಲ್ಲಿಗೆ ಬಂದ. ಇತ್ತ ಸಕ್ಕರೆ ಕರಡೀಶ ಶರಣರು ಅಲ್ಪ ಕಾಲಾವಧಿಯಲ್ಲಿ ಶಿವಾಧೀನರಾದರು. ಅವರು ಶಿವಾಧೀನರಾದದ್ದೇ ತಡ, ಅವರ ಉಚಿತ ಸಂಸ್ಕೃತ ಪಾಠಶಾಲೆಯೂ ಶಿವಾಧೀನವಾದಂತಾಯಿತು. ಅಲ್ಲಿಯ ವಟುಗಳು ದಿಕ್ಕು ಕಂಡತ್ತ ಹೋದರು. ಆಚಾರ್ಯರು ಮತ್ತೆ ಬೇರೆಡೆಗೆ ಜೀವನೋಪಾಯ ದೊರಕಿಸಲು ನಡೆದರು. ಒಂದು ಹಕ್ಕಿ ಹಾರಿತು. ಎಲ್ಲ ಹಕ್ಕಿಗಳೂ ಹಾರಿದವು. ಮರ ಬರಿದಾಯಿತು.

ಕರಡೆಪ್ಪನವರ ಗರಡಿಯಲ್ಲಿ ತಯಾರಾದ ಶಿವಬಸವಶಾಸ್ತ್ರಿಗಳು ನರೇಗಲ್ಲಿನವರು. ಮುಂದಿನ ವಿದ್ಯಾರ್ಜನೆಗೆ ಮಳೆಯಪ್ಪಾರ್ಯ ಅವರನ್ನೇ ಆಶ್ರಯಿಸಿದ. ಆದರೆ ತನ್ನ ಅನುಷ್ಠಾನ ನಿಯಮ ಬಿಡಲಿಲ್ಲ. ಊರ ಹೊರಗೆ ಒಂದು ಎಲೆಮನೆ. ಅಲ್ಲಿಯೇ ವನವಾಸ. ನಿತ್ಯ ತ್ರಿಕಾಲಸ್ನಾನ, ತ್ರಿಕಾಲ ಪೂಜೆ, ನಿಯಮಿತ ಅನುಷ್ಠಾನ, ಊರಲ್ಲಿ ಭಿಕ್ಷೆ, ಅದೇ ಅಂದಿನ ಪ್ರಸಾದ. ಹೀಗೆ ಆತನ ಜೀವನ ಸಾಗಿತು.

ಕರಡೆಪ್ಪನವರ ಆತ್ಮ ಶಿವಲೋಕಕ್ಕೆ ಹೋಗಿ ನೇರವಾಗಿ ಶಿವನಿಗೇ ವಶೀಲಿ ಹಚ್ಚಿತೆಂದು ಕಾಣುತ್ತದೆ. ಅಂತೂ ವಶೀಲಿ ಸಂಪೂರ್ಣ ಸಾರ್ಥಕ ವಾಯಿತು, ಕಾರಣ ಮಳೆಯಪ್ಪಾರ್ಯನಿಗೆ ಹೊಟ್ಟೆ ಮುರಿದು ಜಾಡಿಸತೊಡ ಗಿತು ! ಬಹಿರ್ದೆಸೆಗೆ ಹೋಗಿಬಂದಾಗಲೊಮ್ಮೆ ಸ್ನಾನಮಾಡಲೇಬೇಕಲ್ಲವೇ ? ಅಂತೂ ಶಿವನಿಚ್ಛೆಯೆಂದು ತ್ರಿಕಾಲ ಸ್ನಾನವನ್ನು ಅನೇಕ ಸ್ನಾನಗಳಿಗೆ ಏರಿಸಿ ದನು. ಆದರೆ ಆ ಶಿವನ ಇಚ್ಛೆ ಅಷ್ಟಕ್ಕೇ ಬಿಡಲಿಲ್ಲ. ಇವನನ್ನು ಅಲ್ಲಾಡಿ ಸಿತು. ಒಂದಲ್ಲ ಎರಡಲ್ಲ; ದಿನಕ್ಕೆ ಹತ್ತು ಸಲ ಬಹಿರ್ದೆಸೆ! ಅದೂ ಹೊಟ್ಟೆ ಉರಿದು–ಮುರಿದು–ಕಣ್ಣೀರು ಕಪಾಳಿಗೆ ಸುರಿದು ಬಹಿರ್ದೆಸೆ!! ಆದರೂ ಆತ ನಿಷ್ಠುರನಲ್ಲವೇ ? ತ್ರಿಶೂಲಧಾರಿ ಶಂಕರನಿಗಿಂತಲೂ ಒಂದು ಪಾಲು ಮೇಲು! ಆತ ಶಿವಮಾತ್ರ; ಆದರೆ ಈತ ಶಿವಯೋಗಿ.

ಮುಳೆಯಪ್ಪಾರ್ಯ ದಿನಕ್ಕೆ ಹತ್ತು ಸಲ ಸ್ನಾನ ಕೈಕೊಂಡ. ಎಷ್ಟು ಕಷ್ಟಬಂದರೂ ಮಡಿ–ಹುಡಿ, ಲಿಂಗಾರ್ಚನೆ, ನಿತ್ಯನಿಯಮ ಬಿಡಲಿಲ್ಲ.

ಮತ್ತೇನು ಕೇಳುವದು? ಹತ್ತು ಇಪ್ಪತ್ತಕ್ಕೇರಿತು! ದಿನಾಲು ಇಪ್ಪತ್ತು ಸಲ ಆಮ್ಲ–ರಕ್ತ. ಹೊಟ್ಟೆಯು ತುಂಬ ಉರಿ. ನರನರಗಳಲ್ಲಿ ಹಾವು ಹೊಕ್ಕಾಡಿದಂತಾಯಿತು. ಆದರೂ ಇಪ್ಪತ್ತು ಸಲ ಸ್ನಾನ, ಆಚಾರ, ನಿತ್ಯನಿಯಮ, ವೀರ ಮಡಿ, ಕಾಯಕ, ತ್ರಿಕಾಲ ಪೂಜೆ, ಯಾವುದೂ ನಿಲ್ಲಲಿಲ್ಲ.

ಶಿವ ಮಣಿಯಲಿಲ್ಲ. ಏಕೆಂದರೆ ಕರಡೆಪ್ಪನವರ ಹೃದಯಶೂಲೆ ಆತನ ತಲೆಶೂಲೆಯಾಗಿ ಕಾಡುತ್ತಿತ್ತು! ಆಯ್ತು; ಇಪ್ಪತ್ತು ಮೂವತ್ತಕ್ಕೇರಿತು!! ಘನ ಘೋರ ಸನ್ನಿವೇಶ ಬಂದಿತು. ಯಾವ ಔಷಧ ನುಂಗಿದರೂ ಗುಣವಾಗಲಿಲ್ಲ. ಯಾವ ಸೊಪ್ಪು ಸವಿದರೂ ಸರಿಯಲಿಲ್ಲ. ಲಿಂಗಯ್ಯನನ್ನು ಅಂಗಲಾಚಿ ಯಾಚಿಸಿದರೂ ಇಳಿಯಲಿಲ್ಲ. ಆದರೂ ಪೂಜಾವಿಧಿಗೆ ಅನುಷ್ಠಾನದ ಮಡಿಗೆ ಭಂಗ ಬರಕೂಡದು. ಅದಕ್ಕಾಗಿ ಪ್ರತಿನಿತ್ಯ ಮೂವತ್ತು ಸಲ ಸ್ನಾನ ಆರಂಭಿಸಿದ. ಅದೂ ಕೂಡ ಬಾವಿಯ ನೀರು. ತಣ್ಣೀರು. ಅಲ್ಲದೇ ಮತ್ತೊಬ್ಬರು ಮುಟ್ಟುವಂತಿಲ್ಲ. ತಾನೇ ನೀರು ಜಗ್ಗಬೇಕು. ಇಂಥ ಸಮಯದಲ್ಲಿ ಹೊಟ್ಟೆಗೆ ಏನೂ ಹಾಕುವಂತೆಯೇ ಇಲ್ಲ. ಹಾಕಿದ್ದೆಲ್ಲ ಕಿತ್ತು ಹೋಗುವದು. ಅತ್ತ ಭಿಕ್ಷೆಗೆ ಹೋಗಲೂ ಅಸಾಧ್ಯವಾಯಿತು. ಕಾಲು ಸತ್ವಹೀನವಾದವು. ಹೊಟ್ಟೆ ಬೆನ್ನಿಗೆ ಹತ್ತಿತು.

ಶಿವನಿಗೆ ನಗೆಯಾಟವಾಯಿತು. ಅನೇಕ ಗಣರು ಆತನಿಗೆ ಅಂಗಲಾಚಿ ಬೇಡಿರಬೇಕು. ಪಾರ್ವತಿಯು ಹೆಣ್ಣ ಕರುಳು ಅರಳಿ ಪತಿದೇವರಿಗೆ ಕೇಳಿರಬೇಕು. ಆದರೆ ಆ ಪುಣ್ಯಾತ್ಮ ಯಾರಿಗೂ ಮಣಿಯಲಿಲ್ಲ. ಆತ ಶರಣರ ಶರಣನಲ್ಲವೇ? ಕರಡೆಪ್ಪ ಶರಣರಿಗಾದ ಅತೃಪ್ತಿ ಆವನನ್ನು ಕೆಣಕದೇ ಬಿಟ್ಟೀತೆ? ಅಲ್ಲದೆ; ಲೋಕ ಕಲ್ಯಾಣವೇ ನಿಂತುಹೋದರೆ ಆತ ಸಹನೆ ತಾಳಿಯಾನೆಯೇ?

ಮುಗಿಯಲಿಲ್ಲ! ಮತ್ತೆ ಹೆಚ್ಚಾಯಿತು!! ಈಗ ಮೂವತ್ತು ನಾಲ್ವತ್ತಕ್ಕೇರಿತು!!! ಇನ್ನೇನು ಕೇಳುವದು? ಮುಳೆಯಪ್ಪಾರ್ಯ ದಿನಕ್ಕೆ ಹತ್ತು ಸಲ ಮೂರ್ಛೆಹೋಗಹತ್ತಿದ. ಅನೇಕ ಸಲ ನೀರು ಸೇದುತ್ತಲೇ ಮೂರ್ಛೆ ಬಂದು ಬಿದ್ದಾಗ, ತುಂಬಿದ ಕೊಡ ಗಡಗಡೆಯಿಂದ ಗರ್ರನೇ ಮರಳಿ ಬಾವಿಯ ನೀರಿಗೆ ಜರಿದು ಕೈಯಲ್ಲಿದ್ದ ಹಗ್ಗ ಕೊಸರಿ ರಕ್ತವಾಯಿತು, ಚರ್ಮ ಸುಲಿಯಿತು.

ಒಮ್ಮೆ ಹಿಂಜೋಲಿಯಿಂದ ಉರುಳಿ ತಲೆಗೆ ಬಲವಾದ ಪೆಟ್ಟು ತಾಕಿತು. ಗುಣ ಪಡಿಸಲು ವೈದ್ಯರೆಲ್ಲಾ ಮುಗಿದರು. ಅವರು ತಮ್ಮ ಔಷಧದ ಬಗ್ಗೆ ತಾವೇ ಸಂಶಯಪಡುವಂತಾಯಿತು. ತಮ್ಮ ಪಾಂಡಿತ್ಯದ ಬಗ್ಗೆ ತಾವೇ ನಾಚುವಂತಾಯಿತು. ದಿನನಿತ್ಯ ನಲ್ವತ್ತು ಸಲ ಸ್ನಾನ! ಉಗ್ರನಿಷ್ಠೆ ಮುಟ್ಟಬಾರದ ಸೀಮೆಯನ್ನು ಮುಟ್ಟಿ ನೂರು ಹೆಜ್ಜೆ ಮುಂದೆ ಹೋಯಿತು, ಶಿವಪೂಜೆ ನಿಲ್ಲಲಿಲ್ಲ. ಶಿವಧ್ಯಾನ ಇಳಿಯಲಿಲ್ಲ.

ಒಂದೆರಡು ದಿನ ಮಾತ್ರ ಕಳೆದಿರಬಹುದು. ಈಗ ನಾಲ್ವತ್ತು ಐವತ್ತಕ್ಕೇರಿತು! ಐವತ್ತು ಸಲ ಹೊಟ್ಟೆ ಮುರಿದು ರಕ್ತ-ಕೀವ ಹ್ರಾಸವಾದರೆ ಯಾರು ತಾನೇ ಉಳಿಯಬಲ್ಲರು? ಕೇವಲ ನಿತ್ರಾಣವಾಯಿತು, ಸ್ನಾನ ನಿಂತಿತು. ಪೂಜೆ ಜಾರಿತು. ಜಪ ತಗ್ಗಿತು. ಅನುಷ್ಠಾನ ಹಳ್ಳಕೂಡಿತು. ದೇಹ ಹಾಸಿಗೆಗೆ ಒರಗಿಕೊಂಡು ಕೊನೆಯುಸಿರು ಬಿಡುವಂತಾಯಿತು. ಜೊತೆಗೆ ನೂರಾರು ಸಲ ತಣ್ಣೀರಿನ ಸ್ನಾನ ಮಾಡಿದ್ದರಿಂದ ಭಾರೀ ಪ್ರಮಾಣದ ಶೀತ ಬಾಧಿಸಿತು. ಮೈಯೆಲ್ಲಾ ಬರ್ಫವಾಯಿತು. ಎದೆಯಲ್ಲಿ ಕಫ ಬಿಗಿಯಿತು. ಗಂಟಲಲ್ಲಿ ಕೆಮ್ಮು ಕೆರಳಿತು. ಇಡೀ ರಾತ್ರಿ ಜ್ವರ ಕಾಯಿತು. ಮಹಿಳೆಯಪ್ಪಾರ್ಯನಿಗೆ ಇಲ್ಲದ ದುಃಖ ಉಕ್ಕಿ ಬಂದಿತು. ಕಣ್ಣಲ್ಲಿ ನೀರು ಧಾರೆಯಾಗಿ ಹರಿದವು. ಆಗ ಆತ ತನ್ನ ಆತ್ಮವನ್ನು ತಾನೇ ಆಗೆದು ನೋಡಹತ್ತಿದ. ಅಂತರಂಗವನ್ನು ಆಳೆಯಹತ್ತಿದ. ತನ್ನಿಂದ ಪಾಪಗಳೇನಾದರೂ ಘಟಿಸಿವೆಯೋ ಎಂದು ಅತಿ ಸೂಕ್ಷ್ಮವಾಗಿ ಆಲೋಚಿಸಿದ. ತಕ್ಷಣವೇ ಆತನಿಗೆ ಶರಣರ ವಚನವೊಂದು ಶಿವಪ್ರೇರಣೆಯಿಂದ ಹೊಳೆಯಿತು—

"ಒಬ್ಬರ ಮನವ ನೋಯಿಸಿ, ಒಬ್ಬರ ಮನೆಯ ಘಾತವ ಮಾಡಿ, ಗಂಗೆಯ ಮುಳುಗಿದರೆ ಆಗುವದೇನಯ್ಯಾ? ಚಂದ್ರನು ಗಂಗೆಯ ತಡಿಯಲ್ಲಿದ್ದರೇನು ಕಲಂಕ ಬಿಡದಾಯಿತ್ತಯ್ಯಾ! ಅದು ಕಾರಣ, ಮನವ ನೋಯಿಸದವನೇ, ಮನೆಯ ಘಾತವ ಮಾಡದವನೇ ಪರಮ ಪಾವನ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ."

ವಚನ ಸ್ಫುರಿಸಿತು! ವಚನ ಗರ್ಭಕ್ಕೆ ಧುಮುಕಿ ತನ್ನನ್ನು ತಾನೇ ವಿಶ್ಲೇಷಿಸಿದ. ನಾನು ಯಾರ ಮನವ ನೋಯಿಸಿದ್ದೇನೆ? ಯಾರ ಮನೆಯ ಘಾತವನ್ನು ಮಾಡಿದ್ದೇನೆ?—ಎಂಬ ಆತ್ಮ ನಿರೀಕ್ಷಣೆ ಅರುಹಿನ ಬೆಟ್ಟಕ್ಕೆ ಹಾರಿತು

ಕೊನೆಗೆ ತಾನು ಯಾರದೋ ಮನವನ್ನು ನೋಯಿಸಿದ್ದೇ ನಿಜವಿರಬೇಕೆಂದು ಚಿಂತಿಸುವಷ್ಟರಲ್ಲೇ, ಕರಡೆಪ್ಪನವರ ಚಿಂತಾಮಗ್ನ ಮೂರ್ತಿ ಎದುರಿಗೇ ಮೂಡಿ, ಕೈಮುಗಿದು, ಶರಣೆಂದು ಮರೆಯಾದಂತಾಯಿತು. ಛಕ್ಕನೇ ಈತನ ಎದೆಗೆ ಎಂಬತ್ತು ಚೇಳುಗಳು ಕುಟುಕಿದಂತಾಯಿತು. ಕರಡೆಪ್ಪನವರ ನಿಷ್ಕಾಮ ಭಕ್ತಿ, ನಿಸ್ಸೀಮ ಪ್ರೇಮ, ಮಧುರ ವಾತ್ಸಲ್ಯಗಳು ಬೇಸಿಗೆ ಕಾಲದ ಜೇನುತುಪ್ಪ ಜೇನುಗೂಡಿನಿಂದ ಉಕ್ಕೇರಿ ಹೊರಚಲ್ಲುವಂತೆ ಹೊರಚೆಲ್ಲಿದವು. "ಅಯ್ಯೋ ನಾನು ಕರ್ತವ್ಯ ಚ್ಯುತನಾಗಿದ್ದೇನೆ. ಮುಗ್ಧ ಶರಣನ ಬೇಡಿಕೆಗೆ ಬೇಡವೆಂದು ಹೇಳಿದ್ದೇನೆ" ಎಂದು ಮಳೆಯಪ್ಪಾರ್ಯ ಮಳೆಗಾಲದ ಮೋಡದಂತೆ ಕಣ್ಣೀರು ಕಾವಲಾಗಿ ಸುರಿಸಿ, ಎದೆಯು ಬಟ್ಟಲ ಬರಿದು ಘಾಡುವಂತೆ ದುಃಖಿಸಿದ.

ಮಳೆಯಪ್ಪಾರ್ಯ ಆತ್ಮ ಸರೋವರಕ್ಕಿಳಿದು ಆತ್ಮಾವಲೋಕನವನ್ನು ಮಾಡತೊಡಗಿದ– "ಇನ್ನು ನನಗಿರುವವು ಎರಡೇ ಮಾರ್ಗ. ಈ ಅಪಾರ ಬೇನೆಯಿಂದ ನನ್ನ ಆಚಾರಧರ್ಮವು ಕೊಚ್ಚಿಹೋಗುವದನ್ನು ಕಣ್ಣಿನಿಂದ ನೋಡಬೇಕು. ಇಲ್ಲವೇ ಚಿತ್ತರಗಿಯ ನಿರಂಜನ ಪೀಠದ ಆರೋಹಣಕ್ಕೆ ಸಿದ್ಧನಾಗಬೇಕು. ಒಂದರಲ್ಲಿ ಕತ್ತಲೆ ಇದೆ, ಇನ್ನೊಂದರಲ್ಲಿ ಜ್ಞಾನವಿಮಾನವಿದೆ. ಒಂದರಲ್ಲಿ ಯೋಗಪತನವಿದೆ, ಇನ್ನೊಂದರಲ್ಲಿ ಯೋಗ ನಿಕೇತನವಿದೆ. ಒಂದು ವಿಷಮಾರ್ಗ. ಇನ್ನೊಂದು ಚೇತೋಹಾರಿಯಾದ ನಿಜಗುಣಮಾರ್ಗ. ಹಾಗಾದರೆ ತಡವೇಕೆ? ಭಗವಂತನೇ, ಜ್ಞಾನಯೋಗವನ್ನು ಮೆಚ್ಚಿ ಕರ್ಮಯೋಗವನ್ನು ಕೈಬಿಟ್ಟಿದ್ದೆ. ಅಂತರಾತ್ಮನಾದ ಪರಂಜ್ಯೋತಿ ಸ್ವರೂಪ ತಂದೆಯೇ, ಇಂದು ನೀನು ಶಿವಯೋಗದ ಸಂಪೂರ್ಣ ಜ್ಞಾನವನ್ನು ನನಗೆ ಕರುಣಿಸಿದೆ. ಶಿವಯೋಗವೆಂದರೆ ಜ್ಞಾನಯೋಗವೆಂದೇ ನಾನು ತಿಳಿದು ಮೂಢನಾಗಿದ್ದೆ. ಅದರಲ್ಲಿ ಕರ್ಮಯೋಗವೂ ಇದೆ. ಭಕ್ತಿಯೋಗವೂ ಇದೆ. ಅದರಲ್ಲಿ ದ್ವೈತವೂ ಇದೆ, ಅದ್ವೈತವೂ ಇದೆ. ಇಂದು ನನಗೆ ಅಂತರಾತ್ಮದ ನಿಜ ಪ್ರಕಾಶವನ್ನು ನೀಡಿದೆ. ಜೀವನ ಧರ್ಮದ ಸವ್ಯಸಾರವನ್ನು ಅರುಹಿದೆ. ಅನುಭಾವದ ತೊಟ್ಟಿಲ ಕಟ್ಟಿ, ವೈರಾಗ್ಯ ಜೋಗುಳ ಹಾಡಿ, ಕೈವಲ್ಯದ ಶಿಶುವನ್ನು ತೂಗಿದೆ. ಧನ್ಯನಾದೆ ತಂದೆಯೇ ಧನ್ಯನಾದೆ. ಇಂಥ ದಿವ್ಯ ಜ್ಞಾನವನ್ನು ನೀಡಬಲ್ಲ ಶಿಕ್ಷೆಯನ್ನು ಇದೊಂದು ಬಾರಿ ಏಕೆ – ನೂರು ಬಾರಿ ನೀಡು,

ಆದರೆ ನಿರಂತರ ನಿನ್ನ ಕರುಣಾ ಪ್ರಸಾದ ನನ್ನ ಮೇಲಿರಲಿ. ನೀನು ನಾನಾಗಲಿ ನಾನು ನೀನಾಗಲಿ. ಉಭಯವಳಿದು ಕೈವಲ್ಯ ಕೈವಲ್ಯವಾಗಲಿ. ಚಿತ್ತರಗಿಯು ಸ್ವಯಂಜ್ಯೋತಿ ಮಹಾಪ್ರಭೆ ಜಗನ್ಮಯವಾಗಿ, ವಿಶ್ವತೋ ಮುಖವಾಗಿ, ಬ್ರಹ್ಮಾಂಡ ಬಾಹುವಾಗಿ, ಪಿಂಡಾಂಡ ಪೂರ್ಣವಾಗಿ ತುಂಬಲಿ....ತುಳುಕಲಿ.... ಹೊಳೆಗಟ್ಟಿ ಹರಿಯಲಿ....ಶಿವಸಾಗರವನ್ನು ಸೇರಲಿ. ಚಿತ್ತರಗಿ ನನ್ನ ಆತ್ಮದ ಉಸಿರು. ನನ್ನ ಅಂತರಂಗದ ಕಣ್ಣು, ಅರುಹಿನ ಕಲಶಾರತಿ, ಪ್ರೇಮದ ಪಂಚಾರತಿ. ನನ್ನ ರೋಮರೋಮವೆಲ್ಲಾ ಚಿತ್ತರಗಿಗೆ ಮೀಸಲು. ನನ್ನ ಭಾವ ನಿರ್ಭಾವಗಳೆಲ್ಲಾ ಚಿತ್ತರಗಿಗೆ ಮೀಸಲು. ಇನ್ನು ಚಿತ್ತರಗಿಯೇ ನನ್ನ ಬಾಳಿನ ಚೈತ್ಯಾಕ್ಷಿ. ಹಾಽ....ಚಿತ್ತರಗಿಯೇ.... ನಿನ್ನ ಮರೆತು ಕುರುಡಾದೆ! ಹಾಽಽ....ಚಿತ್ತರಗಿಯೇ....ನಿನ್ನ ಮರೆತು ಬರಡಾದೆ!! ಹಾಽಽಽ....ಚಿತ್ತರಗಿಯೇ ನಿನ್ನ ಮರೆತು ಕೊರಡಾದೆ!!! ಚಿತ್‌ಶಕ್ತಿಯ ಚಿಜ್ಜ್ಯೋತಿಯೇ ಚಿತ್ತರಗಿಯೆಂದು ಇಂದು ತಿಳಿದೆ. ಇಂದು ಉಳಿದೆ. ಇಂದು ಬಾಳಿದೆ, ಇಂದು ಬದುಕಿದೆ. ಓಽಽ ...ಬಂದೆ....ಬಂದೆ....ಬಂದೆ....! ಓಽಽ....ಚಿತ್ತರಗಿಯೇ.... ನಿನ್ನ ಕೂಗು ಕೇಳಿತು....ಕೇಳಿತು....!! ಓ....ಓ....ಓ.. ಇದೋ....ಇದೋ ಬಂದೇ....ಬಂದೇೕ.. .ಬಂದೇೕೕ !!!

ತರುಣ ಶಿವಯೋಗಿಯ ಮಾತು ಸತ್ಯವನ್ನೇ ಕಾಣಿಸಿತು. ಉದರವ್ಯಾಧಿ ಶಾಂತವಾಯಿತು. ಶೀತ ದೂರಾಯಿತು. ಚಿತ್ತರಗಿಯ ಪೀಠ ಕುಣಿದಾಡಿತು. ಪೀಠದ ಐವತ್ತೈದು ಮಠಗಳು; ಹೊಸ ಯುಗ, ಹೊಸ ಜೀವನದ, ಹೊಸ ಯೋಗಿಯ ಅವತಾರಕ್ಕೆ ಪಂಚಾರತಿಯನ್ನು ಹಿಡಿದು ನಿಂತವು!

# ಇಲಕಲ್ಲಿಗೆ ವಸಂತಯಾತ್ರೆ

ಮಧ್ಯರಾತ್ರಿ ಜಾರಿದೆ.

ಸುಂದರ ಪ್ರಾತಃಕಾಲದ ಸಮಯ. ಅಮರಾವತಿ ಪಟ್ಟಣದ ವೈಭವದ ಅರಮನೆ. ಅರಮನೆಯಲ್ಲೊಂದು ಒಳಮನೆ. ಒಳಮನೆಯಲ್ಲೊಂದ ಅಂತಃಪುರ. ಅಂತಃಪುರದಲ್ಲೊಂದು ಶಯ್ಯಾಗೃಹ. ಶಯ್ಯಾಗೃಹದಲ್ಲೊಂದು ಭಾರೀಗಾತ್ರದ ಮಂಚ, ಆ ಮಂಚದ ಮೇಲೆ ಕಣ್ಣರಳಿಸಿ ನೋಡಿದರೆ ರಾಮಪ್ಪ ದೇಸಾಯಿ ವೈಭವದಿಂದ ಮಲಗಿದ್ದಾನೆ.

ಅದೊಂದು ಕನಸು. ಸುಂದರ ಕನಸು. ರಾಮಪ್ಪ ದೊರೆ ಆಸ್ಥಾನದ ಸಿಂಹಪೀಠದ ಮೇಲೆ ಕುಳಿತಿದ್ದಾನೆ. ಅನೇಕ ಜ್ಯೋತಿಷಿಗಳನ್ನು ಬರಮಾಡಿ ಕೊಂಡಿದ್ದಾನೆ. ಚಿತ್ತರಗಿ ನಿರಂಜನ ಪೀಠದ ಅಧಿಪತ್ಯದ ಬಗ್ಗೆ ಆತುರವಾಗಿ ಅವನು ಕೇಳುತ್ತಿದ್ದಾನೆ. ಆಗ ಅವನು ಮಾರುತ್ತರವಾಗಿ ಸಮಸ್ಯೆಯೆಲ್ಲ ಸಂಪೂರ್ಣ ಪರಿಹಾರವಾಗಿದೆಯೆಂದು ಹೇಳುತ್ತಿದ್ದಾರೆ. ಆತನಿಗೆ ಅಚ್ಚರಿಯಾಗುತ್ತದೆ. ಮತ್ತೆ ಜ್ಯೋತಿಷಿಗಳಿಗೆ ಕೇಳುತ್ತಾನೆ—

'ಜೋಯ್ಸರೇ,ಸಮಸ್ಯೆ ಪರಿಹಾರವಾಗಿದೆಯೆಂದು ಹೇಳಿದಿರಿ. ಅದುಹೇಗೆ?'

'ಅದು ದೇಸಾಯರೆ. ಪರಿಹಾರವಾಗಿದೆಯೆಂದು ಗ್ರಹಸೂಚನೆ ಇದೆ'

'ಹೌದು ಹೇಗೆ? ನಾನು ಬೇಡಿದ ಶಿವಯೋಗ ಚಿತ್ತರಗಿ ಪೀಠದ ಅಧಿಪತ್ಯಕ್ಕೆ ಸಂಪೂರ್ಣ ನಿರಾಕರಿಸಿದ್ದಾನೆ'

'ನಮಗೂ ತಿಳಿಯದು ರಾಮಪ್ಪನವರೆ! ಆದರೆ ಗ್ರಹಬಲ ಮಾತ್ರ ಬಲವಾಗಿದೆ. ಅನುಕೂಲವೇ ಇದೆ'

'ಇದೇನು ವಿಚಿತ್ರ!' ಎಂದು ರಾಮಪ್ಪ ದೊರೆ ಮನದಲ್ಲೇ ಶಂಕಿಸುತ್ತಿರುವಾಗ ಮಹಾದ್ವಾರ ಪಾಲಕ ಬಂದು ಹೇಳಿದ—

'ಧಣಿರಾಯರೇ, ಸಕ್ರಿಕರಡೆಪ್ಪನವರೆಂಬ ಸಾವುಕಾರರು ತಮ್ಮನ್ನು ಭೆಟ್ಟಿಯಾಗಲು ಬಂದಿದ್ದಾರೆ. ಬಳ್ಳಾರಿಯವರಂತೆ.'

ಮಾತು ಕೇಳಿದೊಡನೆಯೇ ರಾಮಪ್ಪದೊರೆ ಪೀಠದಿಂದ ಥಟ್ಟನೇ ಎದ್ದು ಅವರನ್ನು ಗೌರವದಿಂದ ಬರಮಾಡಿಕೊಂಡು, ಪಕ್ಕದ ಪೀಠದ ಮೇಲೆ ಕುಳ್ಳಿರಿಸಿದ ಉತ್ಸಾಹದಿಂದಲೇ ಕೇಳಿದ....

'ಕರಡೆಪ್ಪನವರೇ ಆರೋಗ್ಯವಾಗಿದ್ದೀರಾ?'

'ಹುಂ, ನನ್ನ ಆತ್ಮ ಆರೋಗ್ಯವಾಗಿದೆ'

'ಹೆಂಡತಿ, ಮಕ್ಕಳು?'

'ಆರೋಗ್ಯವಾಗಿ ಇದ್ದಿರಬಹುದು. ಬಹುದಿನಗಳಿಂದ ಅವರ ಭೆಟ್ಟಿ ಇಲ್ಲ'

'ಏಕೆ?'

'ಶಿವನಿಚ್ಛೆ'

'ಹಾಗಾದರೆ ತಾವು ಎಲ್ಲಿಂದ ಬಂದಿರಿ?'

'ಶಿವಲೋಕದಿಂದ!'

ರಾಮಪ್ಪ ದೊರೆಗೆ ವಿಚಿತ್ರವೆನಿಸಿತು. ಸ್ವಲ್ಪ ತಡವರಿಸಿ ಕೇಳಿದ—

'ಈಗ ತಾವು ಬಂದ ಕಾರಣ?'

'ಅದನ್ನೇ ಹೇಳಬೇಕೆಂದಿದ್ದೆ'

'ದಯವಿಟ್ಟು ಹೇಳಬೇಕು'

'ತಾವು ಚಿತ್ತರಗಿ ಪೀಠದ ಬಗ್ಗೆ ಒಬ್ಬ ಯೋಗ್ಯ ಶಿವಯೋಗಿಗಳನ್ನು....'

'ಹಾಂ, ಹೌದು ಕೇಳಿದ್ದೆ. ಅದೇ ಚಿಂತೆಯಲ್ಲೇ ಈ ಜ್ಯೋತಿಷಿಗಳನ್ನು ಕರೆಸಿದ್ದು. ಏನಾಯಿತು? ಏನು ಸಮಾಚಾರ?'

'ಈಗ ಅವರು ಚಿತ್ತರಗಿ ಶೂನ್ಯಪೀಠ ಏರಲು ಒಪ್ಪಿದ್ದಾರೆ. ಕರೆ ತನ್ನಿರಿ'

'ಹಾಂ? ಒಪ್ಪಿದರೆ? ಅದು ಹೇಗೆ?'

'ಒಪ್ಪಬೇಕಾಯಿತು ಎನ್ನಿ. ಹಾಗೆ ಶಿವ ಅವರಿಗೆ ತೊಡರು ತಂದ'

'ಆಗಲಿ. ಇಂದು ನನಗೆ ಎಳದೆಂಗಿನ ಹಾಲು ಕುಡಿದು ಬೆಲ್ಲ ತಿಂದಂತಾಯಿತು. ಈಗೆಲ್ಲಿದ್ದಾರೆ ಆ ಪೂಜ್ಯರು?'

'ನರೇಗಲ್ಲಿನಲ್ಲಿ'

'ಆಗಲಿ ಮಹಾರಾಯರೆ, ಇಂದೇ ಹೋಗಿ ಕರೆತರುತ್ತೇನೆ'

'ಇಂದೇ ಹೋಗಿರಿ. ತಡಮಾಡಬೇಡಿರಿ. ಶುಭಸ್ಯ ಶೀಘ್ರಂ'

'ಶೀಘ್ರವಾಗಿಯೇ ನಡೆಯುತ್ತೇನೆ. ತಮ್ಮ ಅಪ್ಪಣೆ'

'ಆಗಲಿ. ನಾನಿನ್ನು ಬರುತ್ತೇನೆ.'

'ಇದೇಕೆ ಈ ಮಾತು ಕರಡೆಪ್ಪನವರೆ? ನಿಮ್ಮ ಮನೆಗೆ ನಾನು ಬಂದಾಗ ಹೋಳಿಗೆ ಸೀಕರಣೆ ಊಟ ಹಾಕಿದಿರಿ. ನಮ್ಮ ಅರಮನೆಯಲ್ಲಿ ನಿಮಗೆ ಅಂಬಲಿಯೂ ಬೇಸರವೇ?'

'ಬೇಸರವಲ್ಲ ರಾಮಪ್ಪನವರೇ. ನಾನು ಆಗಿನಂತೆ ಈಗಿಲ್ಲ'

'ಅಂದರೆ?'

'ನಿಮಗೆ ತಿಳಿಯದೇ?'

'ಏನು?'

'ಈಗ ನಾನು ಊಟವಾದರೂ ಹೇಗೆ ಮಾಡಬೇಕು?'

'ಅಂದರೆ?....ಬಿಚ್ಚಿ ಹೇಳಬಾರದೇ?'

'ಈಗ ನಾನು ಇಲ್ಲಿಯವನಲ್ಲ'

'ಆಂ?'

'ಹೌದು, ಈಗ ಅಲ್ಲಿದ್ದೇನೆ'

'ಎಲ್ಲಿ?'

'ಅಲ್ಲಿ!'

—ಎಂದು ಮೇಲೆ ಬೆರಳು ಮಾಡಿ ತೋರಿಸಿದರು. ಅಲ್ಲೊಂದು ತಪಸ್ವಿಗಳ, ಸಿದ್ಧರ, ಶರಣರ, ಸಾತ್ವಿಕರ ವೈರಾಗ್ಯ ಲೋಕವೇ ಕಂಡಿತು! ಕರಡೆಪ್ಪನವರು ತಾವು ಬೆರಳು ತೋರಿಸುತ್ತ ಮೇಲೇರಿ ಹೋದರು. ರಾಮಪ್ಪ ದೊರೆ ಗಟ್ಟಿಯಾಗಿ ಅವರನ್ನು ಕೂಗುತ್ತ—"ಕರಡೆಪ್ಪನವರೆ,ಕರಡೆಪ್ಪನವರೇ, ಕರಡೆಪ್ಪನವರೇ ನಿಲ್ಲಿರಿ ನಿಲ್ಲಿರಿ ನಿಲ್ಲಿರಿ' ಎಂದು ಕೈಮಾಡಿ ಕರೆದರು. ಕರೆಯು ತ್ತಲೇ ಎಚ್ಚರವಾಯಿತು! ಇವರ ಬಡಬಡಿಕೆಯ ಕೂಗನ್ನು ಕೇಳಿ ಎಚ್ಚತ್ತ ಅವರ ಪಕ್ಕದಲ್ಲಿ ಮಲಗಿದ ಪತ್ನಿ – 'ಹುಂ. ಇದೇನು ನಿಮ್ಮ ಕನಸು? ಹುಷಾರಾಗಿರಿ. ಯಾರನ್ನು ಕರೆದಿರಿ? ಏನು? ಏನು ? " – ಎಂದು ಕೇಳಿದಳು.

ನಡೆದ ವೃತ್ತಾಂತವನ್ನೆಲ್ಲ ರಾಮಪ್ಪ ದೊರೆ ಶ್ರೀಮತಿಗೆ ಅರುಹಿದ. ಅವಳೂ ಆಹ್ಲಾದಿಸಿದಳು. "ಹುಂ. ತಡವೇಕೆ? ಶಿವಪ್ರೇರಣೆಯಾಗಿದೆ.

ಇಂದೇ ಹೊರಡಿರಿ ನರೇಗಲ್ಲಿಗೆ" ಎಂದಳು. ರಾಮಪ್ಪ ದೊರೆ ಉತ್ತರಿಸಿದ "ಶಿವಪ್ರೇರಣೆಯೂ ಆಯ್ತು. ಶ್ರೀಮತಿಯವರ ಪ್ರೇರಣೆಯೂ ಆಯ್ತು. ಇಂದೇ ಹೊರಟೆ."

ಪ್ರಯಾಣ ಪ್ರಾರಂಭವಾಯಿತು. ಪ್ರಾತಃಕಾಲದ ಪೂಜೆ-ಪ್ರಸಾದ ಅಲ್ಪಕಾಲಾವಧಿಯಲ್ಲೇ ಮುಗಿದಿದ್ದವು. ಇವರ ರಥ ವೇಗಶಾಲಿಗಳಾದ ಕುದುರೆಗಳ ನಾಗಾಲೋಟದಿಂದ ಸಾರೋಟ ಹೊರಟಿತು. ದೊರೆಸಾನಿ ಕಟ್ಟಿಕೊಟ್ಟ ಮೊಸರುಬುತ್ತಿಯು ಮಧ್ಯಾಹ್ನದ ಹಸಿವೆಯನ್ನು ಹಿಂಗಿಸಿತು.

ನರೇಗಲ್ಲು ಬಂತು. ದೊರೆಗಳ ರಥವೆಂದರೆ ಕೇಳಬೇಕೆ? ಇಡೀ ಊರಿಗೆ ಊರೇ ನೆರೆಯಿತು. ರಾಮಪ್ಪ ದೊರೆ ನೇರವಾಗಿ ಮಳೆಯಪ್ಪಾರ್ಯರ ಪರಿಚಯ ಕೇಳಿ ಅವರ ಹುಲ್ಲು ಗುಡಿಸಲಿಗೆ ರಾಜರಥವನ್ನು ಸಾಗಿಸಿದ.

ರಾಮಪ್ಪ ದೊರೆಯ ಬರವನ್ನೇ ಕಾದು ಕುಳಿತಂತೆ, ತರುಣಶಿವಯೋಗಿ ದ್ರಾಕ್ಷೆ ತೋಟದ ಪಕ್ಕದ ಬನ್ನಿಯ ಮರದ ಕೆಳಗೆ ಶಿಲಾಪೀಠದ ಮೇಲೆ ಮಂಡಿಸಿದ್ದಾನೆ. ಸಂಜೆಯಾಗಸದ ಕೆಂಪು ಕಿರಣಗಳು ಆತನ ಭಸ್ಮಕ್ಕೆ ಕೆಂಪು ಪರಾಗ ಲೇಪಿಸಿವೆ. ಲಿಂಗದ ಕಾವಿ ವಸ್ತ್ರ ಇನ್ನೂ ದಟ್ಟವಾಗಿ ಶೋಭಿಸಿದೆ. ಶುದ್ಧ ಶ್ವೇತವರ್ಣದ ಕಫನಿ ಮಾತ್ರ ಶರೀರವನ್ನು ಮುಚ್ಚಿದೆ. ಗಡ್ಡ-ಮೀಸೆ-ಜಟೆಗಳು ಲಿಂಗಬಣ್ಣದಂತೆ ಕಾಡಿಗೆಗಪ್ಪಾಗಿವೆ. ರೇಶಿಮೆಯಂತೆ ನಯವಾಗಿವೆ. ಹಣೆಯಲ್ಲಿ ತುಂಬ ಭಸ್ಮ ಸುಸ್ಪಷ್ಟವಾಗಿದೆ. ಹರವಾದ ಎದೆಯಲ್ಲಿ ನಿಂತ ತೇರಿನಂತೆ ಲಿಂಗವಸ್ತ್ರದ ಚಾಚು ಎದ್ದು ಕಾಣುತ್ತಿದೆ. ಬೇನೆಯಿಂದಾದ ಹೊಟ್ಟೆ ಜಾಡಿಸುವಿಕೆ ನಿಂತು ಒಂದೆರಡು ದಿನ ಮಾತ್ರವಾಗಿದೆ. ಕಾರಣ ದೇಹ ನಿಶ್ಶಕ್ತವಾಗಿದೆ. ಆದರೆ ಕಾಂತಿ ಎಂದಿನಂತೆ ರಾರಾಜಿಸಿದೆ.

ರಾಮಪ್ಪ ದೇಸಾಯಿ ಒಂದವನೇ ಸುದೀರ್ಘ ದಂಡನಮಸ್ಕಾರವನ್ನು ಹಾಕಿದ. ಮಳೆಯಪ್ಪಾರ್ಯ ಸ್ವಾಗತಿಸುತ್ತ ಹೇಳಿದ—

"ಬನ್ನಿ ದೇಸಾಯರೆ ಬನ್ನಿ, ನಿಮ್ಮ ದಾರಿಯನ್ನೇ ನೋಡುತ್ತ ಕುಳಿತಿದ್ದೆ"

ಈ ಮಾತು ಕೇಳಿ ದೇಸಾಯಿ ತಬ್ಬಿಬ್ಬಾಗಿ ಹೋದ. ಇವರಿಗೆ ನಾನೆಲ್ಲಿ

ತಿಳಿಸಿದೆ? ನನ್ನ ಬರುವಿಕೆ ಇವರಿಗೆ ಹೇಗೆ ಗೊತ್ತಾಯಿತು? ಎಲ್ಲವೂ ಅವನನ್ನು ದಿಗಿಲುಗೊಳಿಸಿದವು. ಮಳೆಯಪ್ಪಾರ್ಯ ದೊರೆಯನ್ನು ಗೌರವದಿಂದ ಕುಳ್ಳಿರಿಸಿ ಮತ್ತೆ ಕೇಳಿದ—

'ಏನು ? ತಮ್ಮನ್ನು ಕರಡೆಪ್ಪನವರು ಕಳಿಸಿದಂತೆ ಕಾಣುತ್ತದೆ.'

ಈಗಂತೂ ದೇಸಾಯಿ ಹೌಹಾರಿಹೋದ, ತಾನು ಇನ್ನೂ ಕನಸಿನಲ್ಲೇ ಇದ್ದೇನೆಂದು ಅವನಿಗೆ ಸಂಶಯವಾಯಿತು. ರೆಪ್ಪೆ ಪಟಪಟನೇ ಬಡೆದು, ಇದು ಕನಸೋ ನನಸೋ ಎಂಬುದನ್ನು ಪರೀಕ್ಷೆ ಮಾಡಿ ನೋಡಿದ. ಕನಸಲ್ಲವೆಂದು ಅರಿತು ಮೆಲ್ಲನೇ ಹೇಳಿದ—

'ಹೌದು ಬುದ್ಧಿ. ಆದರೆ....ತಮ್ಮ ಮಾತಿನಿಂದ ನನಗೇಕೋ-ಭಯವಾಗುತ್ತಿದೆ....'

'ಭಯವೆಲ್ಲಿಂದ ಬಂತು ದೇಸಾಯರೇ? ನಾನು ಕೇಳಿದ್ದು ತಪ್ಪೆ?'

'ಇಲ್ಲ ಬುದ್ಧಿ ಕರಡೆಪ್ಪನವರೇ ಕಳಿಸಿದರು. ಆದರೆ ಅವರು....'

'ಲಿಂಗೈಕ್ಯರಾಗಿದ್ದಾರೆ. ಅಷ್ಟೇ ತಾನೆ? ಮುಂದೇನು ಹೇಳಿ !

'ತಾವು ಮಹಾತ್ಮರು ! ನಾನು ಅಲ್ಪ.'

'ಓಹೋ, ಇದೇ ಏನು ನೀವು ಮುಂದೆ ಹೇಳುವ ವಿಷಯ. ನೀವು ಚಿತ್ತರಗಿ ಪೀಠದ ಬಗ್ಗೆ ಕೇಳಲು ಬಂದದ್ದನ್ನು ಮೊದಲು ಕೇಳಿ.'

ರಾಮಪ್ಪ ಮತ್ತೂ ಗಾಬರಿಯಾದ, ಈ ವ್ಯಕ್ತಿ ಭಾರೀ ಇದೆಯೆಂದು ನಡುಗಿದ, ಮೆಲ್ಲನೇ ಹೇಳಿದ—

'ಹೌದು ಬುದ್ಧಿ. ಆ ಪೀಠದ ಮೇಲೆ ತಮ್ಮ ಕರುಣೆ ಆಗಬೇಕು. ತಾವು ಅದನ್ನೇರಲು ದಯಮಾಡಿಸಬೇಕಾಗಿ ಎಲ್ಲ ಭಕ್ತರ ಪರವಾಗಿ ಬೇಡಿಕೊಳ್ಳುತ್ತೇನೆ:'

ತರುಣ ಶಿವಯೋಗಿ ನಕ್ಕು ಹೇಳಿದ—

'ರಾಮಪ್ಪನವರೆ, ಈಗ ನಾನು ಒಲ್ಲೆನೆಂದರೂ ನಡೆಯುವದಿಲ್ಲ.

ಕರಡೆಪ್ಪನವರು ಚನ್ನಾಗಿ ಮುಗದಾಣ ಹಾಕಿಸಿದ್ದಾರೆ. ಎತ್ತನ್ನು ಎಳೆದು ಕೊಂಡು ಹೋಗುವದು ನಿಮಗೆ ಬಿಟ್ಟಿದೆ.'

'ಧನ್ಯನಾದೆ ಪ್ರಭು. ಧನ್ಯನಾದೆ ಗುರುವರ. ನನ್ನ ಕಿವಿಗಳು ಇಂದು ಸಾರ್ಥಕವಾದವು ಈ ಮಾತು ಕೇಳಿ.'

ಎಂದು ರಾಮಪ್ಪ ದೇಸಾಯಿ ದೀರ್ಘದಂಡ ನಮಸ್ಕಾರ ಒಂದಲ್ಲ; ಮೂರು ಬಾರಿ ಹಾಕಿದ!

ಮರುದಿನವೇ ದೇಸಾಯಿಯ ರಥ ಇಲಕಲ್ಲಿಗೆ ಓಡಿತು. ಅದರಲ್ಲಿ ಮಳೆಯಪ್ಪಾರ್ಯ ಜೀವನ ಯುದ್ಧವನ್ನು ಸಾರಿದ ಚಕ್ರವರ್ತಿಯಂತೆ ಮಂಡಿಸಿದ್ದ. ರಾಮಪ್ಪ ದೇಸಾಯಿ ಭಕ್ತಿ ಹಾಗೂ ನಮ್ರ ಭೀತಿಗಳ ಕಂಬಳಿ ಹೊದ್ದು ಕುಳಿತಿದ್ದ. ಆತನ ದೇಹದ ತೂಕ ಒಂದು ದಿನದಲ್ಲೇ ಏರಿಬಿಟ್ಟಿತ್ತು. ಇಲಕಲ್ಲಿಗೆ ಶಿವಯೋಗದ ವಸಂತಯಾತ್ರೆ ಸಾರಿತು!

# ಪಟ್ಟಾಭಿಷೇಕ

ಇಲಕಲ್ಲಿನ ತುಂಬ ಸುದ್ದಿ !

ಅನೇಕರ ಬಾಯಲ್ಲಿ ಅನೇಕ ರೀತಿಯ ಮಾತುಗಳು—

"ಮತ್ತೊಬ್ಬ ಸ್ವಾಮಿಗೋಳು ಬಂದಾರಂತ...."

"ಪಟ್ಟಕ್ಕೆ ಕಟ್ಟತಾರಂತ...."

"ಸಾದಗಪ್ಪ ಆದಾರಂತಬೇ...."

"ಹೌದು....ಕುಳ್ಳಗ ಬಳ್ಳಗತೆ ಹೊಳಿತಾರಂತ...."

"ಗಡ್ಡಾನೂ ಬಿಟ್ಟಾರಂತs ಯತ್ತೀ...."

"ಥೇಟ ಅಲ್ಲಮಪ್ರಭು ಕಂಡಂಗ ಕಾಣತಾರಂತವ್ವಾ...."

"ನೋಡಾಕ ಬ್ಹಾಳ ಉಗ್ರ ಅದಾರಂತವ್ವಾ...ನಮ್ಮ ಕಾಕಾ ಹೇಳಿದಾ"

"ಹೌದಂತ, ಅವರು ಬರೇ ಪೂಜಾನs ಮಾಡ್ಯಾರಂತs ಯಕ್ಕಾ...."

"ಹೌದಂತ,ಅದೆಂಥಾದ್ದೊ ಬೆಟ್ಟ ಅಂತ....ಅಲ್ಲಿ ತಪಸ್ಸು ಮಾಡ್ಯಾರಂತ"

"ಅಲ್ಲಂತಬೇ, ಬಳ್ಳಾರಿಯವರಂತ, ಅಲ್ಲೇ ಓದ್ಯಾರಂತ...."

'ಹಿಂಗೇನು? ಮೈಸೂರ ಕಡೀ ಅವ್ರು ಅಂತ ಯಾರs ಮಾತಾಡ್ತಿದ್ರು'

'ಊಹುಂ. ಸುಳ್ಳು. ಪೂರಾ ಹಕೀಕತ್ತು ನನಗೆ ಗೊತ್ತೈತಿ ಕೇಳ್ರಿ. ಅವ್ರು ನರೇಗಲ್ಲಿನವರಂತ....'

'ಛೀ....ಮಳ್ಳs....ಸುಳ್ಳು....ನರೇಗಲ್ಲದವ್ರು ಅಲ್ಲಾ....'

'ಹಿಂಗಾ? ಮತ್ತೆ ಅವರ ಹೆಸರ ಏನಂತ?'

'ಹೆಸರs....ಸ....ಸ....ಸ....ಸಸಿವಾಳಯ್ನೋರು ಅಂತ'

'ಸುಳ್ಳು-ಸುಳ್ಳುಬೇಯಕ್ಕಾ. ಸಸಿವಾಳ ಅವ್ರ ಊರಬೇ.... ಹೆಸರ ಹ್ಯಾಂಗ ಆದೀತು?'

'ಇದ್ದೀತು ಬಿಡು. ಪಟ್ಟಾ ಎಂದ ಕಟ್ಟತಾರಂತ?'

'ಇದs ವಾರಂತ'

'ಅಲ್ಲಾ ಆಲ್ಲಾ ಈ ವಾರಲ್ಲಾ....ಮುಂದಿನ ವಾರಂತ....'

'ಊಹುಂ. ಹಂಗೂ ಅಲ್ಲಾ.... ಇನ್ನೂ ಜೋತಿಸಾ ನೋಡಾಕ ಹತ್ಯಾರಂತ. ಹುನಗುಂದಕ್ಕ ಹೇಳಿ ಕಳಿಸ್ಯಾರಂತ. ಚಿತ್ತರಗಿಗೆ ಸುದ್ದೀ ಮುಟ್ಸ್ಯಾರಂತ. ಅವ್ರ ಎಲ್ಲಾರೂ ಬಂದಮ್ಯಾಲೆ ಖರೇ ಏನೆಂಬೂದು ಹೊಂಡತೈತಿ.'

'ಯಕ್ಕs, ಪ್ರಸ್ತಕ್ಕ ನೂರಹೇರ ಬೆಲ್ಲಾ ಕೂಡಿಸ್ಯಾರಂತಬೇ....'

'ಹಿಂಗs ತಂಗಿ....? ಹಂಗಾದ್ರ ಬ್ಹಾಳ ಚೊಲೊ ಆತ ಬಿಡು.'

'ಅಷ್ಟs ಅಲ್ಲ....ಗೋದಿ ಪಾಯ್ಸಕ್ಕ ಹತ್ತ ಕೊಪ್ಪರಗಿ ತರ್ಸ್ಯಾರಂತ....'

'ಕೇಳಿಲ್ಲೆ....ಬರೇ ಯಾಲಕ್ಕಿ ಒಂದ ಚೀಲ ಕೂಡ್ಯಾವಂತ'

'ಮಠದ ಹೌದಸ್ಯಾಗ ನಾಕ ಬಂಡಿ ತುಪ್ಪಾ ತುಂಬ್ಯಾರಂತವ್ವಾ'

'ಇಷ್ಟೆಲ್ಲಾ ಅಡಗೀ ಹ್ಯಾಂಗ ಮಾಡ್ತಾರಂತ?'

'ಆದೆಂಗ ಹೇಳಾಕ ಬರ್ತತಿ ನಮಗs! ಎಲ್ಲಾ ಗಂಡ್ಸೂರ್ಗೇ ಗೊತ್ತು.'

'ನಮ್ಮ ಊರ ನಶೀಬ ತೆರೀತು ಬಿಡು. ಎಂಥಾವ್ರ ಬರ್ತಾರೋ ಅಂತ ಕಂಗಾಲ ಆಗಿದ್ವಿ.'

'ಅಲ್ಲಾs, ಆ ಸ್ವಾಮಿಗೋಳ್ನ ಒಂದ ಸಲಾ ನೋಡೆರೆ ನೋಡಿ ಬರೂನು ನಡೀರೇ....?

'ಛೀ ಹುಚ್ಚೀ ಹೆಂಗ್ಸೂರ ದರ್ಶನನs ಇಲ್ಲಂತ ಅವ್ರಿಗೆ....'

'ಹಂಗಾದ್ರ ಬ್ಯಾಡಬಿಡವ್ವಾ. ನಮ್ಮಂತಾ ಪಾಪಿ ಕಣ್ಣು ಆ ಪರಮಾತ್ಮನ ಮ್ಯಾಲೆ ಯಾಕ ಹಾಕಬೇಕು....'

++ ++ ++

ಇಲಕಲ್ಲು ಚಿತ್ತರಗಿ ಪೀಠದ ಐವತ್ತಾರು ಮಠಗಳಿಗೆ ಕೇಂದ್ರ ಕಛೇರಿ. ಅತಿ ದೊಡ್ಡ ಮಠ. ಶ್ರೀಮಂತ ಶಿಷ್ಯರು. ಕೊಡುಗೈ ದೊರೆಗಳು. ಪಟ್ಟಾ

ಭಿಷೇಕ ಇಲ್ಲೇ ಆಗಬೇಕಾಗಿ ತರಾಯಿಸಲಾಯಿತು. ಆದರೆ ರಾಮಪ್ಪ ದೇಸಾಯಿ ಬಹಳ ಜಾಣ. ದುಡುಕುವವನಲ್ಲ. ಎಲ್ಲ ಮಠಗಳ ಹಾಗೂ ಗ್ರಾಮಗಳ ಸದ್ಭಕ್ತರ ಕಿವಿಯ ಮೇಲೆ ಈ ಮಾತು ಇಟ್ಟು, ಪಟ್ಟ ಹಾಗೂ ಅಧಿಕಾರಗಳನ್ನು ನಡೆಸಬೇಕೆಂದು ನಿರ್ಧರಿಸಿದ. ಕೇವಲ ತಾನೇ ಸ್ವಾತಂತ್ರ್ಯ ವಹಿಸಲಿಲ್ಲ. ಇಲಕಲ್ಲ ನಾಗರಿಕರೂ ಇದಕ್ಕೆ ಒಡಂಬಟ್ಟರು. ಒಡನೆಯೇ ಒಸಗೆ ಎಲ್ಲ ಗ್ರಾಮಗಳಿಗೆ ಓಡಿತು. ಚಿತ್ತರಗಿ ಮೊದಲಾದ ನೂರಾರು ನಗರ-ಗ್ರಾಮ ಗಳ ಸದ್ಭಕ್ತರು, ಶ್ರೀಮಂತರು, ಜಮೀನದಾರರು, ಉದ್ಯಮ ದಾರರು, ವ್ಯಾಪಾರಸ್ಥರು, ಗೌಡರು, ದೇಸಾಯರು, ಕುಲಕರ್ಣಿ ಗಳು ಓಡಿಬಂದರು.

ಪ್ರಬುದ್ಧನಾದ ಶಿವಯೋಗಿಯ ಮೊಗವನ್ನು ಕಂಡು ಅವರೆಲ್ಲ ಸೂರ್ಯ ನೆದುರು ಚುಕ್ಕಿಗಳು ಶಾಂತವಾದಂತೆ ಮೌನ ತಳೆದರು. ಯೋಗ್ಯ ವಟು ದೊರೆ ತನಲ್ಲಾ ಎಂದು ಎಲ್ಲರಿಗೂ ಸಂತಸ. ಉರಿ ಉರಿ ಬೇಸಿಗೆಯ ಮಧ್ಯಾಹ್ನದಲ್ಲಿ ರಾಯನೆಲ್ಲಿಕಾಯಿ ತಿಂದು ತಣ್ಣೀರು ಕುಡಿದಂತೆ ಅವರು ಹರ್ಷಾತಿರೇಕದಿಂದ ತೂಗಿ ಹೋದರು.

ಮುಹೂರ್ತ ಮೂರು ಮೊಳ ಆದರೆ ಹರ್ಷ ಆರು ಮೊಳವಾಯಿತು. ನೂರಾರು ಊರಿನ ಗ್ರಾಮಸ್ಥರೆಲ್ಲರೂ ತಮ್ಮ ತಮ್ಮ ಸಾಂಸಾರಿಕ ಉದ್ಯೋಗ ವ್ಯವಸಾಯಗಳನ್ನು ಮೂಲೆಗೆ ಒಗೆದು ಸಿಂಹಾಸನಾರೋಹಣ ಸಮಾರಂಭದ ಯಶಸ್ಸಿಗಾಗಿ ದುಡಿಯಹತ್ತಿದರು. ರಾತ್ರಿಗಳು ಹಗಲಾದವು. ಊರು ಹಿಗ್ಗಿ ದಂತೆ ಜನಸಂದಣಿ ದಿನೇ ದಿನೇ ತುಂಬಹತ್ತಿತು. ಮನೆ ತುಂಬಿದವು. ಮಠ ತುಂಬಿದವು.

ಪಟ್ಟಾಭಿಷೇಕದ ಮಹಾಗಣಾರಾಧನೆ ಹಾಗೂ ಮಹಾಪ್ರಸ್ತಕ್ಕೆ ಭಿಕ್ಷೆ ಬೇಡುವ ಅವಶ್ಯಕತೆ ಇರಲಿಲ್ಲ. ಪರಊರಿನಿಂದ ಬಂದವರಾರೂ ಬರಿಗೈಯಿಂದ ಬಂದಿರಲಿಲ್ಲ. ಏನೇನು ತಂದರೋ ಮಠಕ್ಕೇ ಸಲ್ಲಿಸಿದರು. ಅಲ್ಲಿಯ ಕರಣಿಕರಿಗೆ ಅವುಗಳನ್ನು ಪಡೆದುಕೊಂಡು ಇಡಲಿಕ್ಕೆ ಸ್ಥಳಸಾಲಲಿಲ್ಲ.

ಮಹಾಪ್ರಸ್ತಕ್ಕೆ ಒಂದು ಕೂರಿಗೆ ಜಮೀನು ಶುದ್ಧಮಾಡಿ ಸಾರಿಸಿ, ರಂಗವಲ್ಲಿ ಹಾಕಿ, ಪೂಜೆಮಾಡಿ, ಕಾಯಿ ಒಡೆದು ಸಿದ್ಧ ಮಾಡಲಾಯಿತು.

ಮಹಾ ಸಮಾರಂಭ ದಿನಗಟ್ಟಲೆ ನಿರ್ಣಯವಾಯಿತು. ಭಾಷಣಕಾರರಿಗೆ

ಹಬ್ಬ ಬಂದಂತಾಯಿತು. ಕೀರ್ತನಕಾರರಿಗೆ ದಕ್ಷಿಣೆ ಹಣದ ಹೊಳೆ ಹರಿದಂತಾಯಿತು. ಪಂಡಿತರಿಗೆ ಅಭಿಮಾನ ತುಂಬಿತು. ಅನೇಕ ನಗರ-ಗ್ರಾಮಗಳ ಸಿದ್ಧಪ್ರಸಿದ್ಧ ಗುರುಪಟ್ಟ ಚರಪಟ್ಟದ ಸ್ವಾಮಿಗಳು ಈ ಮಹಾ ಸುಸಂಧಿಗೆ ನೆರೆದರು.

ಇಡೀ ಇಲಕಲ್ಲು ಸಂಭ್ರಮದ ಹೊಸ ಸೀರೆಯುನ್ನುಟ್ಟು ಜಂಗಮನ ಪಾದ ಪೂಜೆಗೆ ಆರತಿ ತುಂಬಿ ನಿಂತಂತೆ ಶೋಭಿಸಿತು. ಎಲ್ಲಿ ನೋಡಿದಲ್ಲೆಲ್ಲ ತಳಿರು-ತೋರಣ, ಬಾಳೆದಿಂಡು, ತೆಂಗಿನ ಗರಿ. ವೈಭವವೇ ವೈಭವ. ಮಠದ ಆವರಣದಲ್ಲಿ ಅಸಾಧ್ಯ ದುಡ್ಡು ಖರ್ಚು ಮಾಡಿ ಭಾರೀ ಗಾತ್ರದ ಮಹಾಸಭೆಯ ಹಂದರ ಹಾಗೂ ಮಹಾದ್ವಾರಗಳನ್ನು ಕಟ್ಟಲಾಯಿತು.

೧೮೦೧; ಶಾಲಿವಾಹನ ಶಕೆ-ಪ್ರಮಾಥಿನಾಮ ಸಂವತ್ಸರ; ವೈಶಾಖ ಶುಕ್ಲದ ಚತುರ್ದಶಿ-ಸೋಮವಾರ! ಶ್ರೀ ಚಿತ್ತರಗಿ ವಿಜಯ ಮಹಾಂತೇಶ್ವರ ಮಹಾಸಂಸ್ಥಾನಪೀಠದ ಶೂನ್ಯ ಸಿಂಹಾಸನವನ್ನು ಮಳೆಯಪ್ಪಾರ್ಯ ಆರೋಹಣ ಮಾಡಿದ!! ಅಂದಿನಿಂದ ಮಳೆಯಪ್ಪಾರ್ಯ ಶ್ರೀ ವಿಜಯಮಹಾಂತೇಶ್ವರನಾದ. ತರುಣಯೋಗಿ ಪ್ರಬುದ್ಧ ಶಿವಯೋಗಿಯಾದ. ಜ್ಞಾನಾರ್ಥಿ ಜ್ಞಾನದಾನಿಯಾದ. ನಿಸ್ಸೀಮ ಭಕ್ತ ಈಗ ಭಕ್ತಜನಪರಿಪಾಲನೆಗೈವ ನಿರಂಜನ ಜಂಗಮನಾದ. ಶಿಷ್ಯ ಗುರುವಾದ, ಸಾಧಕ ಸಿದ್ಧನಾದ, ವಟು ನಿರ್ವಿಕಲ್ಪದ ಕಲ್ಪವೃಕ್ಷವಾದ.

ಅಂದೇ ಶ್ರೀ ವಿಜಯ ಮಹಾಂತ ಶಿವಯೋಗಿಗಳ ಅಡ್ಡಪಲ್ಲಕ್ಕಿ ಉತ್ಸವ ಭಾರೀ ಸಂಭ್ರಮದಿಂದ ನೆರವೇರಿತು.

ಪಾಲಕಿಯ ಹಿಂದೆ ಅಸಂಖ್ಯ ಮುತ್ತೈದೆಯರು ತುಂಬಿದ ಆರತಿ ಹಿಡಿದು ತುಂಬಿದ ಹೊಳೆ ಉಕ್ಕೇರಿ ಬಂದಂತೆ ಬಂದಿದ್ದರು. ಪುರುಷರ ಸಡಗರ ಹತ್ತು ಪಟ್ಟಾದರೆ ಇವರ ಸಡಗರ ನೂರುಪಟ್ಟು. ಅವರ ಮಾತಿನಲ್ಲಿ ಮಂತ್ರ ತುಂಬಿತ್ತು. ಮಂತ್ರದಲ್ಲಿ 'ಶಿವೋಹಂ.... ಶಿವೋಹಂ' ನಾದ ಕೇಳಿತ್ತು, ನಾದದಲ್ಲಿ ಅನುಭಾವ ನೆಲೆಸಿತ್ತು, ಅನುಭಾವದಲ್ಲಿ ಪರಂಜ್ಯೋತಿ ತುಳುಕಿತ್ತು. ಆ ಪರಂಜ್ಯೋತಿಯಲ್ಲಿ ನಮ್ಮ ಶ್ರೀ ವಿಜಯ ಮಹಾಂತ ಶಿವಯೋಗಿ ಕುಲಕುಲನೇ ನಗುತ್ತಿದ್ದ !

## ಹನ್ನೆರಡು ವರ್ಷದ ವರೆಗೆ ಸಾಧನೆ

ಪಟ್ಟಾಭಿಷೇಕ ಭಾರೀ ಜೋರಿನಿಂದ ನಡೆದರೂ ಮಠ ಮೌನವಾಯಿತು. ಸ್ವಾಮಿಗಳು ಮಠದಲ್ಲಿ ಇದ್ದಾರೋ ಇಲ್ಲವೋ ಸಂಶಯಪಡುವಂತಾಯಿತು. "ವಿಜಯ ಮಹಾಂತ ಸ್ವಾಮಿಗಳು ಊರಲ್ಲಿಲ್ಲವೇ?" ಎಂದು ಮಠದಲ್ಲೇ ಕೇಳಿ ಹೋದವರೂ ಉಂಟು.

ಈ ವಿಚಿತ್ರ ಭೀಕರ ಪರಿಸ್ಥಿತಿ, ಒಂದೆರಡು ವರ್ಷಕ್ಕಾಗಲೀ ಸೀಮಿತವಾಗಿ ಉಳಿಯಲಿಲ್ಲ. ಸಂಪೂರ್ಣ ಹನ್ನೆರಡು ವರ್ಷಗಳು ಮಹಾಮೌನ, ಮಹಾಶಾಂತಿ, ಮಹಾನೀರವ, ಮಹಾನಿಶ್ಚಲ, ಮಹಾಗಂಭೀರವ ಓತಪ್ರೋತ ತಪಸ್ಸಿನಲ್ಲಿ ತುಂಬಿಹೋದವು. ಅವರ ನಿತ್ಯನಿಯಮ ಕ್ರಮಬದ್ಧವಾದುದು. ದಿನಂಪ್ರತಿ ಬ್ರಾಹ್ಮೀಮುಹೂರ್ತದಲ್ಲಿ ಏಳುವದು. ಪ್ರಾತರ್ವಿಧಿ ಸ್ನಾನಾದಿಗಳನ್ನು ಪೂರೈಸಿ ಲಿಂಗಪೂಜೆ ಪ್ರಾರಂಭ, ನಾಲ್ಕಾರು ತಾಸು ಗಂಭೀರ ಲಿಂಗಪೂಜೆ, ರುದ್ರಾಭಿಷೇಕ, ಜಪಮಣಿಯಿಂದ ಮಹಾಮಂತ್ರ ಜಪ, ಭಕ್ತಿಸಲದಿಂದ ಐಕ್ಯಸ್ಥಲದ ವರೆಗೆ ಸಕಲ ಕ್ರಿಯೆಗಳು. ನಂತರ ಉಗ್ರವಾಗಿ ತೆರೆದ ನೇರ ಕಣ್ಣಿನಿಂದ ಲಿಂಗನಿರೀಕ್ಷಣೆ.

ಶಿವಯೋಗಿಗಳು ಆಡಂಬರದ ಲಿಂಗಪೂಜಕರಾಗಿರಲಿಲ್ಲ. ಲಿಂಗಪೂಜೆಯಲ್ಲಿ ಕ್ರಿಯಾದಿಗಳಿಗೇ ಅಗ್ರ ಪ್ರಾಶಸ್ತ್ಯ ಕೊಟ್ಟು ಧ್ಯಾನವನ್ನೇ ಕೈಬಿಡುವವರಲ್ಲ ಅವರು. ಅವರ ಅರ್ಚನ, ಅಭಿಷೇಕ, ಭಸ್ಮಧಾರಣೆ, ಅಕ್ಷತೆ–ಗಂಧ–ಧೂಪ–ದೀಪ–ಪೂಮಾಲೆ–ಪ್ರಸಾದಾರ್ಪಣಗಳು ತೀರ ಸರಳ. ಆದರೆ ಅಷ್ಟೇ ಗಂಭೀರ. ಇಷ್ಟಲಿಂಗದ ಅಭಿಷೇಕ ಅವರ ದೃಷ್ಟಿಯಲ್ಲಿ ಕೇವಲ ಕೃತ್ರಿಮ ಅಭಿಷೇಕವಾಗಿರಲಿಲ್ಲ. ಅದರಲ್ಲಿ ಮುಖ್ಯವಾಗಿ ವಿಶ್ವತತ್ವದ ಪಂಚ ವಸ್ತುಗಳನ್ನೇ ಅರ್ಪಿಸುತ್ತಿದ್ದರು. ನೀರಿನಿಂದ ಜಗತ್ತಿನ ಜಲತತ್ವವನ್ನೇ ಲಿಂಗಕ್ಕೆ ಅರ್ಪಿಸುತ್ತಿದ್ದರು. ಅದೇ ರೀತಿ ಗಂಧದಿಂದ ಸುಗಂಧ ತತ್ವವನ್ನು, ಅಕ್ಷತೆಯಿಂದ ಅಕ್ಷರ ತತ್ವವನ್ನು, ಪುಷ್ಪಗಳಿಂದ ಸೌಂದರ್ಯ ತತ್ವವನ್ನು, ದೀಪದಿಂದ ಪ್ರಕಾಶ ತತ್ವವನ್ನು, ಧೂಪದಿಂದ ನಿಷ್ಕಾಮ ತತ್ವವನ್ನು, ಗಂಟಾನಾದದಿಂದ ನಾದ ತತ್ವವನ್ನು, ಪ್ರಸಾದದಿಂದ ಭೋಗ ತತ್ವವನ್ನು ಲಿಂಗಯ್ಯನಿಗೆ ಅರ್ಪಿಸುತ್ತಿದ್ದರು. ಪಂಚೇಂದ್ರಿಯಗಳೇ ಲಿಂಗಮುಖವಾಗಿ, ಸಂದು,

ತನ್ನೊಳಗೆ ತಾನು ಏಕೋಭಾವದಿಂದ ನಿಂತು, ಸಂದುಗೊಂದುಗಳಿಲ್ಲದ ಚಿದಾನಂದದಲ್ಲಿ ಚೈತನ್ಯಮಯರಾಗಿ, ತೂರಿಹೋಗುತ್ತಿದ್ದರು. ಆಗಾಗ ಲಿಂಗ ನಿರೀಕ್ಷಣೆಯಿಂದ ಅಪಾರ ಆನಂದ ಬಾಷ್ಪಗಳು ಸುರಿಯುವಾಗ ತಮ್ಮ ದೇಹ ವನ್ನು ಆ ಬಾಷ್ಪಾಂಬುವಿನಿಂದಲೇ ಅಭಿಷೇಕ ಮಾಡಿಸುತ್ತಿದ್ದರು. ಅಚಂಚಲ ವಾದ ಚಕ್ಷುಗಳು ಎವೆ ಬಡಿಯದೇ, ರೆಪ್ಪೆ ಅಲುಗದೇ, ಸ್ಥಿತಪ್ರಜ್ಞೆಯಿಂದ ಇಷ್ಟಲಿಂಗವನ್ನು ನಿರೀಕ್ಷಿಸುವಾಗ ಅವರ ಅಂತರಾಳದ ಷಟ್ ಚಕ್ರಗಳು ವಿಕಾಸ ವನ್ನು ಹೊಂದುತ್ತಿದ್ದವು. ತಮ್ಮ ಯೋಗಶಕ್ತಿಯನ್ನು ಮಳೆಗರೆದು ಸುಸುಹು ತ್ತಿದ್ದವು. ಆಗ ಪ್ರಕಾಶದ ಹೊನಲು, ದಿವ್ಯಾನಂದದಹೊಳೆ, ಪ್ರಭುಶಕ್ತಿಯ ಹೊಯ್ಗಾಳಿಗಳು ಶಿವಯೋಗಿಯಲ್ಲಿ ಪ್ರಕಟವಾಗುತ್ತಿದ್ದವು. ಇದು ಅವರ ಆತ್ಮಲಿಂಗದ ಅಭಿಷೇಕವಾಗಿತ್ತು. ಆ ಅಭಿಷೇಕ–ಪ್ರೇಮ–ಭಕ್ತಿ–ಸಮರ್ಪಣೆ ಗಳಿಂದ ಪರಿಪ್ಲುತವಾಗಿತ್ತು. ಸತ್ಯ–ಶಾಂತಿ–ಸೌಂದರ್ಯ- ಆನಂದ–ಜ್ಯೋತಿ– ಜ್ಞಾನ–ಸತ್ತ್ವಗಳ ಆವಿಷ್ಕಾರದಿಂದ ಪೂರಿತವಾಗಿತ್ತು.

ಪ್ರಾತಃಕಾಲದ ಪೂಜಾನಂತರ ತಮ್ಮ ವಿಶ್ರಾಮ ಕೋಣೆಗೆ ದಯ ಮಾಡಿಸುತ್ತಿದ್ದರು. ಅಲ್ಲಿಯೂ ವಿಶ್ರಾಂತಿ ಇಲ್ಲ. ''ಅಪ್ಪನರ'' ವಚನ ಗಳಲ್ಲಿ ಕೆಲಕಾಲ ತಲ್ಲಿನರಾಗುವದು ಅವರ ನಿತ್ಯನಿಯಮ. ಅವರು ಎಂದಿಗೂ ''ಬಸವಣ್ಣನವರು'' ಎಂದು ಹೆಸರುಗೊಂಡು ಕರೆಯುತ್ತಿರಲಿಲ್ಲ. 'ಅಪ್ಪಗಳು' ಎಂದು ಬಹುಭಕ್ತಿಯಿಂದ ನುಡಿಯುತ್ತಿದ್ದರು. ಆ ವಚನಗಳನ್ನು ಓದುತ್ತಿ ದ್ದಂತೆಯೇ ಮತ್ತೆ ಧ್ಯಾನ ಆರಂಭವಾಗುತ್ತಿತ್ತು. ಆಗ ಬಂದವರ ನೆನಹು ಇಲ್ಲ. ಹೋದವರ ಹಂಬಲ ಇಲ್ಲ. ನಿಂದವರ ನೋಟ ಇಲ್ಲ. ಒಂದೇ ರೀತಿ ಯಾಗಿ ಆಳವಾದ ಧ್ಯಾನದಲ್ಲಿ ಮುಳುಗಿ ಹೋಗುತ್ತಿದ್ದರು. ಅದೂ ಒಂದು ವಿಚಿತ್ರ ಭಂಗಿ, ವಿಚಿತ್ರ ಶೈಲಿ, ವಿಚಿತ್ರ ರೀತಿ, ವಿಚಿತ್ರ ಮಾಟ. ಕೆಲಕಾಲ ಬಲಗೈಯ ಹಸ್ತದಲ್ಲಿ ಗಲ್ಲ ಇರಿಸಿ ಧ್ಯಾನಿಸುವದು. ಮತ್ತೆ ಕೆಲಕಾಲ ಎಡಗೈಯ ಹಸ್ತದಲ್ಲಿ ಗಲ್ಲ ಇರಿಸಿ ಧ್ಯಾನಿಸುವದು. ಹೀಗೆ ಬಹುಹೊತ್ತು ಧ್ಯಾನ ಆದಮೇಲೆ ಮತ್ತೆ ಮಧ್ಯಾಹ್ನ ಸ್ನಾನ-ಪೂಜೆಗೆ ಏಳುವದು. ಒಂದೆರಡು ತಾಸು ಪ್ರಶಾಂತ ಲಿಂಗಪೂಜೆ.

ಆ ಮೇಲೆ ಪ್ರಸಾದ ಅದೂ ಸೇವಕರಿಂದ ಮಾಡಿದ ಪ್ರಸಾದವಲ್ಲ. ತಾವೇ ಸ್ವಯಂಪಾಕಕ್ಕೆ ನಿಲ್ಲುವದು. ಅಡುಗೆಯ ವಿಧಾನವೂ ರೋಮಾಂಚ

ಕಾರಕ. ಎಂಥ ಕಠೋರ ಸಾಧಕನಿಗೂ ಅಸಾಧ್ಯ. ಒಂದೇ ಪಾತ್ರೆಯಲ್ಲಿ ಅರ್ಧ ನೀರು ಹಾಕುವದು. ಎರಡು ಮುಷ್ಟಿ ಕಾಳು, ಎರಡು ಮುಷ್ಟಿ ಬ್ಯಾಳಿ, ಸ್ವಲ್ಪ ಉಪ್ಪು, ಇತ್ಯಾದಿ ಎಲ್ಲವನ್ನೂ ಕೂಡಿಸಿ ಬೇಯುವ ವರೆಗೆ ಕುದಿಸು ವರು. ಆ ಮಿಶ್ರ ಪಾಕ ಕುದ್ದು ಗಟ್ಟಿಯಾಗಲು ಉಂಡೆಯಂತೆ ದುಂಡು ಮಾಡುವರು. ಅದಕ್ಕೇ ತಾವು ಪರಮ ಪ್ರೇಮದಿಂದ ಸಾಕಿದ ಮಹಾಂತಮ್ಮ ಆಕಳ ಹಾಲನ್ನು ಬೆರಸುವರು. ಇಷ್ಟು ಸಮಯಕ್ಕಾಗಲೇ ನಡುಮಧ್ಯಾಹ್ನ ಜಾರಿ ಹೋಗಿರುತ್ತಿತ್ತು. ಆಗ ಮಠದಲ್ಲಿ ಯಾರಾದರೂ ಜಂಗಮರು ಬಂದಿ ದ್ದರೆ ಅವರಿಗೆ ತಾವು ಮಾಡಿದ ಪ್ರಸಾದದಲ್ಲಿ ಅರ್ಧಕೊಟ್ಟು ಉಳಿದ ಅರ್ಧ ಸ್ವೀಕರಿಸುತ್ತಿದ್ದರು. ಇಷ್ಟಾದರೆ ತೀರಿತು ಆದಿನ ಪ್ರಸಾದ. ದಿನಕ್ಕೆ ಒಂದು ಬಾರಿ ಪ್ರಸಾದ. ಮಧ್ಯಾಹ್ನ ನಿದ್ರೆ ಇಲ್ಲ. ಮತ್ತೆ ಅಪ್ಪನವರ ವಚನಗಳಲ್ಲಿ ಮಗ್ನರಾಗುವದು. ಅವರ ಸಮಗ್ರ ಜೀವನವೇ ಒಂದು ಮಹಾಲಿಂಗ ಪೂಜೆ ಯಾಗಿತ್ತು.

ನಂತರ ಸಂಜೆ ಐದು ಗಂಟೆಗೆ, ಮಠದ ಹಿಂಭಾಗದಿಂದ ಹಳ್ಳದ ಆಚೆಗೆ ಹೋಗುವದು ವಾಡಿಕೆ. ಅಲ್ಲಿ ಹಿರಿಯಹಳ್ಳ-ಎರಿಯಹಳ್ಳ ಕೂಡುವ ಮಹಾ ಸುಂದರ ಸಂಗಮ.

ಇದೇ ಶಿವಸುಂದರ ಸಂಗಮದಲ್ಲಿ ಗುರುಮಹಾಂತಸ್ವಾಮಿಗಳ ದೊಡ್ಡ ಗದ್ದುಗೆ, ಪೂರ್ವ ದಿಕ್ಕಿಗೆ ಹೂವಿನ ತೋಟ. ಅಲ್ಲೊಂದು ಮಜ್ಜನ ಭಾವಿ ಅದರಲ್ಲಿ ಶೀತಲ ಜಲ, ತೆಂಗಿನ ಹಾಲಿನಂತಹ ನೀರು. ಅದೇ ಬಾವಿಯು ಶುದ್ಧೋದಕ ವಿಜಯ ಮಹಾಂತ ಶಿವಯೋಗಿಗಳ ತ್ರಿಕಾಲ ಪೂಜೆಗೆ ಸಲ್ಲ ಬೇಕು. ಈ ಮಜ್ಜನ ಭಾವಿ, ತನ್ನ ಸುತ್ತಲ ಪ್ರಾಂಗಣದ ಹೂದೋಟದಲ್ಲಿ ತುಂಬಿಹೋಗಿದೆ. ಅಲ್ಲಿ ನಾನಾ ವಿಧವಾದ ಪುಷ್ಪರಾಶಿ.

ಇಂಥ ಪ್ರಶಾಂತ ತಪೋವನದಲ್ಲಿ ಒಂದು ಏಕಾಂತ ಸ್ಥಾನ. ಅಲ್ಲೊಂದು ಸುಂದರವಾದ ಪರಸೀಕಲ್ಲು. ಅದರ ಮೇಲೆ ಶಿವಯೋಗಿಗಳು ಕೆಲಕಾಲ ವಿಶ್ರಾಂತಿಗೆಂದು ಕುಳಿತುಕೊಳ್ಳುವದು ನಿತ್ಯದರೂಢಿ. ಆಗ ಅವರ ವಿಶ್ರಾಂತಿಯು ನಿಶ್ಚಲ ನೀರವ ಸಮಾಧಿಯಲ್ಲಿ ತೇಲಿಹೋಗಿಬಿಡುತ್ತಿತ್ತು. ಸಾವಿರಾರು ವಿಧದ ಗಾನಪಕ್ಷಿಗಳು ಸಂಗೀತ ಬೆರಸುತ್ತಿದ್ದವು. ಆಗಲೇ ಸೂರ್ಯ ಅಸ್ತಂಗತನಾಗು ವನು. ಮತ್ತೆ ಆ ಏಕಾಂತ ಪರಸೀಕಲ್ಲಿನಿಂದ ಶಿವಯೋಗಿಗಳು ಮಠಕ್ಕೆ ನಿರ್ಗ

ಮಿಸುತ್ತಿದ್ದರು. ಮತ್ತೆ ಮೂರನೆ ಸ್ನಾನ. ಮತ್ತೆ ಪ್ರಸಂಗ ಲಿಂಗಪೂಜೆ, ಲಿಂಗಪೂಜಾ ನಂತರ ಆಕಳ ಹಾಲಿನ ಸೇವನೆ. ನಂತರ 'ಅಪ್ಪಗಳ' ವಚನ ಪಠನ, ಕೆಲಕಾಲ ಧ್ಯಾನ, ಆ ಮೇಲೆ ಆರು ತಾಸು ಯೋಗನಿದ್ರೆ.

ಇದು ನಿತ್ಯ ನಿಯಮ. ಕಠೋರ ಪರಿಪಾಲನೆ. ಸಡಿಲಿಲ್ಲದ ಯಾತ್ರೆ ಯಲ್ಲಿ ಬೆಡಗು. ಹನ್ನೆರಡು ವರ್ಷದ ಪ್ರಚಂಡ ತಪಸ್ಸು. ಈ ಯೋಗದ ಸುದೀರ್ಘ ಯಾತ್ರೆಯಲ್ಲಿ ಅವರಿಗೆ ಲೋಕದ ಪರಿವೆ ಹಾರಿತು. ಅವರ ಆತ್ಮ ಈ ಪರಿಶುದ್ಧ ಪರಿಶೋಧನೆಯಲ್ಲಿ ಪರಿಪಕ್ವವಾಯಿತು. ಈ ಅವಧಿಯಲ್ಲಿ ಸ್ವಾಮಿಗಳು ಭಕ್ತರಿಗೆ ಒಂದು ಬಗೆಯ ಅಂಜಿಕೆಯ ವಸ್ತುವೇ ಆದರೆನ್ನಬೇಕು. ಅವರ ಬಾಯಲ್ಲಿ ಯಾವ ಸಮಯದಲ್ಲಿ ಯಾವ ಮಾತು ಬರುತ್ತದೆಯೋ ಅದು ಸತ್ಯವೇ ಆಗಿ ಪರಿಣಮಿಸತೊಡಗಿತು. ಹೀಗಾಗಿ ಅಳ್ಳೆದೆಯ ಭಾವುಕರಿಗೆ ಮತ್ತೂ ಭಯ. ಮಠದ ಮಹಾದ್ವಾರದ ಹೊರಗೇ ನಿಂತು ನಮಿಸಿ ಬರು ವಷ್ಟರಲ್ಲಿ ಬೇಕು ಬೇಡಾಗಿ ಹೋಗುತ್ತಿತ್ತು. ಹನ್ನೆರಡು ವರ್ಷಗಳು ಆಧ್ಯಾತ್ಮದ ಒಗಟಾಗಿ, ಶಿವಯೋಗದ ಗುಟ್ಟಾಗಿ, ಭವಿಷ್ಯ ಕ್ರಾಂತಿಯ ಬೀಜ ವಾಗಿ ಕಳೆದವು. ಆಮೇಲೆಯೇ ನೋಡಬೇಕು ಶಿವಯೋಗಿಗಳು ಎಂಥವ ರೆಂಬುದನ್ನು !

# ವಿಜಯ ಯಾತ್ರೆ

ಯಜ್ಞದ ಕುದುರೆ ಪಳಗಿತು! ಯುದ್ಧಕ್ಕೆ ಸನ್ನದ್ಧವಾಯಿತು!! ಇನ್ನೇನು ವಿಜಯಯಾತ್ರೆ ಪ್ರಾರಂಭ!!!

ವಿಜಯ ಮಹಾಂತ ಶಿವಯೋಗಿಗಳ ಹನ್ನೆರಡು ವರ್ಷಗಳ ಕಟ್ಟುಗ್ರ ಸಾಧನೆ ಸಿದ್ಧಿಯ ಪತಾಕೆ ಹಾರಿಸಿತು. ಇನ್ನು ಇವರು ಇಡುವ ಪ್ರತಿ ಹೆಜ್ಜೆಯೂ ಪ್ರದಕ್ಷಿಣ ವಿಧಿಯು. ಪ್ರತಿಯೊಂದು ಮಾತೂ ಮಹಾಮಂತ್ರ. ಪ್ರತಿಯೊಂದು ನೋಟವೂ ನಿರಂಜನ ನಿರೀಕ್ಷಣೆ. ಇವರ ಆನಂದವೇ ಅನುಗ್ರಹ. ವಿಷಾದವೇ ವಿಷ. ತಾಪವೇ ಮಹಾ ಅಗ್ನಿ. ಜ್ಯೋತಿಯ ತೇರು ಸಾಗಿದಂತೆ, ಸಿಡಿಲಿನ ಹುಡಿಯು ಸಿಡಿದಂತೆ, ರುದ್ರನ ಹಣೆಗಣ್ಣು ಒಡೆದಂತೆ, ವಿಜಯ ಮಹಾಂತ ಶಿವಯೋಗಿಗಳು ದೇಶ ಸಂಚಾರ ಕೈಕೊಂಡರು. ಅವರ ಜೀವನದಲ್ಲಿ ಹೊರ ಪರ್ವ ಪ್ರಾರಂಭವಾಯಿತು. ಸಾಧನೆಯ ಘಟ್ಟ ಈಗ ಸಂಪೂರ್ಣ ಮುಗಿದುಬಿಟ್ಟಿದೆ. ತಾವು ಉಂಡ ಸಿದ್ಧಿಯನ್ನು ಸೂರೆ ಮಾಡಲು ಈಗ ಹೊರಟಿದ್ದಾರೆ. ಲೋಕಕಲ್ಯಾಣಕ್ಕಾಗಿ ಕಂಕಣಬದ್ಧರಾಗಿದ್ದಾರೆ. ಇಲ್ಲಿಯ ವರೆಗೆ ಮಠವೊಂದೇ ಮಠವಾಗಿತ್ತು. ಇನ್ನು ಲೋಕವೇ ಮಠ, ಭಕ್ತರೇ ದೇವಾಲಯ, ಲೋಕ ಕಲ್ಯಾಣವೇ ಲಿಂಗಪೂಜೆ.

ವಿಜಯ ಮಹಾಂತ ಶಿವಯೋಗಿಗಳ ಬಾಳಿನಲ್ಲಿ ಪಾಲುಗೊಂಡ ಮರೆಯ ಲಾರದ ಹೆಣ್ಣುಜೀವಿಯೊಬ್ಬಳಿದ್ದಾಳೆ. ಅವರ ನಿರ್ಮಲ ವಾತ್ಸಲ್ಯದ ಸಂಗಾತಿ ಯಾಗಿದ್ದಾಳೆ. ಅವರ ಪ್ರೇಮದ ಪಾವನ ಗಂಗೆಯಾಗಿದ್ದಾಳೆ ಅವಳೇ 'ಮಾಂತಮ್ಮ' ಎಂದು ಅವರಿಂದ ಕರೆಸಿಕೊಂಡ ಮುಗ್ಧ ಆಕಳು. ಬಹು ಸುಂದರ ರೂಪಿಣಿಯಾದ ಗೋಮಾತೆಯೇ ಅವಳು.

ವಿಜಯ ಮಹಾಂತ ಶಿವಯೋಗಿಗಳು ಗಡ್ಡ–ಮೀಸೆ–ಜಟೆಗಳಿಂದ ಭವ್ಯವೂ ಉಗ್ರವೂ ಆಗಿ ಕಾಣುತ್ತಿದ್ದರು. ಸತತ ಲಿಂಗನಿರೀಕ್ಷಣೆಯಿಂದ ಅವರ ಕಣ್ಣುಗಳು ಕೆಂಡದಂತೆ ಸದಾ ಕೆಂಪಾಗಿರುತ್ತಿದ್ದವು. ಹೀಗಿರಲು ಅವರನ್ನು ಕಂಡು ಅಂಜಿದವರೇ ಬಹಳ. ಇವರು ಮಠದಲ್ಲಿ ಇದ್ದಾಗ ಎದುರಿನ ದಾರಿಯಲ್ಲಿ ಸುಳಿಯಲೂ ಎಷ್ಟೋ ಜನರಿಗೆ ಉಸಿರುಗಟ್ಟುವಷ್ಟು ಉಗ್ರ ರೂಪ. ಅವರೂ ನೋಡಲು ಗಂಡು ರೂಪಾದರೂ ಭಾವಿಸಲು ಹೆಣ್ಣು ರೂಪು ಎಂಬುದಕ್ಕೆ ಅವರ ಮಾಂತಮ್ಮನ ಮೇಲಿನ ಪ್ರೀತಿಯೇ ಸಾಕ್ಷಿ. ಅವರ

ಅಂತರಂಗ ಕರುಣಾಸಾಗರವಾಗಿತ್ತು. ಹೂವಿನಂತೆ ಕೋಮಲವಾಗಿತ್ತು. ಮಾಂತಮ್ಮ ಅವರ ಬಾಳಿನಲ್ಲಿ ಬಹುದೊಡ್ಡ ಪಾತ್ರವಾಡಿದಳು. ಅಷ್ಟೇ ಏಕೆ ಅವರ ವಿಜಯ ಯಾತ್ರೆಯ ಪಂಚಾಂಗವೇ ಆವಳಾದಳು. ಶಿವಯೋಗಿಗಳು ಎಲ್ಲಿಯೇ ಯಾವದೇ ಊರಿಗೆ ದಯಮಾಡಿಸಲಿ; ಮೊದಲು ಅವಳ ಅಪ್ಪಣೆ ಬೇಕು. ದೇಶ ಸಂಚಾರಕ್ಕೆ ನಡೆದಾಗ ಅವರು ಅವಳ ಪಕ್ಷಕ್ಕೆ ಬಂದು ಡುಬ್ಬದ ಮೇಲೆ ಕೈಯಾಡಿಸಿ – 'ಮಾಂತಮ್ಮ ಹೋಗೋಣವೇ ?' ಎಂದು ಅಕ್ಕರೆ ಯಿಂದ ಕೇಳುತ್ತಿದ್ದರು. ಆಗಲೇ ಆ ಗೋಮಾತೆಯು ಮಾರುತ್ತರ. ಮಾತಿಲ್ಲದ ಪ್ರಾಣಿಯಾದರೂ ಮಾತು ಬಲ್ಲವರಿಗಿಂತ ಜಾಣೆ ಅವಳು. ಮೆಲ್ಲನೇ ಗೋಣುಹಾಕಿ, ಒಂದು ಸಲ ಡುರುಕಿ ಹಾಕುತ್ತಿದ್ದಳು. ಅದೇ ನಿರ್ಗಮನಕ್ಕೆ ಶುಭಸೂಚನೆ. ಎಲ್ಲಿಯೇ ಹೋಗಲಿ ಅವಳೊಂದಿಗೆ ಸಂಚಾರ. ಅವಳಿಗೂ ಇವರಂತೆ ತ್ರಿಕಾಲ ಸ್ನಾನ. ಸದಾ ಪರಿಶುಭ್ರತೆ, ಬೆನ್ನಿನ ಮೇಲೆ ಲಿಂಗಮುದ್ರೆ. ಅದೇ ಅವಳ ಇಷ್ಟಲಿಂಗ. 'ದೇಶಸಂಚಾರದಲ್ಲಿ ಡುಬ್ಬಕ್ಕೆ ರೇಶಿಮೆ ಗೌಸು. ಸಿಕ್ಕಲ್ಲಿ ಮೇಯಲು ಹೋಗಿ ಬಾಯಿ ಅಪಾವಿತ್ರ್ಯ ಆಗಬಾರದೆಂದು, ಎತ್ತಿನ ಬಾಯಿಗೆ ಹಾಕುವಂತೆ ಬಾಯಿಚಿಕ್ಕ. ಕಾರಣ ಅವಳು ಮೇದದ್ದೇ ಹಾಲಾಗು ವದು. ಅದೇ ಅವರ ಲಿಂಗಕ್ಕೆ ಅಭಿಷೇಕ-ನೈವೇದ್ಯವಾಗುವದು. ಆದ್ದರಿಂದ ಸದಾ ಹಚ್ಚ ಹಸುರಾದ ಶುಚಿಯಾದ ಪೈರು - ಮೇವು ಆ ತಾಯಿಯ ಸೇವನೆಗೆ ಸಲ್ಲುತ್ತಿತ್ತು. ಶಿವಯೋಗಿಯ ಬಳಿ ಗೋರೂಪದ ಶಿವಯೋಗಿಣಿ ಅವಳಾಗಿದ್ದಳು.

ಹೆಚ್ಚಾಗಿ ಅವರು ಕೊಲ್ಲಾರಿ ಬಂಡೆಯಲ್ಲೇ ಪ್ರಯಾಣಿಸುವವರು. ಅಲ್ಲಲ್ಲಿ ಕುದುರೆಯ ಮೇಲೂ ಹೋಗುವದು ವಾಡಿಕೆ. ಜೊತೆಗೆ ಮಾಂತಮ್ಮ ಬೇಕೇಬೇಕು. ಅವಳು ಜ್ಯೋತಿರ್ಲತೆಯಂತೆ ಕುಡಿಚಾಚುತ್ತ ಇವರ ಅನುಚರ ಳಾಗಿ ಆರಾಧಕಳಾಗಿ ಸಹಪಾಂಥಳಾಗುತ್ತಿದ್ದಳು.

ಸಂಚಾರದಲ್ಲಿ ಸ್ವಾಮಿಗಳ ಬೆನ್ನಿನ ಮೇಲೆ 'ಅಪ್ಪಗಳ' ವಚನದ ಕಟ್ಟು ಸದಾ ಇರುತ್ತಿತ್ತು. ಅದನ್ನು ಬಲುಜೋಕೆಯಿಂದ ಜತನ ಮಾಡುತ್ತಿದ್ದರು, ನೆಲದ ಮೇಲೆ ಇಡುತ್ತಿರಲಿಲ್ಲ. ನಿಶ್ಶೂನ್ಯವಾಗಿ ಸಾಕಾರ ಹೊತ್ತಂತೆ ಅದನ್ನು ಸದಾ ಡುಬ್ಬದ ಮೇಲೆ ಕಾವಿ ವಸ್ತ್ರದಲ್ಲಿ ಕಟ್ಟಿಹಾಕಿಕೊಳ್ಳುತ್ತಿದ್ದರು. ಅದು ಅವರ ಆಧ್ಯಾತ್ಮ ಲೌಕಿಕಗಳೆರಡಕ್ಕೂ ಕೇಂದ್ರ ಶಕ್ತಿಯಾಗಿತ್ತು. ಅದು ಜಂಗಮ

ಲಿಂಗವಾದರೆ ಇವರು ಅದಕ್ಕೆ ಜಂಗಮ ಜಗುಲಿಯಾಗಿದ್ದರು. ಹೆಗಲ ಮೇಲೆ ಇಲ್ಲವೇ ಕುದುರೆ ಬೆನ್ನಮೇಲೆ ಸದಾ ಒಂದು ಹಸಬೆಯನ್ನು ಒಯ್ಯುತ್ತಿದ್ದರು. ಪ್ರವಾಸದಲ್ಲಿ ಅದು ಅವರ ಪುಟ್ಟ ಕೈಚೀಲದಂತೆಯೂ, ಜೋಳಿಗೆಯಂತೆಯೂ ಇಲ್ಲವೇ ಸಮಯ ಬಂದಾಗ ದಾನದ ಪಾತ್ರೆಯಂತೆಯೂ ಉಪಯೋಗವಾಗುತ್ತಿತ್ತು. ಕಾಲಲ್ಲಿ ಚರ್ಮದ ಜೋಡನ್ನೇ ಹಾಕಿಕೊಳ್ಳುವದು ಇವರ ಇನ್ನೊಂದು ವಿಶೇಷ. ಕಡಾವಿಗೆಗಳಿದ್ದರೂ ಬಳಸುವದು ಕಡಿಮೆ. ಅದೇಕೊ ಅವುಗಳ ಮೇಲೆ ಇವರ ಮಮತೆ ಕಡಿಮೆ. ಇವರ ಇನ್ನೊಂದು ಎದ್ದು ಕಾಣುವ ವಿಶೇಷವೆಂದರೆ ತಲೆಯ ಮೇಲಿನ ಪೇಟವೊಂದೇ ಕಾವಿಯ ಬಣ್ಣದ್ದು. ಕಫನಿ ಶುದ್ಧ ಬಿಳಿಯ ಬಣ್ಣದ್ದು. ಕಾವಿಯ ಕಫನಿ ಹಾಕುತ್ತಿರಲಿಲ್ಲ. ಯಾರೋ ಒಬ್ಬರು ಕೇಳಿದರಂತೆ — 'ಬುದ್ಧೀ; ಸ್ವಾಮಿಗಳೆಂದರೆ ಕಾವಿಯ ಕಫನಿ ಹಾಕಬೇಕು. ನೀವೇಕೆ ಹಾಕುವದಿಲ್ಲ?' ಎಂದು. ಇದಕ್ಕೆ ಇವರ ಕೊಟ್ಟ ಉತ್ತರ ಮಾರ್ಮಿಕವಾಗಿದೆ— "ನಾನು ಕಾವಿಯ ಪೇಟವೊಂದನ್ನೇ ಹೊತ್ತು ಅವರ ಪಾವಿತ್ರ್ಯವನ್ನು ನನ್ನಲ್ಲಿ ಉಳಿಸಿಕೊಳ್ಳುವದೇ ಮಹಾ ಕಠಿಣವಾಗಿರುವಾಗ; ಇಡೀ ದೇಹವೇ ಕಾವಿಯ ಉಡುಗೆಯಿಂದ ಕೂಡಿದರೆ ಅದರ ನಿರ್ಮಲತೆ ಕಾಪಾಡಲು ಇನ್ನೆಂಥ ವ್ರತವನ್ನು ಕೈಕೊಳ್ಳಲಿ?' ಎಂದು. ಕಾವಿಧಾರಣೆ ಎಷ್ಟೊಂದು ಜವಾಬುದಾರಿಯದು ಎಂಬುದನ್ನು ಇವರು ಆಚರಿಸಿ ತೋರಿಸಿದರು. ಕಾವಿಗಾಗಿ ಕಾವಿ ಅಲ್ಲ. ಕಾಯಕ್ಕಾಗಿ ಕಾವಿ ಅಲ್ಲ. ಅದು ಪರಿಶುದ್ಧ ಅಗ್ನಿಯ ಸಂಕೇತ. ಆತ್ಮ ಪರಿಶುದ್ಧವಾದಾಗ ಮಾತ್ರ ಕಾವಿಯು ನಿಜವಾಗಿಯೂ ಕಾವಿಯಾಗಬಲ್ಲದಲ್ಲವೇ? ಇಲ್ಲವಾದರೆ ಅನೇಕ ಬಣ್ಣಗಳಲ್ಲಿ ಅದೂ ಒಂದು ಬಗೆಯ ಬಣ್ಣವೇ ಆದೀತು!

ಇದೆಲ್ಲವೂ ಕೇವಲ ಬಹಿರಂಗ ವಿವೇಚನೆ, ಅಂತರಂಗಕ್ಕೆ. ಹಿಡಿದ ಕೈಗನ್ನಡಿ. ಇವರ ಅಂತರಂಗದ ಮಹತ್ಸಿದ್ಧಿಯ ಹೂದೋಟ ಗಾವುದ ಗಾವುದ ದೂರದಲ್ಲಿದೆ. ಅದನ್ನು ನೋಡಲೂ ಬಾರದು. ಕೊಡಲೂ ಬಾರದು. ಕಲ್ಪನೆಗೂ ಅವರ ಆಳ-ನಿರಾಳ ಹೊಳೆಯದು. ಮುಕ್ತಿಯನ್ನು ಮುಟ್ಟಿ ಹತ್ತಂಗುಲ ಚಾಚಿದಂತೆ ಆ ಚಿದಾಕಾಶ ಅಪರಂಪಾರವಾಗಿದೆ.

ಕರ್ಮಯೋಗ ಪ್ರಾರಂಭವಾಯಿತು. ಐವತ್ತಾರು ಮಠಗಳ ಪುನರುತ್ಥಾನ, ಅಸಂಖ್ಯ ಭಕ್ತರ ಪುನರುದ್ಧಾರ ಪ್ರಾರಂಭವಾಯಿತು. ಅವರ ವಿಜಯ

ಯಾತ್ರೆ ಭಾಷಣಗಳಿಂದ, ಸಭೆಗಳಿಂದ, ಜಾತ್ರೆಗಳ ಗಲ್ಲಾಗುಲ್ಲಿಗಳಿಂದ, ಭಿಕ್ಷೆಯ ಬೇಡಿಕೆಯಿಂದ ಕೂಡಿರಲಿಲ್ಲ. ಆದರೊಂದಿಗೆ ಅವರ ಇಚ್ಛಾಬಲ ನಡೆಯಿತು. ಅಸಂಖ್ಯ ಆಶ್ಚರ್ಯಗಳು ಅವರಿಂದ ಘಟಿಸಿದವು. ಅವರೆಂದಿಗೂ 'ನಾನು ಪವಾಡ ಪುರುಷ' ಎಂದು ಹೇಳಲಿಲ್ಲ. ಎಂದಿಗೂ ನಾನು ಇಂಥ 'ಪವಾಡ ಮಾಡುತ್ತೇನೆ' ಎಂದು ಆಡಲಿಲ್ಲ. ಅವರಿಂದ ಅವರಿಗರಿಯದಂತೆ ದೈವೀಶಕ್ತಿ ಅನೇಕ ಅದ್ಭುತಗಳನ್ನು ಮಾಡಿಸಿಬಿಟ್ಟಳು. ಕನಸಿನಲ್ಲೂ ಕಾಣಬಾರದ್ದನ್ನು ಪ್ರತ್ಯಕ್ಷ ಕಂಡ ಜನ ಎದೆ ಬಾಯಿಬಿಟ್ಟರು.

ವಿಜಯ ಮಹಾಂತ ಶಿವಯೋಗಿಗಳು ಎಂದಿಗೂ ತಮ್ಮ ಶಾಪಾನುಗ್ರಹ ಶಸ್ತ್ರವನ್ನು ತಾವಾಗಿಯೇ ಬಳಸಲಿಲ್ಲ. ಆದರೆ ಆ ಆಯುಧಗಳು ಇವರಿಗಾಗಿ ಕಾರ್ಯಮಾಡಿದವು. ಕಾಯಬೇಕಾದಲ್ಲಿ ಕಾದವು. ಇರಿಯಬೇಕಾದಲ್ಲಿ ಇರಿದವು. ಅವುಗಳ ಹಿಂದೆ ಶಿವಸಂಕಲ್ಪವೇ ಸೂತ್ರಧಾರಿಯಾಗಿತ್ತು,

ಸಂಚಾರ ಪ್ರಾರಂಭವಾಯಿತು. ಗ್ರಾಮದಿಂದ ಗ್ರಾಮಕ್ಕೆ, ಪಟ್ಟಣದಿಂದ ಪಟ್ಟಣಕ್ಕೆ ಶಿವಯೋಗಿಗಳು ದಯಮಾಡಿಸಿದರು. ಅವರ ಪಾದಧೂಳಿಯನ್ನು ಪಡೆದ ಪ್ರದೇಶಗಳು ಒಂದೇ ಎರಡೇ? ಲೆಕ್ಕಕ್ಕೆ ನೂರಾದರೂ ತರ್ಕಕ್ಕೆ ಸಾವಿರವಾಗಿವೆ, ಹಳ್ಳಿ-ಪಟ್ಟಣಗಳು ಶಿವಯೋಗಿಯ ಪಾದಧೂಳಿಯಲ್ಲಿ ಅಪಾದ ಮಸ್ತಕ ಸ್ನಾನ ಮಾಡಿದವು. ದಿವ್ಯಜಂಗಮನ ದರ್ಶನವನ್ನು ಕಣ್ಣಾರೆಕಂಡವು. ಅಲ್ಲೆಲ್ಲ ಆತ ಪವಾಡಗಳನ್ನು ತೋರಿಸಿದ ಎನ್ನುವದಕ್ಕಿಂತ: ಪವಾಡಗಳೇ ಆತನಲ್ಲಿ ತೋರಿದವು, ಎನ್ನುವದು ಲೇಸು. ಆತ ಪವಾಡಗಳ ಬೆನ್ನು ಹತ್ತಲಿಲ್ಲ. ಪವಾಡಗಳೇ ಆತನ ಬೆನ್ನು ಹತ್ತಿದವು. ಈ ಅರ್ಥದಲ್ಲಿ ಶ್ರೀ ವಿಜಯ ಮಹಾಂತೇಶ್ವರ ಶಿವಯೋಗಿ ಬಹುದೊಡ್ಡ ಪವಾಡಪುರುಷ. ಅಘಟಿತ ಘಟನಾ ಸಾಮರ್ಥ್ಯ ಪಟು. ಕನ್ನಡ ನಾಡಿನ ಅಖಂಡ ಚರಿತ್ರೆಯಲ್ಲಿ ಸುವರ್ಣ ಪಟದಲ್ಲಿ ಬರೆದಿಡಬೇಕಾದ ಯುಗಪುರುಷ!

# ಗಂಗಾ ಬಂದಳು

ಹುನಗುಂದದ ಉಪವನ. ತಪೋವನವೂ ಆಹುದು. ಆದರೆ ಹೂಬಳ್ಳಿಗಳಿಗೆ ನೀರಿಲ್ಲ. ಗುರುಲಿಂಗಜಂಗಮಕ್ಕೆ ಮಜ್ಜನವಿಲ್ಲ. ಕರ್ಮಯೋಗಿ ನಿರ್ಮಮತೆಯಿಂದ ಇರಲೆಂತು ಸಾಧ್ಯ? ಅಲ್ಲೊಂದು ಬಾವಿಯನ್ನು ಅಗೆಸುವ ಕಾರ್ಯ ಆರಂಭವಾಯಿತು.

ಹರಿಮೊಸೆಯ ಕಟ್ಟಾಳುಗಳು ಕಲ್ಪಡಿಗಳನ್ನು ಒಡೆದವು. ಬಾವಿ ಆರು ಏಳು ಆಳ ಕಡಿಸಲಾಯಿತು, ನೀರಿಲ್ಲ !!

'ಗಂಗಾ ತಾಯಿಗೆ ಯಾಕೋ ನನ್ನ ಮೇಲೆ ಕೋಪಬಂದಿದೆ. ಅವಳಿಗೆ ಸಮಾಧಾನ ಹೇಳಿ ಕರೆತರುತ್ತೇನೆ' — ಎಂದು ಶಿವಯೋಗಿಗಳು ಬಾವಿಯ ದಡವಲ್ಲಿ ಆ ದಿನ ಇನ್ನೂ ನಿಚ್ಚಳ ನಸುಕಿರುವಾಗಲೇ ಕುಳಿತರು. ಸಂಕಲ್ಪಬದ್ಧರಾಗಿ ಬದ್ಧ ಪದ್ಮಾಸನದಲ್ಲಿ ಕುಳಿತರು. ಸೂರ್ಯೋದಯವಾಯಿತು. ಕಿರಣಗಳು ಚಲ್ಲಾಡಿದವು. ಬೆಳಕು ಅಲ್ಲಾಡಿತು. ಶಿವಯೋಗಿಯ ನಿಷ್ಠುರ ಸಂಕಲ್ಪ ಮುಂದುವರೆಯಿತು. ಮಂದಮಾರುತ ಜಾರಿತು. ಬಿಸಿಗಾಳಿ ಮೈಗೂಡಿತು. ಪಕ್ಷಿಗಳು ಆಹಾರಕ್ಕಾಗಿ ಹಾರಿಹೋದವು. ಆದರೂ ಶಿವಯೋಗಿ ಏಳಲಿಲ್ಲ. ಆತನನ್ನು ಕಂಡು ಭೂದೇವಿ ಬೆದರಿದಳು. ವನದೇವಿ ಅಂಜಿದಳು. ಉಷಾದೇವಿ ಕಮರಿದಳು.

ಸ್ವಾಮಿಗಳ ಸಂಕಲ್ಪ ಆಗಲೇ ಊರಲ್ಲಿ ಪ್ರಸಾರವಾಯಿತು.

ಸಮಯ ಜಾರತೊಡಗಿತು. ಜಾರಿತು, ಸೂರ್ಯ ತನ್ನ ಪ್ರಖರ ಕಿರಣಗಳನ್ನು ಮೆಲ್ಲನೇ ಚಿಮ್ಮತೊಡಗಿದ. ಬೆಳಗಿನ ಶೀತಲ ಮಾಯವಾಯಿತು. ಬಿಸಿಲು ನಿಟ್ಟುಸಿರಾಯಿತು. ನೆಲ ಬಿಸಿ ಬೂದಿಯಾಯಿತು. ಮತ್ತೆ ಮತ್ತೆ ಬಿಸಿಲು ಏರಿತು. ಶಿವಯೋಗಿಯ ಮೈ ಕಾಯಿತು. ಬೆವರು ಸುರಿಯಿತು.

ಸಂಕಲ್ಪವೆಂದರೆ ಸಾಮಾನ್ಯವೇ ? ಲಿಂಗಪೂಜೆಯೂ ಇಲ್ಲ ! ತ್ರಿಕಾಲ ಪೂಜೆಗೆ ಭಂಗಬರುವಂತಾಯಿತು !! ಎಂಥ ಮಹಾ ಪಾಪ !!! ಗಂಗೆ ಅಂಜಿದಳು— 'ಅಯ್ಯೋ ಜಂಗಮನನ್ನು ಬಿಸಿಲಲ್ಲಿ ಕುಳ್ಳಿರಿಸಿದೆ. ಬೆಮರಿಸಿದೆ, ಬತ್ತಿಸಿದೆ. ಹೊತ್ತಿಸಿದೆ. ಲಿಂಗಪೂಜೆಗೆ ವಿಘ್ನ ತಂದೆ. ಅಯ್ಯೋ ಇನ್ನು ಮೇಲೆ ಶಿವ ನನ್ನನ್ನು ಥಳಿಸದೇ ಬಿಡುವನೇ. ಶಿವನ ತಲೆಯ ಮೇಲೆ ಮೆರೆಯುತ್ತಿ

ರುವ ನಾನು ಆವನಿಂದ ವಂಚಿತಳಾಗಿ ಇನ್ನೆಲ್ಲಿ ಬಾಳಲಿ ? ಯಾರನ್ನು ಆಶ್ರಯಿಸಲಿ ? ಯಾವ ನರಕ ಕೂಪವನ್ನು ಸೇರಲಿ ? '— ಎಂದು ಗದ್ಗದಿಸಿ ನಡುಗಿದಳು.

ಆಗಲೇ ಭೂಗರ್ಭ ಬಿರಿಯಿತು. ಭೂಮಂಡಲದ ಹೆಬ್ಬಂಡೆಗಳು ಸೀಳಿದವು. ಗಂಗಾತಾಯಿ ಬಂದಳು. ಬಾವಿಯ ತುಂಬ ನೀರೇ ನೀರು. ತುಂಬುವದು ಮಾತ್ರವಲ್ಲ; ತುಂಬಿ ಹರಿಯುತೊಡಗಿತು !

'ಇದೇನು ವಿಚಿತ್ರ?' ಎಂದರು ಕೆಲವರು.

'ಇದು ಹೀಗೇಕೆ ಆಯಿತು?' ಎಂದು ಮತ್ತೆ ಕೆಲವರು.

'ಇವರು ಏನೋ ಬೇರೆ ಇದ್ದಂತೆ ಇದೆ. ನಾವು ಬೇರೆ ತಿಳಿದಿದ್ದೆವು' ಎಂದು ಕೆಲವರು.

'ಛೇ, ಇದೇನು ಕನಸೋ ನನಸೋ?' ಎಂದು ಮತ್ತೆ ಕೆಲವರು ಕೇಳಿದರು.

ಊರಿಗೆ ಊರೇ ಪರಮಾಶ್ಚರ್ಯದಲ್ಲಿ ಮುಳುಗಿಹೋಯಿತು. ತಾಯಿ ಭಾಗೀರಥಿ ಮಹಾಮುತ್ತೈದೆಯಾಗಿ ಬಂದಿದ್ದಾಳೆ. ವಿಜಯ ಮಹಾಂತ ಶಿವಯೋಗಿಗಳು ತೊಗಟೆ ಸುಲಿಯದ ಒಂದು ತೆಂಗಸ್ನು ತರಿಸಿ ಆವಳ ಉಡಿ ತುಂಬುವಂತೆ ಬಾವಿಯಲ್ಲಿ ತೇಲಿಬಿಟ್ಟರು. "ಇಂದು ನಾನು ಧನ್ಯಳಾದೆ. ನನ್ನ ಜೀವನ ಪಾವನವಾಯಿತು" ಎಂದು ಆ ಪಾವನ ಗಂಗೆಯೇ ಉದ್ಗಾರ ತೆಗೆದಂತಾಯಿತು.

# ಶಿವ ದೊಡ್ಡವನು

ಹುನಗುಂದದ ಬಾವಿ ಹಿಗ್ಗಿನಿಂದ ನೀರು ತುಂಬಿತು. ಶೀತಲ ಜಲ. ಮಧುರ ರುಚಿ. ಎಳೆದೆಂಗಿನಂತೆ ತಿಳಿಯಾದ ಪಾನೀಯ. ಬಾವಿಯ ಜಲವನ್ನು ಶಿವಯೋಗಿಯ ಕರುಣ ಪ್ರಸಾದವೆಂದೇ ಅರಿತು ಊರಿನ ಸಮಸ್ತ ಜನರು ಕೊಡ ತುಂಬಿಕೊಂಡು ಹೋದರು. ಮಿಂದು ಮಡಿಯಾದರು. ಕುಡಿದು ಕಳೆದುಂಬಿದರು.

ಮರುದಿನ ಆ ಭಾವಿಗೆ ಮೊಟ್ಟೆ ಹೂಡುವ ಕಾಯಕ ಆರಂಭವಾಯಿತು. ಕರ್ಮಯೋಗ ಎಂದಿಗೂ ನಿಲ್ಲಲಾರದು. ಸಿರಿ ಬರಲಿ ಉರಿ ಬರಲಿ ಜೀವನ ಧರ್ಮಯೋಗ ಸಮತೆಯ ಪ್ರಶಾಂತ ತಲೆಯಲ್ಲಿ ತೂಗಬೇಕಲ್ಲವೇ?

ವಿಜಯ ಮಹಾಂತ ಶಿವಯೋಗಿಗಳು ಸರ್ವ ಸಲಕರಣೆಗಳನ್ನು ಕೂಡಿಸಿದರು. ಸೇವಕರು ಮೊಟ್ಟೆ ಜೋಡಿಸುವ ಕಾರ್ಯಕ್ಕೆ ಸನ್ನದ್ಧರಾದರು. ಮೊಟ್ಟೆಯ ನೀರು ಸುರಿದು ಬೀಳುವಲ್ಲಿ ಒಂದು ಕಲ್ಲು ಬಚ್ಚಲ ಬೇಕೆಬೇಕಲ್ಲವೇ? ಕಾರಣ ಅದರ ಜೋಡಣೆಯೂ ಭರದಿಂದ ಸಾಗಿತು. ಆದರೆ ಆ ಬಚ್ಚಲ ತಳಕ್ಕೆ ಹಾಕಲು ವಿಶಾಲವಾದ ಒಂದು ಹಾಸುಗಲ್ಲು ಬೇಕೆಂದು ಕಾಯಕಕ್ಕೆ ನಿಂತಾಗಲೇ ಕೊರತೆ ಕಂಡುಬಂದಿತು. ಹಾಸುಗಲ್ಲಿಲ್ಲದೇ ಬಚ್ಚಲಿಲ್ಲ. ಬಚ್ಚಲಿಲ್ಲದೇ ಮೊಟ್ಟೆ ಇಲ್ಲ. ಇನ್ನು ಹಾಸಿಗಲ್ಲು ತರಬೇಕೆಂದರೆ ಹದಿನೈದು ಮೈಲು ದೂರದ ಗುಡ್ಡಕ್ಕೇ ಹೋಗಬೇಕು. ಅವಸರ ಸಮಯದಲ್ಲಿ ಅದು ಆಗದ ಕೆಲಸ.

ಸ್ವಾಮಿಗಳು ತಮ್ಮ ಸೇವಕರೊಂದಿಗೆ ಊರಲ್ಲೇನಾದರೂ ಹಾಸುಗಲ್ಲುಗಳು ಇವೆಯೇ ಎಂದು ವಿಚಾರಿಸಿದರು. ಊರಲ್ಲಿ ಗುರುಬಸಯ್ಯನವರ ಮನೆಯ ಮುಂದೆ ಹಾಸುಗಲ್ಲೊಂದನ್ನು ಹಾಗೆಯೇ ಇಟ್ಟಿದೆ ಎಂಬ ಉತ್ತರ ಬಂತು. ಸ್ವಾಮಿಗಳು ಸೇವಕನಿಗೆ ತಟ್ಟನೇ ಆಜ್ಞೆ ಮಾಡಿದರು – "ಆ ಕಲ್ಲನ್ನು ಗುರುಬಸಯ್ಯನಿಂದ ಕೇಳಿ ಕಡತೆಗೆದುಕೊಂಡು ಬಾ. ಮುಂದೆ ಮತ್ತೊಂದು ಕಲ್ಲನ್ನು ಕೊಟ್ಟರಾಯಿತು?

ಸೇವಕ ಗುರುಬಸಯ್ಯನವರ ಮನೆಗೆ ಹೋಗಿ ಬಾಗಿಲ ಮುಂದೆ ನಿಂತು

ಕೂಗಿದ. ಆವರ ಹೆಂಡತಿ ಮೆಲ್ಲನೇ 'ಯಾರವರು?' ಎಂದು ಹೊರಬಂದಳು. ಈತ ಹೇಳಿದ–

"ನಾನು ಸ್ವಾಮಿಗಳ ಸೇವಕ ತಾಯಿ. ನಿಮ್ಮ ಹಾಸುಗಲ್ಲು ಖಾಲಿ ಇದೆ. ಬಾವಿ ಕಟ್ಟಿಸಲು ಸ್ವಾಮಿಗಳು ಇಸಗೊಂಡು ತಾ ಎಂದರು."

ಆವಳು ಮೆಲ್ಲನೇ ಸರಿದು ಒಳಮನೆಯಲ್ಲಿ ಹಕ್ಕಿ ಮರೆಯಾದಂತೆ ಮರೆಯಾದಳು. ಈ ಮಾತನ್ನು ಗುರುಬಸಯ್ಯ ಅಡುಗೆ ಮನೆಯಿಂದಲೇ ಇಣಕಿ ಕೇಳಿದಂತೆ ಕೇಳಿದ್ದ. ಹೆಂಡತಿಯನ್ನು ಕರೆದು ಆವಳ ಕಿವಿಯಲ್ಲಿ ಏನೋ ಹೇಳಿಬಿಟ್ಟ ಆಯಿತು. ಆವಳು ಮತ್ತೆ ಮೆಲ್ಲನೇ ಬಂದು – "ನಮ್ಮವರು ಮನೆಯಲ್ಲಿಲ್ಲ" ಎಂದಳು. ಸೇವಕ ಮತ್ತೆ ಕೇಳಿದ–

'ಎಲ್ಲಿಗೆ ಹೋಗಿದ್ದಾರೆ ಆವ್ವಾವರೆ?'

'ಗೊತ್ತಿಲ್ಲ'

'ಯಾವಾಗ ಬರುತ್ತಾರೆ?'

'ಗೊತ್ತಿಲ್ಲ'

'ನೀವೇ ಕಲ್ಲುಕೊಟ್ಟರಾಗದೇ?'

'ಆವರು ಮನೆಯಲ್ಲಿ ಇಲ್ಲವಲ್ಲ....'

ಸೇವಕ ಮರಳಿದ. 'ಸ್ವಾಮೀಜಿ ಗುರುಬಸಯ್ಯನವರು ಮನೆಯಲ್ಲಿ ಇಲ್ಲ' ಎಂದ.

ಸ್ವಾಮಿಗಳು ಹೇಳಿದರು–

'ಮನೆಯಲ್ಲಿ ಇಲ್ಲವೇ? ಆಗಲಿ ಬಿಡು. ಹಾಗೇ ಆಗಲಿ ಶಿವನಿಚ್ಛೆ. ಪಾಪ!'

ಸೇವಕನಿಗೆ ಏನೂ ಅರ್ಥವಾಗಲಿಲ್ಲ. ಸ್ವಾಮಿಗಳು ಎಲ್ಲದಕ್ಕೂ 'ಶಿವನಿಚ್ಛೆ' ಎನ್ನುತ್ತಾರೆ; ಹಾಗೆ ಅಂದಿರಬಹುದೆಂದು ತಿಳಿದ.

ಅತ್ತ ಗುರುಬಸವಯ್ಯ ಬಿಸಿ ಅನ್ನ-ಕೆನೆಮೊಸರು ಉಂಡು, ಹೊಟ್ಟೆಯ ಮೇಲೆ ಕೈಯಾಡಿಸುತ್ತ ಹಿತ್ತಲಕ್ಕೆ ನಡೆದ. ಹೊಸದಾಗಿ ಕೊಂಡು ತಂದ ಅಪರೂಪದ ಹೋರಿ ಕೊಟ್ಟಿಗೆಯಲ್ಲಿ ನಿಂತಿತ್ತು. ಈತ ಕಬ್ಬಿನಂತೆ ರಸವತ್ತಾದ ಎಳೆದಂಟನ್ನು ಹಾಕಿ, ಅದನ್ನು ನೇವರಿಸಲು ಹೋದದ್ದೊಂದೇ ತಡ; ಅದು ತನ್ನ ಕಠಾರಿಯಂತೆ ಹರಿತವಾದ ಕೋಡಿನಿಂದ ಕಸ್ಸನೇ ಈತನನ್ನು ಇರಿಯಿತು.

ಪೆಟ್ಟು ಗುಪ್ತೇಂದ್ರಿಯಕ್ಕೆ ತಾಗಿತು. ಗುರುಬಸವ ಉರಿಬಸವನಾಗಿ ಚೀರುತ್ತ, ತಾಪ ತಾಳದೇ ನೆಲಕ್ಕೆ ಧೊಪ್ಪನೇ ಬಿದ್ದುಬಿಟ್ಟು, ಸಂಕಟದಿಂದ ಮಣ್ಣಲ್ಲಿ ಒಂದೇ ಸವನೇ ಉರುಳಾಡಿ ಅರಚತೊಡಗಿದ.

ಆತನ ಹೆಂಡತಿ ಓಡಿಬಂದಳು. ಇದೇನಿದು, ಎಂದು ಗಾಬರಿಯಾದಳು. ಭಯಂಕರ ಗಾಯವನ್ನು ಕಂಡು ತನ್ನ ತಾಳಿ ಹಿಡಿದುಕೊಂಡು ಚಿಟ್ಟನೇ ಚೀರಿದಳು. ಹತ್ತಾರು ಜನರು ನುಗ್ಗಿಬಂದರು. ಅವನನ್ನು ಹೊತ್ತುಕೊಂಡು ಒಳಗೆ ತಂದು ಕಂಬಳಿಯಲ್ಲಿ ಮಲಗಿಸುವಷ್ಟರಲ್ಲೇ ಎಲ್ಲರಿಗೆ ಸಾಕುಬೇಕಾಗಿ ಹೋಯಿತು.

ಆಗಲೇ ಗುರುಬಸವನಿಗೆ ತನ್ನ ತಪ್ಪು ತನಗೆ, ಕನ್ನಡಿಯನ್ನು ಮುಖಕ್ಕೆ ಹಿಡಿದಂತೆ ಹೊಳೆಯಿತು. 'ಅಯ್ಯೋ ಕವಡಿ ಕಿಮ್ಮತ್ತಿನ ಹಾಸುಗಲ್ಲಿನ ದುರ್ಮೋಹದಿಂದ ನಾನು ದುರ್ಮರಣವನ್ನೇ ಬರಮಾಡಿಕೊಂಡೆ' ಎಂದು ಗೋಳಾಡಿದ. ಆತ ಉಳಿಯುವ ಸೂಚನೆ ಯಾರಿಗೂ ಕಾಣಲಿಲ್ಲ, ಗಾಯ ಘೋರವಾಗಿತ್ತು. ರಕ್ತ ಕಾರಂಜಿಯಂತೆ ಪುಟಿಯುತ್ತಿತ್ತು. ನರಗಳು ಛಿದ್ರವಿಛಿದ್ರವಾಗಿದ್ದವು.

ಆತನ ಹೆಂಡತಿಗೆ ಏನು ಹೊಳೆಯಿತೋ ಏನೋ? ಭರ್ರನೆ ಓಡಿಬಂದಳು. ಇವಳು ಎತ್ತ ಓಡಿಹೋದಳೆಂದು ಎಲ್ಲರೂ ಕೌತುಕದಿಂದ ನಿರೀಕ್ಷಿಸಿದರು. 'ಅಯ್ಯೋ ನಾನು–ಯಜಮಾನರು ಮನೆಯಲ್ಲಿಲ್ಲ-ಎಂದು ಶಿವಯೋಗಿಗಳಿಗ ಸುಳ್ಳು ಹೇಳಿ ಕಳಿಸಿದೆ. ಮಹಾ ಅನ್ಯಾಯವಾಯಿತು. ಮಹಾ ಅಪರಾಧವಾಯಿತು. ಈಗ ಅವರು ಮನೆಯಲ್ಲಿ ಇಲ್ಲದಂತೆಯೇ ಪರಿಸ್ಥಿತಿ ಆಗಿ ಬರುತ್ತಿದೆ. ಏನು ಮಾಡಲಿ?' ಎಂದು ಗೋಗರೆಯುತ್ತ ಮಠಕ್ಕೆ ಓಡಿದಳು. ಓಡಿಬಂದವಳೇ ಶಿವಯೋಗಿಯ ಪಾದದ ಮೇಲೆ ದೊಪ್ಪನೇ ಬಿದ್ದು, ಚಿಕ್ಕ ಕೂಸು ಅತ್ತಂತೆ ಅತ್ತಳು. – 'ನನ್ನನ್ನು ಕಾಪಾಡಿರಿ ದಮ್ಮಯ್ಯ. ನಾನು ಪಾಪಿ. ಸುಳ್ಳು ಹೇಳಿದೆ. ಅವರು ಮನೆಯಲ್ಲಿಲ್ಲವೆಂದು ಹೇಳಿ ಕಳಿಸಿದೆ. ಕಾಪಾಡಿರಿ. ನನ್ನ ಮಾಂಗಲ್ಯ ಉಳಿಸಿರಿ. ಕುಂಕುಮ ಅಳಿಸಬೇಡಿರಿ. ತಂದೇ....ತಂದೇ....' ಎಂದು ಅಳಹತ್ತಿದಳು.

ಶಿವಯೋಗಿಗಳು ಎಂದಾದರೂ ಕರುಣಾಹೀನರಾಗಬಲ್ಲರೇ? ಕಠೋರರಾಗಬಲ್ಲರೇ? ಅವರ ಆತ್ಮ ಮಲ್ಲಿಗೆಯ ಮೊಗ್ಗು ಅಲುಗಿದಂತೆ ಅಲುಗಿತು.

ಸಂಪಿಗೆಯು ಎಸಳು ಹೀಚಿದಂತೆ ಹೀಚಿತು. ಗುರುಬಸವಯ್ಯ ಮೂಲತಃ ಅವಿವೇಕಿಯಲ್ಲ. ಆದರೆ ಕಾಲವಶಕ್ಕೆ ತುತ್ತಾಗಿ ಈ ಅವಿವೇಕ ಅವನಿಂದ ಜರುಗಿದೆಯೆಂದು ಸ್ವಾಮಿಗಳು ತಿಳಿದರು. ತಡಮಾಡದೇ ಅವರು ಕರುಣಾರ್ದ್ರ ಹೃದಯಿಗಳಾಗಿ ಗುರುಬಸವನ ಮನೆಗೆ ಬಂದರು.

ಶಿವಯೋಗಿಗಳ ದರ್ಶನವಾದೊಡನೆಯೇ ಆತ ಮಹಾ ಪ್ರಯಾಸದಿಂದ ಮೇಲೆದ್ದು, ಅವರ ಪಾದದ ಮೇಲೆ ಉರುಳಿ, ತನ್ನ ಅಲ್ಪಮತಿಯ ಮಹಾ ಪಾಪವನ್ನು ಮನ್ನಿಸಬೇಕೆಂದು ಬೇಡಿಕೊಂಡನು.

'ಅಪ್ಪನವರೇ ಕಾಪಾಡಿರಿ ಕಾಪಾಡಿರಿ. ಅರಿಯದೇ ಅನ್ಯಾಯ ಕೋಟಿ ಯನ್ನು ಮಾಡಿದೆ. ಮನೆಗೆ ಬಂದ ಜಂಗಮ ವಾಕ್ಯವನ್ನೇ ಧಿಕ್ಕರಿಸಿ ಭೂತ ವನ್ನು ಬರಮಾಡಿಕೊಂಡೆ. ಕಾಪಾಡಿರಿ. ಕಾಪಾಡಿರಿ'– ಎಂದು ಆಳಲ ಸಾಗರ ದಲ್ಲಿ ಹೊರಳಿ ಬೇಡಿದ.

ಸ್ವಾಮಿಗಳು ಕರುಣಾಕಂಪಿತ ವದನರಾಗಿ ನಿಟ್ಟಿಸಿದರು. ಆತನ ತಲೆ ಯನ್ನು ದಡವಿ,

'ಗುರುಬಸವಾ, ಬೆದರಬೇಡ. ಮರಣ ಭಯ ಇಲ್ಲ. ಶಿವ ದೊಡ್ಡವನು ಕಾಯುತ್ತಾನೆ.'

–ಎಂದು ಹೇಳಿ ತಮ್ಮ ಮಠಕ್ಕೆ ಮರಳಿದರು.

ಆಗಲೇ ಎದೆಯಲ್ಲಿ ಶೈತ್ಯ ಸುರಿದಂತೆ, ಸಂಕಟದಲ್ಲಿ ಸುಧಾಮೃತ ಹರಿ ದಂತೆ, ಆತನ ಗಾಯದ ನೋವು ಕಡಮೆಯಾಗುತ್ತ ನಡೆಯಿತು. ಕೆಲಕಾಲ ದಲ್ಲೇ ಗುಣಮುಖನಾಗಿ ಪುನೀತನಾದ

# ಕರಿಗಡಬು-ತುಪ್ಪ-ಸಕ್ಕರಿ !

ಚಿತ್ತರಗಿಯ ಬೆಳಸಿ-ಕೆನೆಮೊಸರು ಬಹಳ ಪ್ರಸಿದ್ಧ. ಆದರೆ ಒಮ್ಮೆ ಅಲ್ಲಿಯೂ ಬರಗಾಲ ಬೀಳಬೇಕೆ? ಬಿತ್ತಿದ ಬೀಜ ನೆಲದಲ್ಲೇ ಸುಟ್ಟು ಹೋದವು. ಒಕ್ಕಲಿಗರು ಬಾಯಿತೆರೆದು ಆಕಾಶ ನೋಡಹತ್ತಿದರು. ಅಲ್ಲಲ್ಲಿ ಹರಕು ಮೋಡಗಳು ಕಣ್ಣಲ್ಲಿ ಮಣ್ಣೆ ರಚಿದಂತೆ ಮೋಸ ಮಾಡಿ ಮುಂದೆ ಸಾಗ ಹತ್ತಿದವು. ಕಣಜಗಳು ಖಾಲಿ ಆದವು. ಹಗೆಗಳು ತೀರಿಹೋದವು. ಬಾವಿಗಳು ಬತ್ತಿದವು. ಕೆರೆಗಳು ಕಲ್ಲಾದವು. ಹೊಲಗಳು ಹಂಚಾದವು. ದನಕರುಗಳು ಸಾವಿಗೀಡಾದವು.

ಅಂದು ಒಬ್ಬ ಭಕ್ತ ಚಿತ್ತರಗಿ ಮಠದ ಹೊರ ಜಗುಲಿಯ ಮೇಲೆ ಸಂಕ ಟದಿಂದ ಕುಳಿತಿದ್ದಾನೆ. ಹೊಟ್ಟೆಗೆ ಹಿಟ್ಟಿಲ್ಲದ್ದರಿಂದ ಸಿಟ್ಟು ನೆತ್ತಿಗೇರಿದೆ. ಅದೇ ಜಗುಲಿಯ ಮೇಲೆ ಒಬ್ಬ ಭಾವುಕನಾದ ಬಡ ಜಂಗಮನೂ ಕುಳಿತಿದ್ದಾನೆ. ಇಬ್ಬರಿಗೂ ಉದ್ವೇಗ. ಇಬ್ಬರಿಗೂ ಕಷ್ಟ. ಒಳಕೋಣೆಯಲ್ಲಿ ವಿಜಯ ಮಹಾಂತ ಶಿವಯೋಗಿಗಳು ಕುಳಿತಿದ್ದಾರೆ. ಕೆಲಹೊತ್ತಿನ ಹಿಂದೆಯೇ ಅವರು ಹುನಗುಂದದಿಂದ ಚಿತ್ತರಗಿಗೆ ದಯಮಾಡಿಸಿದ್ದಾರೆ. ಆದರೆ ಜಗುಲಿಯ ಮೇಲೆ ಕುಳಿತ ಇವರಿಬ್ಬರಿಗೆ ಸ್ವಾಮಿಗಳು ಬಂದದ್ದು ಗೊತ್ತೇ ಇಲ್ಲ. ತಮ್ಮ ಡಂಬರಾ ಟದ ತರ್ಕಾಚಾರವನ್ನು ಮುಂದುವರೆಸಿದ್ದಾರೆ. ಭಕ್ತ ಸ್ವಲ್ಪ ಖಾಕಿನಿಂದಲೇ ಮಾತು ಮುಂದುವರಿಸಿ ಜಂಗಮರನ್ನು ನಿಂದಿಸತೊಡಗಿದ.

'ಅಯ್ನೋರಂತೆ ಅಯ್ನೋರು....! ಈ ಮಠದಯ್ಯಗಳಿಗೆ ಕೂಳು ಹಾಕಿದ್ದರಿಂದಲೇ ಮಳೆ ಕಟ್ಟಾಯಿತು. ಬರಗಾಲ ಬಿತ್ತು. ಎಂದಿಗೂ ಈ ಅಯ್ನಾರ ಕುಲಾ ನಂಬಬಾರದು. ಇವರು ಮನೆಹಾಳಬಡಕರು. ಹೊಟ್ಟೇ ಪ್ರೀಯರು. ಹುಂಬ ಜನಾ, ಇವರಿಗೆ ಹೋಳ್ಗಿ ತುಪ್ಪಾ ಹಾಕ್ಕೊಂತೇ ಹೋಗತಾವು. ಸ್ವಲ್ಪೂ ಬುದ್ಧಿ ಇಲ್ಲಾ'

ಭಕ್ತನ ಈ ಮಾತು ಕೇಳಿ ಬಡಜಂಗಮ ತಬ್ಬಿಬ್ಬಾಗಿ ಹೋದ. ಆತ ತುಂಬ ಭಾವೈಕ್ಯ, ನಿಷ್ಠಾವಂತ, ಭಕ್ತನಿಗೆ ಉತ್ತರಿಸಿದ—

'ಹುಚ್ಚಪ್ಪಾ, ಹಾಗೆಲ್ಲಾ ಜಂಗಮರ ಕುಲಾ ಬಯ್ಯಾಬಾರ್ದು. ಅವರಿಗೂ ಈ ಮಳೀಗೂ ಏನು ಸಂಬಂಧ? ಜಂಗಮರ ನಿಂದಾ ಈ ಲೋಕದಾಗ ಹೆಚ್ಚ

ಆದದ್ದಕ್ಕಾಗಿ ಮಳಿ ಬಂದಾಗೇತಿ ಅಂತೀನಿ. ಇದಕ್ಕ ನೀ ಏನಂತೀ ?'

'ಏನನ್ನೂದು ಐತಿ. ನೀನೂ ಜಂಗಮರ ಮರೀನ ಅದೀದಿ. ನಿನಗ ತಕ್ಕಂಗ ಮಾತಾಡತೀದಿ.'

'ಹೌದ್ಯ? ಹಂಗಾಂದ್ರ ನೋಡು. ಏನ್ಯ ಆದ್ರೂ ಪುರಮಾಸಿ ನೋಡ ಬೇಕಿನಪಾ. ನೀ ಬೇಕಾದ್ರ ಇವತ್ತ ಸಾವಿರ ಜನ ಜಂಗಮರಿಗೆ ಕರಿಗಡಬು–ತುಪ್ಪಾ–ಸಕ್ರಿ ಉಣಿಸು, ಆ ಮೇಲೆ ನೋಡು. ಒಂದು ವೇಳೆ ಮಳೆ ಆಗದಿದ್ದರೆ ಈ ಜಂಗಮ ಕುಲಾ ಅಲ್ಲಾ ಅಂತ ಗೋಡಿಮ್ಯಾಲ ಬಟ್ಟು ಇಡು. ವಿಜಯ ಮಾಂತೇಶಾ ಸುಳ್ಳು ಅಂತ ಊರಾಗ ಸಾರಿಬಿಡು ಡಂಗರಾ. ಆಯ್ತು?'

ಭಕ್ತ ಖಾಕಿನಿಂದ ಉತ್ತರಿಸಿದ—

'ಹೊಟ್ಟಿಗೆ ಅಂಬಲಿ ಇಲ್ಲದಾಗ ಸಾವಿರ ಜನಕ್ಕ ಕರಿಗಡಬು-ತುಪ್ಪಾ ಹಾಕಬೇಕಂತ! ಬಂದಷ್ಟು ಬರಲಿ, ತಿಂದು ಹೋಗಬೇಕಂತೀಯೇನು?'

'ಬೇಕಾದ್ರ ನನ್ನನ್ನ ಬಿಟ್ಟು ಸಾವಿರ ಜನಾ ಉಣಿಸಪಾ. ಆತ್ಯ?'

'ಹೌದಲೇ! ಸಾವಿರ ಜನರು ಸುರಕೊಂಡು ತಿಂದು ಹೋದ್ರ್ಯ ಅಂತ ತಿಳಕೋ. ಮುಂದ ಮಳೀನ ಬರದಿದ್ರ ಖರ್ಚು ಯಾರ ಕೊಡವ್ರೋ ಗೆಳೆಯಾ?'

'ಹಂಗಾದ್ರ ನನ್ನಲ್ಲಿ ನಂಬಿಕೆ ಇಲ್ಲಾ ಅನ್ನು?'

'ಇಲ್ಲಾ ಯಾಕ, ಐತಿ ಅಂತ ತಿಳಕೋ. ಬೇಕಾದಷ್ಟು ಐತಿ. ಆದರ ಮೊದಲು ಮಳೀ ತರಸು. ಆ ಮೇಲೆ ಕರಿಗಡಬು–ತುಪ್ಪಾ–ಸಕ್ಕರಿ ತಿನ್ನು.'

'ಖರೇ ಅಂದ್ರ ಕರಿಗಡಬು–ತುಪ್ಪಾ–ಸಕ್ಕರಿ ಉಣಿಸ್ತೀಯಾ?'

'ಓಹೋ ಅದಕ್ಕೇನು?'

'ಸಾವಿರ ಜನಕ್ಕ ಉಣಿಸ್ತಿಯ್ಯಾ?'

'ಸಾವಿರದಾ ಒಂದು ಜನರಿಗೆ ಅಂತ ತಿಳಿ. ಆದ್ರ ನಾಳೆ ಬೆಳಗ ಅನ್ನೂದ್ರಾಗ ಮಳಿ ಆಗಬೇಕು. ಇಲ್ಲವಾದರೆ ನಿಮ್ಮ ಕುಲಾಕುಲಾನೇ ಅಲ್ಲಾ.'

'ಹಾಗಾದರೆ ನೋಡು. ಮಳೆ ಇವತ್ತು ಬಂದೇ ಬಿಡುತ್ತದೆ. ಅದು ಬರದಿದ್ದರ ಚಿತ್ತರಗಿ ಮಾಂತೇಶಾ ಸುಳ್ಳು ಎಂದು ಸಾರು' ಎಂದು ಸ್ವಲ್ಪ ಸಿಡುಕಿನಿಂದಲೇ ಉತ್ತರಿಸಿದ ಜಂಗಮ.

ಮಠದ ಒಳಕೋಣೆಯಲ್ಲಿದ್ದ ಶಿವಯೋಗಿಗಳಿಗೆ ಇಬ್ಬರ ಮಾತೂ ಕೇಳಿದವು. ಜಂಗಮನ ಪಣವನ್ನು ಕೇಳಿ ಅವರಿಗೆ ಸಿಟ್ಟು ಬಂತು. ಆತ ಅಹಂಕಾರಕ್ಕೆ ಇಳಿದು ಈ ಮಾತು ಆಡಿದ್ದಾನೆಂದು ಗೊತ್ತಾಯಿತು. ಕೂಡಲೇ ಆ ಬಡ ಜಂಗಮನನ್ನು ಕರೆಸಿದರು. ಸ್ವಾಮಿಗಳು ಇಲ್ಲೇ ಇದ್ದಾರೆಂದು ಗೊತ್ತಾದ ಮೇಲೆ ಆ ಜಂಗಮನ ಹೊಟ್ಟೆಯಲ್ಲಿ ಕಡಗೋಲು ಆಡಿಸಿದಂತಾಯಿತು. ಮೆಲ್ಲನೇ ಬಂದು ನಿಂತ, ಸ್ವಾಮಿಗಳು ಸಿಟ್ಟಿನಿಂದಲೇ ಕೇಳಿದರು—

''ಏನಪಾ ದೊಡ್ಡ ಮನುಷ್ಯಾ. ಮಳೆ ತರಿಸ್ತಿಯಾ ? ತರಿಸು. ಏನೂ ಮಳೆ ಅಂದರ ನಿನ್ನ ಮನೀ ಆಳು ಅಂತ ತಿಳಿದೀಯೋ ? ಮತ್ತ ಮೇಲೆ ಮಾಂತೇಶನ ಆಣೆ ಇಡುವ ಧೈರ್ಯ !''

ಬಡಜಂಗಮ ನುಡಿದ—

''ಇಲ್ಲ ಬುದ್ಧಿ, ತಪ್ಪಾಯ್ತು. ಕ್ಷಮಿಸಿ. ಆತ ಅಯ್ನೋರ ಕುಲವನ್ನೇ ಬಯ್ಯಹತ್ತಿದ ಅದಕ್ಕೆ....

''ಪವಾಡಾ ಮಾಡಿ ತೋರಿಸಲಿಕ್ಕೆ ಹೊರಟಿ ಏನು ಅವನಿಗೆ? ಕಾಲೆತ್ತಾಕ ಬರದವ ಕಪಲಿಬಾವಿ ಹಾರ್ತೀಯಾ ?—ನಿನ್ನ ಶಕ್ತಿ ಎಷ್ಟು ಇದೆ ಅಷ್ಟೇ— ಮಾತಾಡಬೇಕು. ಇವತ್ತು ಮಳಿ ಬರದಿದ್ದರ ಅಯ್ನೋರ ಕುಲಾ ಸುಳ್ಳು. ಚಿತ್ತರಗಿ ಮಾಂತೇಶಾ ಸುಳ್ಳು ಅಂತ ಹೇಳಿದ್ಯೋ ಇಲ್ಲೋ ?''

''ಹೌದು ಬುದ್ಧಿ. ಹೌದು. ಮಾಂತೇಶ ಕೈಬಿಡುವದಿಲ್ಲಾ ಅಂತ ನಂಬಿಗೀಲಿಂದ ಹೇಳೇನಿ ಬುದ್ಧಿ. ಇದೊಂದು ಸಲ....

''ಏನು ಇದೊಂದು ಸಲ? ನನ್ನನ್ನೇ ಅವನ ಮುಂದೆ ಆಣೆಗೆ ಒತ್ತಿ ಇಟ್ಟುಬಿಟ್ಟಿರುವಿ. ಜನರಲ್ಲಿ ಅಪವಾದಕ್ಕೆ ನಮ್ಮನ್ನು ಗುರಿ ಮಾಡಿಬಿಟ್ಟಿ. ಚನ್ನಾಯ್ತು, ನೋಡು ಇವತ್ತು ರಾತ್ರಿ ಮಠದಲ್ಲಿ ಮಲಗಲು ಬಾ ತಿಳೀತೆ ?''

''ಆಗಲಿ ಬುದ್ಧಿ ಆಗಲಿ.''

ಶಿವಯೋಗಿಗಳು ಇನ್ನೂ ಗಂಭೀರರಾದರು, ಅಲ್ಲದೆ ಇಂದು ಮಳೆ ಬರದಿದ್ದರೆ ಚಿತ್ತರಗಿ ಮಾಂತೇಶ ಸುಳ್ಳು, ಜಂಗಮವೇ ಸುಳ್ಳು ಎಂದು ಬೇರೆ ಈತ ಸಾರಿಬಿಟ್ಟಿದ್ದಾನೆ. ಇದು ಜಂಗಮಕ್ಕೆ ಪ್ರಾಣಸಂಕಟವೆಂದು ಕಳವಳ ಪಟ್ಟರು.

ಆ ದಿನ ಬಡ ಜಂಗಮ ಮಠಕ್ಕೇ ಮಲಗಲು ಬಂದ. ಮಧ್ಯರಾತ್ರಿಯಲ್ಲಿ ಸ್ವಾಮಿಗಳು ಅವನನ್ನು ಎಬ್ಬಿಸಿದರು. "ಹೊರಗೆ ಹೋಗಿ ನೋಡಿ ಬಾ; ಆಕಾಶ

ದಲ್ಲಿ ಏನಾದರೂ ಮೋಡ ಬಂದಿವೆಯೋ ಎಂಬುವನ್ನು'' ಎಂದರು. ಆತ ಮಠದ ಹೊರಬೈಲಿಗೆ ಬಂದು ನೋಡಿದ. ಇಡೀ ಆಕಾಶದಲ್ಲಿ ತುಂಡು ಮೋಡ ಇಲ್ಲ ! ನಕ್ಷತ್ರಗಳು ಸ್ವಚ್ಛವಾಗಿ ಮಿನುಗುತ್ತಿದ್ದವು. ಝಳ ಸುರಿಯುತ್ತಿತ್ತು. ಗಾಳಿ ನಿಶ್ಚಲವಾಗಿತ್ತು. ಗಿಡದ ಎಲೆಗಳು ಸ್ವಲ್ಪವೂ ಅಲ್ಲಾಡುತ್ತಿರಲಿಲ್ಲ.

ಆತ ಬಂದು ಶಿವಯೋಗಿಗಳಿಗೆ ವಸ್ತುಸ್ಥಿತಿ ಅರಿಕೆ ಮಾಡಿದ. ಈಗ ಶಿವಯೋಗಿಗಳೇ ಒಂದು ನಿಮಿಷ ಹೊರಗೆ ಹೋದರು. ಮಠದ ಅಟ್ಟದ ಮೇಲೆ ಆಕಾಶದಲ್ಲಿ ಕಣ್ಣಿಟ್ಟು ಏನನ್ನೋ ನೋಡಿದರು. ಎರಡು ಕೈಗಳನ್ನು ಮೇಲೆತ್ತಿ ಯಾರನ್ನೋ ಕರೆದಂತೆ ಕೈಸನ್ನೆ ಮಾಡಿದರು. ನಂತರ ಮೌನದಿಂದ ಒಳಗೆ ಬಂದರು.

ಒಂದೆರಡು ನಿಮಿಷ ಮಾತ್ರ ಕಳೆದವು. 'ಈಗ ಹೋಗಿ ನೋಡಿ ಬಾ' ಎಂದು ಶಿವಯೋಗಿಗಳು ಬಡ ಜಂಗಮನಿಗೆ ಎರಡನೇ ಸಲ ನುಡಿದರು. ಆತ ಹೋಗಿ ನೋಡುತ್ತಾನೆ; ಪಶ್ಚಿಮ ದಿಕ್ಕಿನ ಕೊನೆಯಲ್ಲಿ ಪೆಡಂಭೂತದಂತೆ ಮಹಾಮೋಡ ಏಳುತ್ತಿದೆ! ಬೆಂಕಿಯ ಗಾಳಿ ಬಂದಂತೆ ಮಿಂಚುಗಳು ಚಿಗಿಯುತ್ತಿವೆ !! ಬಹು ದೂರದಿಂದ ಗುಡುಗುಡು ಶಬ್ದ ಕೇಳಿಬರುತ್ತಿದೆ !!!

ಐದು ನಿಮಿಷ ದಾಟಲಿಲ್ಲ. ಭಯಂಕರ ವೇಗದ ಗಾಳಿಯೊಂದು ಭೋರನೇ ಬೀಸಿಬಿಟ್ಟಿತು. ಮಾಳಿಗೆಯ ಮೇಲೆ ಮಲಗಿದವರ ಕೌದಿ ಕಂಬಳಿಗಳು ಹಾರಿ ಎಲ್ಲಿಯೋ ಹೋಗಿ ಬಿದ್ದವು. ಹಂಚುಗಳು ಸೂರೆಯಾದವು. ತಗಡುಗಳು ಜಾಗಟೆ ಹೊಡೆಯುತ್ತ ತೂರಿಹೋದವು. ದನಕರುಗಳು ಕೂಗಹತ್ತಿದವು. ಚಿಕ್ಕಮಕ್ಕಳು ಚೀರಹತ್ತಿದವು. ಗುಡಿಸಲುಗಳು ತಳಬುಡ ಕಿತ್ತು ಹಾರಿದವು.

ಬಿರುಗಾಳಿಯೊಂದಿಗೆ ಕರಿಯ ಮೋಡಗಳು ಆಕಾಶದಲ್ಲಿ ಒಂದಕ್ಕೊಂದು ಡಿಕ್ಕಿಹಾಯುತ್ತ ಬಂದವು. ಮಿಂಚುಗಳು ರಣಸಿಡಿಲಾಗಿ ಅಪ್ಪಳಿಸಿದವು.

ಇನ್ನು ತಡವಾಗಲಿಲ್ಲ. ಆಕಾಶವೇ ಹರಿದು ನೆಲದ ಮೇಲೆ ಕುಪ್ಪಳಿಸಿ ಬಿದ್ದಂತೆ ಭಾರೀ ದೊಡ್ಡ ಮಳೆ ಬೀಳಹತ್ತಿತು. ಮಳೆಯ ಹನಿಗಳ ಏಟಿಗೆ ಎಲ್ಲ ಮನೆಗಳೇ ಪುಡಿಯಾಗುವವೋ ಎಂಬಂತೆ ದೊಡ್ಡ ದೊಡ್ಡ ಹನಿಗಳು ಬಿರುಸಿನಿಂದ ಸಿಡಿಯಹತ್ತಿದವು. ಅವು ಹನಿಗಳಲ್ಲ! ಹೊಳೆಗಳು! ಅನೇಕ ಜನರಿಗೆ ಅಂಗಳದಲ್ಲಿ ಒಣಹಾಕಿದ ಅಕ್ಕಡಿಕಾಳು–ಮೆಣಸಿನಕಾಯಿ–ಸಂಡಿಗೆ–ಹಪ್ಪಳ

ಗಳನ್ನು ತರುವದೇ ಆಗಲಿಲ್ಲ. ಮಳೆರಾಯ ಹಸಿದು ಬಂದು ಅವುಗಳನ್ನು ಛಪ್ಪರಿಸಿಬಿಟ್ಟ.

ಭಾವಿಗಳು ತುಂಬಿದವು. ಕೆರೆಗಳು ತುಳುಕಿದವು. ಹೊಲಗಳ ಒಡ್ಡು ಗಳು ಕೊಚ್ಚಿ ಹೋದವು. ಗುಡಿಸಲುಗಳು ಕಸಗುಡಿಸಿದವು. ಹಳ್ಳಿಯ ಮನೆ ಗಳು ತಂಗಳ ಅಂಬಲಿಯಂತೆ ಅಳ್ಳಕಾದವು. ಅಷ್ಟೇ ಏಕೆ; ಬಡಜಂಗಮನೊಂ ದಿಗೆ ವಾದಿಸಿದ ಆ ಮುಟ್ಟಾಳ ಭಕ್ತನ ಮನೆ ಅಡಿಗಲ್ಲೊಂದನ್ನೇ ಬಿಟ್ಟು ಹರಿದು ಹೋಗಿಬಿಟ್ಟಿತ್ತು! ಪುಣ್ಯಕ್ಕೆ ಆತ ಹಾಗೂ ಹೆಂಡತಿ ಮಕ್ಕಳು ಪಾರಾಗಿ ರಕ್ಷಣೆಗೆಂದು ಮಠಕ್ಕೇ ಓಡಿಬಂದರು!!

ಬಡಜಂಗಮನಿಗೆ ಸ್ವಾಮಿಗಳು ನುಡಿದರು—

'ದಿಟ್ಟತನದಿಂದ ನನ್ನ ಹೆಸರು ಮುಂದಿಟ್ಟು ಆಣೆ ಮಾಡಿದ್ದೆ. ಇಗೋ ಮಳೆ ಬಂದಿದೆ. ಇನ್ನು ಕರಿಗಡಬು-ತುಪ್ಪ-ಸಕ್ಕರಿ ತಿನ್ನು.'

ಬಡಜಂಗಮನನ್ನು ಕೆಣಕಿದ ಭಕ್ತನಿಗೇ ಏನು ಹೊಳೆಯಿತೋ ಏನೋ; ಬೆಳಗಿನಲ್ಲಿ ಓಡಿಬಂದು ಸ್ವಾಮಿಗಳ ಪಾದಕ್ಕೆ ಬಿದ್ದ. ಸ್ವಾಮಿಗಳು ನುಡಿದರು—

'ಜಂಗಮನ ಪಣ ಗೆದ್ದಿತು. ಇನ್ನು ನಿನ್ನ ಪಣ ಏನು........?'

ಆತ ಮರುಮಾತಿಲ್ಲದೇ, ತನ್ನ ಹಳೆಯ ದುಡ್ಡಿನ ಗಂಟು ಬಿಚ್ಚಿ, ಸಾವಿರಕ್ಕೂ ಮೇಲ್ಪಟ್ಟು ಜಂಗಮರಿಗೆ ಕರಿಗಡಬು-ತುಪ್ಪ-ಸಕ್ಕರಿಯನ್ನು ಧಾರಾಳವಾಗಿ ಊಟಮಾಡಿಸಿದ.

# ಆಕಾಶದಲ್ಲಿ ಕೊಡೆ

ವಿಜಯ ಮಹಾಂತ ಶಿವಯೋಗಿಗಳ ತ್ರಿಕಾಲ ಲಿಂಗಪೂಜೆಗೆ ಭಂಗ ಬರಲಿಲ್ಲವೆಂತಲ್ಲ. ಯಾವ ಕಾರ್ಯಕ್ಕಾದರೂ ವಿಘ್ನಗಳು ಸ್ವಾಭಾವಿಕವಲ್ಲವೇ? ಮೇಲಾಗಿ ಯೋಗ ಸಾಧನೆಯಲ್ಲಿ ಆತಂಕಗಳು ಉದ್ದೇಶಪೂರ್ವಕವಾಗಿಯೇ ಬರುತ್ತವೆ.

ವಿಜಯ ಮಹಾಂತ ಸ್ವಾಮಿಗಳಿಗೆ ಒಮ್ಮೆ ಶೀತಜ್ವರ ಅತಿಯಾಗಿ ಬಾಧಿಸಿತು. ಸ್ನಾನಮಾಡುವದು ಇರಲಿ, ಎದ್ದು ಕೂಡ್ರುವದೂ ಅಸಾಧ್ಯ ವಾಯಿತು. ಮಲಗಿದಲ್ಲಿ ಮಿಸುಗಲೂ ಕಷ್ಟವಾಯಿತು. ಇವರಲ್ಲಿ ಆತ್ಮ ಪರಿಶೋಧನೆ ಬಹಳ, ನಾನು ಏನು ಅನ್ಯಾಯ ಮಾಡಿದೆ? ಜಂಗಮನನ್ನು ಜರಿದೆನೇ? ಭಕ್ತರ ಮನವ ನೋಯಿಸಿದೆನೆ? ದುರಾಚಾರಿಗಳಿಗೆ ಗೌರವಿಸಿದೆನೆ? ಶ್ರೀಮಂತಿಕೆಗೆ ಸೊಪ್ಪಾದೆನೆ? ಷಡ್ರಸಾನ್ನ ಭೋಜನ ಬಯಿಸಿದನೇ ?— ಅಡ್ಡಪಲ್ಲಕ್ಕಿಯ ರಥೋತ್ಸವ ರಮಿಸಿದೆನೇ? ಸ್ತ್ರೀಲೋಲರಿಗೆ ಆದರಿಸಿದೆನೆ?— ಎಂದು ಹಲವು ವಿಧವಾಗಿ ಚಿಂತಿಸಿದರು. ಪರಿಹಾರ ದೊರೆಯಲಿಲ್ಲ.

ಕೊನೆಗೆ 'ಅಪ್ಪನವರೇ' ಅವರಿಗೆ ಮಾರ್ಗದರ್ಶನ ನೀಡಿದರು. 'ಅಪ್ಪನವರ' ಅಪ್ಪ ಸಂಗಮೇಶ್ವರನಲ್ಲವೇ? ಅವನನ್ನೇ ನೆನೆ. ಆತನನ್ನೇ ಆರಾಧಿಸು ಎಂದು ಅಂತರಾತ್ಮ ಕೂಗಿ ಹೇಳಿತು. ಪೂಜ್ಯ ಬಸವಣ್ಣನವರಿಗೆ ಇವರು ಮಹಾ ಗೌರವದಿಂದ 'ಅಪ್ಪನವರು' 'ಅಪ್ಪಗಳು' ಎಂದು ಅಂದರೆ; ಬಸವಣ್ಣನವರ ಬಾಳಿಗೆ ಬೆಳಕಾದ ಸಂಗಮೇಶ್ವರ ದೇವರನ್ನು ಮಾತ್ರ ಏಕ ವಚನದಿಂದ, ಸಣ್ಣಹುಡುಗರಿಗೆ ಕರೆದಂತೆ 'ಸಂಗಾ' ಎಂದು ಕರೆಯುತ್ತಿದ್ದರು!

ಜ್ವರಬಾಧೆಯಿಂದ ಹಾಸಿಗೆಯಲ್ಲೇ ಪ್ರಾರ್ಥಿಸಿದರು— 'ಎಲೆ ಸಂಗಾ. ತ್ರಿಕಾಲ ಪೂಜೆಗೆ ಭಂಗ ತರಬೇಡ. ಶೀತಜ್ವರ ದೂರಮಾಡು. ನಿನ್ನ ಕ್ಷೇತ್ರದಲ್ಲಿ ಗಣಾರಾಧನೆಯನ್ನು ಮಾಡಿಸುತ್ತೇನೆ' ಎಂದು ಒಂದು ಬೆಳ್ಳಿ ರೂಪಾಯಿ ಯನ್ನು ಮುಡಿಪುಕಟ್ಟಿ ಇಟ್ಟರು. ತಕ್ಷಣವೇ ಜ್ವರನಿಂತಿತು. ಶೀತ ತೊಲಗಿತು.

ಕೆಲದಿನಗಳು ಕಳೆದವು. ಸಂಗಮೇಶ್ವರನ ಮಂದಿರದಲ್ಲಿ ಮಹಾಗಣಾ ರಾಧನೆ ಮಾಡಿಸುವದನ್ನು ಕಾರ್ಯಭಾರದಲ್ಲಿ ಸ್ವಲ್ಪ ಮರೆತಿದ್ದರೆಂದು ಕಾಣು ತ್ತದೆ! ಬೆಂಗಳೂರಿನ ಭಕ್ತನೋರ್ವ ಸಂಗಮೇಶ್ವರನ ಕ್ಷೇತ್ರದಲ್ಲಿ 'ಬಸವ

ಪುರಾಣ'ದ ಪ್ರವಚನ ನಡೆಸಿದ, ಮಂಗಲೋತ್ಸವಕ್ಕೆ ಗಣಾರಾಧನೆ ಮಾಡಿಸಲು ಬಯಸಿ ನೇರವಾಗಿ ಇಲಕಲ್ಲಿಗೆ ಬಂದು ಸ್ವಾಮಿಗಳಿಗೆ ಸಹಾಯಕ್ಕಾಗಿ ಯಾಚಿಸಿದ. ಶಿವಯೋಗಿಗಳಿಗೆ ನಗುವೂ ಬಂತು, ಅಚ್ಚರಿಯೂ ಆಯಿತು. ತಮ್ಮ ಮರವೆಗೆ ನಕ್ಕರು, ಸಂಗನ ಎಚ್ಚರಿಕೆಗೆ ಅಚ್ಚರಿಗೊಂಡರು. ತಕ್ಷಣವೇ ಅವನ ಕೈಯಲ್ಲಿ ನೂರಾ ಒಂದು ಬೆಳ್ಳಿಯ ರೂಪಾಯಿಗಳನ್ನು ಕೊಟ್ಟು ಕಳಿಸಿದರು. ಸ್ವಾಮಿಗಳು ಅಷ್ಟಕ್ಕೇ ಬಿಡದೇ ಗಣಾರಾಧನೆಯ ಸಮಯಕ್ಕೆ ತುಪ್ಪದ ಕೊಡಗಳನ್ನು ಹೊರಿಸಿಕೊಂಡು ಸಂಗಮಕ್ಕೆ ದಯಮಾಡಿಸಿದರು. ಅಲ್ಲಿ ಜಂಗಮರು ಎಣಿಸಲು ಅಸಾಧ್ಯವಾಗುವಂತೆ ನೆರೆದಿದ್ದರು. ಪ್ರಸಾದ ಮಂದಿರ ಸಾಲಲೇ ಇಲ್ಲ, ಮಹಾಜಂಗಮರೆಲ್ಲ ಊಟದ ಜಾಗೆಯ ಸಲುವಾಗಿ ಗುದ್ದಾಡತೊಡಗಿದರು! ಸ್ವಾಮಿಗಳು ತಕ್ಷಣವೇ ಒಂದು ಉಪಾಯ ಹೂಡಿ, ಎಲ್ಲರೂ ಪ್ರಸಾದ ಗೃಹವನ್ನು ಬಿಟ್ಟು ಹೊರಗೆ ಬಂದು, ವಿಶಾಲವಾದ ಪಟಾಂಗಣದಲ್ಲಿ ಸಮಾನ ಭಾವನೆಯಿಂದ ಕುಳಿತು ಭೋಜನಗೈಯಲು ಹೇಳಿದರು. ಆದರೆ ಆ ಸೂಚನೆ ವಿಫಲವಾಯಿತು. ಅನೇಕರು ಹೇಳಿದರು—

'ಸ್ವಾಮಿಗಳೇ ಪಟಾಂಗಣದಲ್ಲಿ ಹೇಗೆ ಕುಳಿತುಕೊಳ್ಳುವದು? ಈಗ ನಡುಮಧ್ಯಾಹ್ನ, ಮೇಲೆ ಉರಿಬಿಸಿಲಿದೆ. ಕಲ್ಲುಗಳು ಕಾದಿವೆ. ಕುಳಿತರೆ ಚುರುಕನ್ನುತ್ತಿದೆ'.

ಸ್ವಾಮಿಗಳು ಪ್ರಸನ್ನವದನರಾಗಿ ಉತ್ತರಿಸಿದರು—

'ಇಷ್ಟು ಸಣ್ಣ ಮಾತಿಗೆ ಏಕೆ ಚಿಂತಿಸುವಿರಿ? ನಿಮ್ಮ ಚಿಂತೆ ಸಂಗನಿಗೆ ಅರ್ಪಿಸಿರಿ. ಅವನು ಕೊಡೆಹಿಡಿದು ನೆರಳುಮಾಡಿಯಾನು' ಎಂದರು.

ಶಿವಯೋಗಿಗಳಿಗೆ ಎದುರುತ್ತರ ಕೊಡುವದು ಅಸಾಧ್ಯ ಎಂದು ಕೆಲವರು ಗೊಣಗಿದರು.

ಆದರೆ ನೋಡುನೋಡುವಷ್ಟರಲ್ಲಿ ಮೇಲೆ ನೀಲಾಕಾಶದಲ್ಲಿ ಪ್ರಚಂಡ ಗಾತ್ರದ ಕರಿಯಮೋಡ ಒಂದು ಸೂರ್ಯನನ್ನು ಮುಸುಕಿಬಿಟ್ಟಿತು. ಶೀತಲ ನೆರಳು ಆವರಿಸಿತು. ವಿಜಯ ಮಹಾಂತ ಶಿವಯೋಗಿಗಳ ಅಗಾಧ ಸಾಮರ್ಥ್ಯವನ್ನು ಎಲ್ಲರಿಗೆ ಕಪಾಳದ ಮೇಲೆ ಬರೆಕೊಟ್ಟು ತೋರಿಸಿದಂತಾಯಿತು. ಶಿವಯೋಗಿಗಳಿಗೆ ಗಣಂಗಗಳೆಲ್ಲ ಮಣಿದು—

'ಬುದ್ಧಿಯವರೇ, ತಾವು ದೊಡ್ಡವರು, ಮೋಡವನ್ನು ತರಿಸಿದಿರಿ' ಎಂದರು. ಅದಕ್ಕೆ ಸ್ವಾಮಿಗಳು—

'ನಾನೇನೂ ತರಿಸಿಲ್ಲ. ಆ ಸಂಗಮೇಶ್ವರನೇ ನಿಮಗೆ ಕೊಡೆ ಹಿಡಿವನು' ಎಂದು ಹೇಳಿ ಜಾಣತನವನ್ನು ಆರಂಭಿಸಿದರು. ಗಣಂಗಳೆಲ್ಲ ವಿಶ್ವವನ್ನೇ ಮರೆತು ಪಂಚಪಕ್ವಾನ್ನಗಳಲ್ಲಿ ತಲ್ಲೀನರಾದರು!

ಎಲ್ಲ ಊಟ ಮುಗಿಯಿತು. ಇನ್ನು ಎಲೆಗಳನ್ನು ಯಾರು ತೆಗೆಯಬೇಕು? ಆ ಕಾರ್ಯಕ್ಕೆ ಗಣಂಗಳೇ ನಿಂತರು. ಅದನ್ನು ಕಂಡು, ಮುಮ್ಮುಲನೇ ಮರುಗಿ ಶಿವಯೋಗಿಗಳು ಮಾರುತನಿಗೆ ಅಪ್ಪಣೆ ಮಾಡಿದರು— 'ಜಂಗಮರ ಸೇವೆ ಮಾಡು, ಎಲೆ ತೆಗೆ' ಎಂದು. ಕೂಡಲೇ ಮಹಾ ಬಿರುಗಾಳಿಯೊಂದು ಭರ್ರನೆ ಬಂದ ಸಹಸ್ರಾರು ಎಲೆಗಳನ್ನು ಎತ್ತಿಕೊಂಡು ಕೃಷ್ಣಾನದಿಗೆ - ಕೃಷ್ಣಾರ್ಪಣ ಮಾಡಿಬಿಟ್ಟಿತು.

# ಬಾವಿಯಲ್ಲಿ ಬಿದ್ದ ಬಸುರಿ

ಬಾದವಾಡಿಗೆಯ ಬ್ರಾಹ್ಮಣರೆಲ್ಲರೂ ಸಜ್ಜನರು. ಚಿತ್ತರಗಿ ಪೀಠದಲ್ಲಿ ಸದ್ಭಾವನೆಯುಳ್ಳವರು. ಆದರೆ ಅನ್ನದಲ್ಲಿ ಹರಳು ಸೇರುವಂತೆ ಓರ್ವ ಬ್ರಾಹ್ಮಣ ಶಿಕ್ಷಕನಾಗಿ ಆ ಊರಿಗೆ ಬಂದು ತಂಗಿದ. ಕಾಲಾವಧಿಯಲ್ಲಿ ಒಂದು ವಿಚಿತ್ರ ಘಟನೆಯೇ ನಡೆಯಿತು.

ವಿಜಯ ಮಹಾಂತ ಶಿವಯೋಗಿಗಳು ಭಕ್ತರ ಆಗ್ರಹದಿಂದ ಬಾದವಾಡಿ ಗ್ರಾಮಕ್ಕೆ ದಯಮಾಡಿಸಿದರು. ಅದನ್ನು ನೋಡಿದ ಆ ವಿಪ್ರ ವ್ಯಂಗ್ಯವಾಗಿ ನಕ್ಕು ; ತನ್ನ ಶಾಲೆಯ ಕಟ್ಟೆಯ ಮೇಲೆ ಬೇವಿನಗಿಡದ ನೆರಳಿಗೆ ಕುಳಿತು ಹತ್ತೆಂಟು ಜನರಿಗೆ ಕುತ್ಸಿತದಿಂದಲೇ ಹೇಳಿದ—

''ನಿಮ್ಮ ಸ್ವಾಮೀ ಬಂದಾನು ಹೋಗಿರಿ. ಬಿನ್ನಾಯಾ ಹೇಳಿರೊ ಇಲ್ಲೋ ? ಹಸದು ಬಂದಂಗೆ ಕಾಣಿಸ್ತೈತಿ.''

ಅವರು ಕೇಳಿದರು—

''ಯಾವ ಸ್ವಾಮಿಗಳು ?"

''ಅವನೇ. ಇಲಕಲ್ಲ ಮಾಂತಪ್ಪಾ....ಆಕಳಾ ಹೊಡಕೊಂಡು ಅದನ್ನ ಕಾಯಕೊಂತ ಬಂದಾನ ಹೋಗ್ರಿ.''

ನೆರದ ಜನರಲ್ಲಿ ಒಬ್ಬನು ಹೇಳಿದನು—

'ಛೇ ಹಾಗನ್ನಬಾರದ್ರಿ ರಾಯರೇ. ಅವರು ಪವಾಡ ಪುರುಷರು, ಉಗ್ರ ಮೂರ್ತಿಗಳು.'

ಬ್ರಾಹ್ಮಣ ಕಿಸ್ಸೆಂದು ನಕ್ಕು ಉತ್ತರಿಸಿದ—

''ಓ ಉಗ್ರ ಮೂರ್ತಿಗಳೋ ? ಇದ್ದರೂ ಇರಬಹುದು, ಯಾಕೆಂದರ ಅವನ ಮೋತಿ ಕಡ್ಡಿ ಕಂಡಂಗ ಕಾಣ್ತದ.''

''ರಾಯರ, ನಿಮಗೇನೋ ಕೆಡಗಾಲ ಬಂದದ. ಆದ್ದರಿಂದ ಅವರನ್ನ ಅಪಹಾಸ್ಯ ಮಾಡ್ತೀರಿ.''

''ಓ ಅವನಿಂದ ನನಗೆ ಕೆಡಗಾಲವೊ ? ಆಗ್ಲಿ ಆಗ್ಲಿ. ಆನಂದ ಆನಂದ.''

ಎಂದು ಕೊಂಕು ಮಾತನಾಡಿದ. ಆತನಿಗೆ ಉತ್ತರಿಸದೇ ಉಳಿದವರು ದಂಗುಬಡಿದು ಕುಳಿತರು. ಯಾಕೆಂದರೆ ಇವರು ವರ್ಚಸ್ವಿ ಮಾಸ್ತರು

ಇದ್ದದ್ದರಿಂದ ತಮ್ಮ ಹೊಲಾ ಮನಿ ಮ್ಯಾಲೆ ದಾಳಿ ತಂದಾನು ಎಂಬ ಭಯ ಅವರಿಗೆ.

ಎರಡು ನಿಮಿಷ ಕೂಡ ಜಾರಿರಲಿಲ್ಲ. ಒಬ್ಬನು ಭಾರೀ ಜೋರಿನಿಂದ ಓಡಿಬಂದು ತೇಕುತ್ತಲೇ ರಾಯರಿಗೆ ಹೇಳಿದನು—

''ರಾಯರ ನಿಮ್ಮ ಹೇಡತಿ ಕಾಲುಜಾರಿ ಭಾವಿಯೊಳಗ ಬಿದ್ದಾಳ್ರೀ ಗಡಾನ ಬರ್ರಿ.''

ಈ ಮಾತು ಕೇಳಿ— 'ಹಾಂ ? ಎಲ್ಲಿ ? ಎಲ್ಲಿ ?' ಎಂದವನೇ ಧಡಾರಿಸಿ ಓಡತೊಡಗಿದ. ಓಡುತ್ತಲೇ ಮುಗ್ಗರಿಸಿ ಬಿದ್ದು ಹಣೆ ಒಡೆದುಕೊಂಡ. ರಕ್ತ ಸೋರಿತು, ಆದರೂ ಅದನ್ನು ಗಮನಿಸದೇ ಬಾವಿಯ ಕಟ್ಟೆಗೆ ಓಡಿದ.

ತುಂಬ ಬಸುರಿಯಾದ ಹೆಂಡತಿ ನೀರು ತರಲು ಹೋಗಿ ಹಗ್ಗ ಜಾರಿ ತಾನು ಜಾರಿದ್ದಾಳೆ. ಬಾವಿಯಲ್ಲಿ ನೀರು ಕುಡಿದು ಮುಳುಗುತ್ತಿದ್ದಾಳೆ. ಈತ 'ಬರ್ರೋ, ಬರ್ರೋ. ಯಾರಾದರೂ ತಗೀರೋ, ಹೆಂಡತಿ ಸತ್ಲೋ' ಎಂದು ಆರ್ಭಟಿಸಹತ್ತಿದ, ಒಬ್ಬ ವೀರ ಹಗ್ಗದ ಆಸರೆಯಿಂದ ಒಳಗಿಳಿದು, ಅವಳನ್ನು ಹಗ್ಗದ ಇನ್ನೊಂದು ತುದಿಗೆ ಕಟ್ಟಿ ಬಂದ, ಎಲ್ಲರೂ ಕೂಡಿ ಕೊಡಾ ಜಗ್ಗಿದಂತೆ ಆ ಗರ್ಭಿಣಿಯನ್ನು ತೊಟ್ಟಿಲ ಸಹಾಯದಿಂದ ಎಳೆದು ಹೊರಗೆ ತೆಗೆದರು.

ಆಗಲೇ ನೀರು ಹೊಟ್ಟೆಯಲ್ಲಿ ಸೇರಿಬಿಟ್ಟಿದೆ. ಕಣ್ಣು ಬೆಳ್ಳಗಾಗಿವೆ, ಮಾತು ಹೋಗಿದೆ. ನಾಡಿ ಇಳಿದಿವೆ. ಕೈಕಾಲು ಸೆಟೆಯಹತ್ತಿವೆ. ಬ್ರಾಹ್ಮಣ ಎದೆ ಬಾಯಿ ಬಿಡಹತ್ತಿದ, ಅವಳ ಮೇಲೆ ಬಿದ್ದು ಘೋರಾಡಿ ಅಳಹತ್ತಿದ.—

"ಅಯ್ಯೋ....ಮದುವಿ ಆಗಿ ವರ್ಷ ಸಹಾ ಆಗಿಲ್ಲಾ....ಈಗಲೆ ಹೊಂಟೇನೇ....? ಎಂಥಾ ಚೊಲೊ ಇದ್ದೆಲ್ಲಾ....! ನನ್ನಂದ್ರ ಎಷ್ಟು ಪೀತ್ರಿ ಮಾಡ್ತಿದ್ದೆಲ್ಲಾ....!! ನನ್ನ ಕರಕೊಂಡ ಹೊಗಬಾರ್ದನsss ? ಒಬ್ಬಾಕೀನ ಹೊಂಟೇನsss ? ನಾ ಒಬ್ನ ಏನ ಮಾಡ್ಲೀ ? ನಾ ಏನ ಕಳಕೊಂಡೆ....! ನಾ ಏನ ಕಳಕೊಂಡೆ....!!....ನಾನ ಏನ ಪಾಪಾ ಮಾಡಿದ್ನೇ....?"

ಆಗ ಶಾಲಾ ಕಟ್ಟಿಯ ಮೇಲೆ ಕುಳಿತಿದ್ದ ರೈತ ಬಂದು ಜೋರಿನಿಂದಲೇ ಹೇಳಿದ—

"ರಾಯರ, ಈಗ ಅಳತೀರಿ. ಆಗ ವಿಜಯ ಮಹಾಂತ ಸ್ವಾಮಿಗಳಿಗೆ ಹಾಸ್ಯ ಮಾಡಬ್ಯಾಡಂದ್ರ ಮಾಡಿದ್ರಿ. ನಿಮ್ಮ ಕೈಯಾಗ ಅವರು ಕರಡಿ ಆದ್ರು. ಈಗ ನೀವು ಏನಾದ್ರಿ ?"

ಬ್ರಾಹ್ಮಣನಿಗೆ ಈಗ ಅಹಂಕಾರ ದೂರವಾಯಿತು. ಗರ್ವ ಮುರಿಯಿತು. ತಪಸ್ವಿಗಳಿಗೆ ಅಪಹಾಸ್ಯ ಮಾಡಿದಕ್ಕೇ ಈ ಶಿಕ್ಷೆ ಬಂದಿದೆಯೆಂದು ಅರಿತ. ಇನ್ನು ಈ ಅಪಮೃತ್ಯು ತಪ್ಪಿಸಲು ಶಿವಯೋಗಿಗಳೇ ಗತಿ ಎಂದು ಓಡಿಹೋದ. ಕೂಡಿದ ಸಾವಿರಾರು ಜನರು ಆತನ ಬುದ್ಧಿಗೇಡಿತನಕ್ಕೆ ಬಯ್ದರು. ಗರ್ಭಿಣೀ ಸ್ತ್ರೀಯು ಕಷ್ಟಕ್ಕೆ ಮರುಗಿದರು. ಊರಿನ ಹೆಣ್ಣು ಮಕ್ಕಳು ಎದೆಬಾಯಿ ಬಿಟ್ಟರು. ಬೋರಾಡಿ ಅತ್ತರು.

ಒಬ್ಬಳು—

"ಅದಕ್ಕ ಬಾಳ ಸೊಕ್ಕು ಬಂದಿತ್ತು. ಮುರೀತೇಳು......."

ಇನ್ನೊಬ್ಬಳು—

"ನಮ್ಮಪ್ಪ ಮಾಂತೇಶ ಸ್ವಾಮಿಗೆ ಹಿಂಗ ಅಂತಃ ಆ ಮೂಳ? ದಿಕ್ಕೇಡಿ"

ಮತ್ತೊಬ್ಬಳು—

"ಅದಕ್ಕೇನ ಬಿಕ್ಕೀಬೇಡೂದ ಬಂದಿತ್ತು ? ಪರದೇಶಿ '"

ಮಗುದೊಬ್ಬಳು—

"ಮಾಂತೇಶ ಅಂದರ ಮೂಗಮ್ಯಾಲಿನ ಜೊಳು ಇದ್ದಂಗ, ಅವನ ಮುಂದೆ ಯಾರಪ್ಪಂದೂ ನಡೀದುಲ್ಲ.....ಶಿವಶಿವಾ.....ಮಾಂತೇಶಾ..... ಮಾಂತೇಶಾ....ನೀ ದೊಡ್ಡ ವಾ....

ಶಿಕ್ಷಕ ಬ್ರಾಹ್ಮಣ, ಮಠದಲ್ಲಿ ಇಳಿದುಕೊಂಡ ಶಿವಯೋಗಿಗಳ ಪಾದದ ಮೇಲೆ ಬಿದ್ದು, ಮಹಾಪರಾಧವನ್ನು ಕ್ಷಮಿಸಲು ಕೇಳಿಕೊಂಡ. ತನ್ನ ಹೆಂಡತಿಯನ್ನು ಕಾಪಾಡಲು ಬೇಡಿಕೊಂಡ. ಶಿವಯೋಗಿಗಳು ಶಾಂತರೀತಿಯಿಂದ ಅವನಿಗೆ ಸಮಾಧಾನ ಹೇಳಿದರು—

"ವಿಪ್ರೋತ್ತಮಾ ಏಳು ಏಳು. ಬ್ರಹ್ಮಜ್ಞಾನಿ ಆದವನೇ ಬ್ರಾಹ್ಮಣ. ಹಾಗೆಲ್ಲಾ ರೋದಿಸಬೇಡ. ನಿನ್ನ ಹಿಂದಿನ ಜನ್ಮದ ಪಾಪ ಇಂದು ಪರಿಹಾರ ವಾಯಿತು. ಹೋಗು, ಹೆಂಡತಿಯನ್ನು ಕರಕೊಂಡು ಮನೆಗೆ ನಡೆ," ಎಂದರು ಬ್ರಾಹ್ಮಣ ಹೋಗಿ ನೋಡುತ್ತಾನೆ ಆಗಲೇ ಅವಳಿಗೆ ಜೀವ ತಿರುಗಿದೆ. ಹೊಟ್ಟೆಯ ನೀರು ವಾಂತಿಯಾಗಿ ಹೊರಬಿದ್ದಿದೆ, ಮೂರ್ಛೆ ತಿಳಿದು ತಿಳಿವಳಿಕೆ ಬಂದಿದೆ. ಈತ ಮೆಲ್ಲನೇ ಅವಳ ರಟ್ಟೆಯಲ್ಲಿ ಕೈಹಾಕಿ ಕರೆದುಕೊಂಡು ಹೋದ. ಮರುದಿನ ಶಿವಯೋಗಿಗಳಿಗೆ ಹಣ್ಣುಕಾಯಿ ಸಲ್ಲಿಸಿ ಸಾಷ್ಟಾಂಗ ಹಾಕಿ, ಕ್ಷಮಾಪಣೆ ಬೇಡಿಕೊಂಡ.

# ಶಿವಯೋಗಿಯ ಶಾಪ....ಸತ್ಯದ ತಾಪ !

ಹೂಲಗೇರಿ ಸೋಮನಗೌಡನಲ್ಲಿ ದುಷ್ಟ ಜಟಗಳ ಸಂಪರ್ಕದಿಂದ ಅಹಮ್ಮು ತುಂಬಿತ್ತು. ತಾನೇ ಇಂದ್ರ ಚಂದ್ರ ಕಾಮ ಕುಬೇರ ಭೂಪತಿ ನರ-ಪತಿಯೆಂದು ತಿಳಿದುಬಿಟ್ಟಿದ್ದ. ದೈವಿಭಾವನೆ ನಾಶವಾಗಿತ್ತು. ಸ್ವಾಮಿಗಳೆಂದರೆ ಭಿಕ್ಷುಕರೆಂಬಂತೆ ಆತ ತಿರಸ್ಕರಿಸುತ್ತಿದ್ದ. ದೇವರೆಂದರೆ ಭಕ್ತರ ಮಸೆಂಬು ಎಡೆ ತಿನ್ನಲು ಮೂರ್ತಿಯ ರೂಪದಿಂದ ಬರುವ ಇಲಿಗಳೆಂಬೇ ಆತನ ಭಾವನೆ.

ಪೂಜ್ಯ ವಿಜಯಮಹಾಂತ ಸ್ವಾಮಿಗಳು ಲೋಕ ಕಲ್ಯಾಣಾರ್ಥವಾಗಿ ಹೂಲಗೇರಿಗೆ ದಯಮಾಡಿಸಿದರು. ಭಕ್ತಾದಿಗಳ ನೀರಿನ ಕೊರತೆ ಕಂಡು ಅವರ ಸುಕೋಮಲ ಮನಸ್ಸು ಮರುಗಿತು. ಕರ್ಮಯೋಗ ಕಾರ್ಯತತ್ಪರವಾಯಿತು ಕಲ್ಯಾಣ ಕಾರ್ಯವೆಂದರೆ ಅವರ ರೋಮ ರೋಮಗಳೂ ಹಿಗ್ಗಿ ಹಾಲು ಕುಡಿಯುತ್ತಿದ್ದವು. ಸ್ವಾಮಿಗಳು ಊರಿನ ಹಿರಿಕಿರಿಯರನ್ನೆಲ್ಲ ಕರೆಸಿ ವಂತಿಕೆ ಸಂಗ್ರಹಿಸಿದರು. ಬಡವರು ಒಂದು ದಿನದ ಅಂಬಲಿಯನ್ನು ಬಿಟ್ಟು ದಕ್ಷಿಣೆ ನೀಡಿದರು. ಮಧ್ಯಮ ವರ್ಗದವರು ತಮ್ಮ ಶಕ್ತ್ಯಾನುಸಾರ ದಾನಗೈದರು. ಎಷ್ಟು ಹೇಳಿ ಕಳಿಸಿದರೂ ಸೋಮನಗೌಡ ಸ್ವಾಮಿಗಳ ಬಳಿಗೆ ಬರಲೇ ಇಲ್ಲ. ಆದರೆ ಈ ಸಾರ್ವಜನಿಕ ಸೇವೆಗೆ ಸರ್ವರ ಸಹಕಾರವೂ ಅವಶ್ಯವೆಂದು ಸ್ವಾಮಿಗಳ ಭಾವನೆ. ಹಲವು ಭಕ್ತರು ಗೌಡನನ್ನು ಉಪಾಯದಿಂದಲೇ ಮೆಲ್ಲನೆ ಕರೆದುಕೊಂಡು ಬಂದರು. ಯಾವುದೋ ಒಂದು ಆಳು ಮನುಷ್ಯನ ಮನೆಗೆ ಬಂದಂತೆ ಗೌಡ ಸ್ವಾಮಿಗಳು ಇಳಿದ ಮಠಕ್ಕೆ ಆಗಮಿಸಿದ. ಎದ್ದು ನಿಂತಂತೆಯೇ ಬಲಗೈಯನ್ನು ಮೇಲೆ ಎತ್ತಿದಂತೆ ಮಾಡಿ ಸಲಾಮಿ ಪದ್ಧತಿಯ ನಮಸ್ಕಾರ ಒಗೆದ. ಸ್ವಾಮಿಗಳೇ ಸರ್ವ ಸಮಭಾವನೆಯಿಂದ ಅವನನ್ನು ಪ್ರೀತಿಯಿಂದ ಕರೆದು, ಕುಳ್ಳಿರಿಸಿ, ದಾನ ಭಾವನೆಯನ್ನು ಬೋಧಿಸಿ, ಬಾವಿ ಕಟ್ಟಿಸಲು ದಾನ ಕೇಳಿದರು—

"ಸೋಮನಗೌಡಾ ಇದು ನಿನ್ನಂತವರು ಸಹಾಯ ಮಾಡುವ ಕೆಲಸ. ನೀನೇ ನಿರಾಕರಿಸಿದರೆ ಹೇಗೆ ? ನಿನಗೆ ತಿಳಿದಷ್ಟು ಈ ಕಾರ್ಯಕ್ಕೆ ದಾನ ಸಲ್ಲಿಸು."

ಸೋಮನಗೌಡ ಸ್ವಲ್ಪ ಜರ್ಬಿನಿಂದಲೇ ಉತ್ತರಿಸಿದ—

'ನೋಡ್ರಿ ಸ್ವಾಮಿಗಳೇ.... ನಾನು ಊರ ಗೌಡ. ನನ್ನ ಒಪ್ಪಿಗೆ ಮೊದಲು ಕೇಳದೇ ಯಾವ ಕೆಲಸವೂ ಈ ಊರಲ್ಲಿ ಇಲ್ಲಿಯ ವರೆಗೆ ಆಗಿಲ್ಲ. ಆದರೆ ನೀವು ಸ್ವಾಮಿಗಳೆಂದು ಸುಮ್ಮನಾಗಿದ್ದೇನೆ. ಈ ಬಾವಿ ಕಟ್ಟಿಸುವದು ಯಾವ ಉದ್ದೇಶಕ್ಕಾಗಿ ಹೇಳುವಿರಾ ?'

ಸ್ವಾಮಿಗಳು ಪ್ರಸನ್ನ ನಗೆಯಿಂದ ಉತ್ತರಿಸಿದರು–

"ಲೋಕ ಕಲ್ಯಾಣಕ್ಕಾಗಿ "

"ತಿಳಿಯಿತು ಬಿಡಿರಿ. ಆತ್ಮ ಕಲ್ಯಾಣಕ್ಕಾಗಿ ಹುಟ್ಟಿಬಂದ ಸ್ವಾಮಿಗಳು ಲೋಕಕಲ್ಯಾಣ ಮಾಡಲು ನಿಂತರೆ ಆಚಾರಿ ವ್ಯಾಪಾರಿ ಆದಂತಾಯಿತು. ಇನ್ನು ನಮ್ಮಂತ ಗೌಡ–ಕುಲಕರ್ಣಿಯರಿಗೂ ರಾಜಕಾರಣಿಗಳಿಗೂ ಸರಕಾರಿ ಅಧಿಕಾರಿಗಳಿಗೂ ಏನೂ ಕೆಲಸ ಇಲ್ಲಾ ಅನ್ನಿ ?"

"ಸೋಮನಗೌಡಾ...."

"ಹುಂ ಹೇಳ್ರಿ."

"ಒಂದು ಮಾತು ಕೇಳ್ತೀಯಾ ?"

"ಕೇಳಾಕ ಬಂದೇನಿ ಹೇಳ್ರಿ."

'ಈ ಅಭಿಮಾನ ನಿನಗೆ ಯೋಗ್ಯವಲ್ಲವೆಂದು ನಮ್ಮ ತಿಳಿವಳಿಕೆ.'

'ನಿಮ್ಮ ತಿಳಿವಳಿಕೆಯಲ್ಲಿ ಹಾಗಿರಬಹುದು. ಆದರೆ ನನ್ನ ತಿಳಿವಳಿಕೆಗೆ ಹೇಳಿರಿ....'

'ಹೇಳುತ್ತೇನೆ ಕೇಳು, ಸಕಲ ಜೀವರಾಶಿಗಳಿಗೆ ಲೇಸನೆ ಬಯುಸುವವನೇ ಕುಲಜನೆಂದು ಅಪ್ಪಗಳು ಹೇಳಲಿಲ್ಲವೇ ? ಸೊನ್ನಲಾಪುರದ ಸಿದ್ಧರಾಮ ಮನುಜ ಮೊದಲಾಗಿ ದನ–ಕರು–ಪಕ್ಷಿ–ಮೃಗ–ಕ್ರಿಮಿ–ಕೀಟಗಳಿಗೂ ನೀರುಣ್ಣಿಸಲು ಕೆರೆ ಕಟ್ಟಿಸಲಿಲ್ಲವೇ ?'

'ಅದೂ ಬಸವಣ್ಣನವರ ಕಾಲಾ ಬುದ್ಧೀ. ಇದೂ ಇಂಗ್ಲೀಷರ ಕಾಲಾ.'

'ಇಂಗ್ಲೀಷೇನು ಕನ್ನಡೇನು, ನೀತಿ–ನ್ಯಾಯ ಬದಲಾಗುತ್ತಾವೇನೋ ಹುಚ್ಚಾ ?'

'ಹಾಗೇ ಅನ್ನೀರಿ, ನಾ ಹುಚ್ಚಾ.'

'ನಾನು ಪ್ರೀತಿ ಹಾಗೆ ಅಂದದ್ದು ಹುಚ್ಚಪ್ಪಾ,'

'ಆಯ್ತು. ನಾನೂ ಪ್ರೀತಿಗೇ ಹುಚ್ಚಪ್ಪನಾಗಿದ್ದೇನೆ. ಶರಣು. ಇನ್ನು ಬರುತ್ತೇನೆ.'

'ದಾನ ನೀಡುವದಿಲ್ಲವೇ ?'

'ಸಾಧ್ಯವಿಲ್ಲ. ನಾನು ಹುಚ್ಚ. ಊರು ಸಾಲ್ದಾಗ ಬಿಡ್ರೂ ಜಂಗಮ್ರ ಜೋಳ್ಗಿ ತಪ್ಲಿಲ್ಲಂತ' ಎಂದು ಖಾಕಿನಿಂದಲೇ ಎದ್ದು ಹೋದ. ಸ್ವಾಮಿಗಳು ತಬ್ಬಿಬ್ಬಾಗಿ ಕುಳಿತರು. ಕಂಬಳಿ ಹೊತ್ತ ಒಬ್ಬ ಹಳೇ ಮುದುಕ ಹೇಳಿದ—

'ಅದು ಅವನ ತಪ್ಪ ಅಲ್ಲ ಬುದ್ಧೀ. ಆ ಗೆಣೆತ್ಯಾರ ತಪ್ಪು.'

ಸ್ವಾಮಿಗಳು ಕೇಳಿದರು—

'ಯಾರು ಅವರು ?'

'ಎಲೀ ಆಟಾ–ಸೇಂದೀ ಕುಡಿತಾ—ಇನ್ನೊಂದಂತೂ ನಿಮ್ಮ ಮುಂದೆ ಹೇಳಾಕs ಬಾರ್ದು."

ಸ್ವಾಮಿಗಳು ಶಾಂತವದನರಾಗಿ ಬಂದ ಧನದಿಂದಲೇ ಬಾವಿಯ ಕಾರ್ಯ ಪೂರ್ತಿಮಾಡಿದರು. ಇವರು ಎಷ್ಟು ಶಾಂತಮೂರ್ತಿಗಳೋ ಅಷ್ಟೇ ಕಠೋರ ಮೂರ್ತಿಗಳೂ ಅಹುದು. ಸೋಮನಗೌಡ ಈ ಬಾವಿಯ ನೀರು ಕುಡಿಯ ತಕ್ಕದ್ದಲ್ಲೆಂದು ಕಟ್ಟಪ್ಪಣೆ ಮಾಡಿದರು.

ಆಗಲೇ ಬೇಸಿಗೆ ಆರಂಭವಾದ ಕಾಲ. ಹಕ್ಕಿಗೆ ನೀರಿಲ್ಲದೇ ಕೆರೆ ಬತ್ತಿದವು. ಮೀನಿಗೆ ನೆಲೆ ಇಲ್ಲದೇ ಹಳ್ಳ ಬಾಡಿದವು. ಸ್ವಾಮಿಗಳು ಕಟ್ಟಿಸಿದ ಇದೊಂದು ಬಾವಿಯಲ್ಲಿ ನೀರು. ಮತ್ತೆ ಎಲ್ಲಿಯೂ ಜಲರಾಶಿ ಇಲ್ಲ. ಸೋಮನಗೌಡ ಒಳಗೇ ಮುಳ್ಳುಮುರಿದು ಮೇಲೆ ಕೋಲಿ ನಟ್ಟಂತೆ ಕಳವಳಪಟ್ಟ. ಆದರೆ ಅವಿವೇಕಿಯ ಬುದ್ಧಿ ಏನನ್ನೂ ಮಾಡಲು ಹೇಸದು. ಮಧ್ಯರಾತ್ರಿಯಲ್ಲೇ ಕಳ್ಳತನದಿಂದ ನೀರುಸಾಗಿಸತೊಡಗಿದ. ಈ ಸುದ್ದಿ ಯಾರಿಗೂ ಗೊತ್ತಾಗಲೇ ಇಲ್ಲ.

ಒಂದು ದಿನ ನಡುಮಧ್ಯರಾತ್ರಿಯಲ್ಲೇ ಶಿವಯೋಗಿಗಳಿಗೆ ಎಚ್ಚರ ವಾಯಿತು. ಹೊರಗೆ ಹೋಗಿಬರಬೇಕೆಂದು ಯಾಕೋ ಅಂತರಾತ್ಮ ಕೂಗಿ ಹೇಳಿದಂತಾಯಿತು. ಮಠದ ಹೊರಬಂದು ನೋಡುತ್ತಾರೆ, ಗೌಡ ದೊಡ್ಡ ಕೊಡ ತುಂಬಿಕೊಂಡು ಹೊರಟಿದ್ದಾನೆ. ತಕ್ಷಣವೇ ಸ್ವಾಮಿಗಳಲ್ಲಿ ಸಾತ್ವಿಕ ಭಾವನೆ ಕೆರಳಿ ಹೇಳಿದರು—

'ಗೌಡಾ, ದಾನಿಗಳು ಕಟ್ಟಿಸಿದ ಈ ಬಾವಿಯಿಂದ ಪಾನಿಯಲ್ಲದ ನೀನು ನೀರು ಒಯ್ಬೇಡಾ, ನಿಲ್ಲು. ಎಚ್ಚರಿಕೆ!'

ಆತ ಅದೇ ಧಾಟಿಯಲ್ಲೇ ಉತ್ತರಿಸಿದ–

'ಎಚ್ಚರಿಕೆ ಕೊಡುವ ನೀವಾರು. ಇದು ನನ್ನ ಊರು.'

ಸ್ವಾಮಿಗಳು ನಿರ್ಭೀತರಾಗಿ ಅವನನ್ನು ಹಿಡಿದು ಹೇಳಿದರು

'ಅದು ಆ ಮೇಲೆ; ಮೊದಲು ನಿಲ್ಲು. ಜಂಭ ಕೊಚ್ಚಬೇಡ. ಕೊಡ ಕೆಳಗೆ ಇಳಿಸು.'

ಆತ ಕೆಣಕಿದ ಹುಂಜದಂತೆ ಹುರಿಗೊಂಡು ಹೇಳಿದ–

'ನನ್ನನ್ನು ತಡಯುವಿಯಾ ಸ್ವಾಮಿ? ಅಷ್ಟು ಶಕ್ತಿಯೇ ನಿನ್ನ ರಟ್ಟೆಯಲ್ಲಿ. ಸರಿ ಅತ್ತ.'

ಎಂದು ಕೊಸರಿಕೊಂಡು ಹೊರಟೇ ಬಿಟ್ಟ. ಶಿವಯೋಗಿಗಳ ಕಣ್ಣುಗಳು ಕೆಂಡವನ್ನು ಕಾರಿದವು. ಆತ್ಮಜ್ಯೋತಿ ಉರಿಯಿತು. ಅಂತರಂಗ ಸಿಂಹದಂತೆ ಗರ್ಜಿಸಿತು. ಹೇಳಿಬಿಟ್ಟರು–

'ಥೂ ದುರಾತ್ಮಾ, ಭ್ರಷ್ಟಾ, ನಿನ್ನ ಬಾಳು ಹಾಳಾಗಲಿ!

ಬೆಂಕಿಯೊಂದಿಗೆ ಹೋರಾಡಿ ಮುಳ್ಳು ಕಂಟಿ ಬಾಳಬಲ್ಲುದೇ? ಎಂಟೇ ದಿನದಲ್ಲಿ ಅವನ ಮಗ ಚೇಳು ಕಡಿದು ಸತ್ತ. ಗೌಡ ಇಸ್ಪೇಟ ಆಟದಲ್ಲಿ ಮನೆಯ ದುಡ್ಡು–ಬಂಗಾರ-ಬೆಳ್ಳಿ ಎಲ್ಲವನ್ನೂ ಕಳೆದುಕೊಂಡ. ಕೋರ್ಟಿನ ನ್ಯಾಯದಲ್ಲಿ ಹೊಲಮಾರು ಒತ್ತಿ ಹಾಕಿದ.

ಹರ ಮುನಿದರೆ ಗುರು ಕಾಯ್ವ. ಗುರು ಮುನಿದರೆ ಹರಕಾಯ್ವನೇ? ಕಾಲಚಕ್ಕ ಇಲ್ಲಿಗೇ ನಿಲ್ಲಲಿಲ್ಲ. ಕೆಲವೇ ದಿನಗಳಲ್ಲಿ ಮೈಲಿಬೇನೆ ಆವರಿಸಿತು. ಗೌಡ ತನ್ನ ಹೆಂಡರು ಮಕ್ಕಳೊಂದಿಗೆ ಅಡವಿಯಲ್ಲಿ ಗುಡಿಸಲು ಹಾಕಿಕೊಂಡು ನಿಂತ. ನೋಡು ನೋಡುತ್ತಿರುವಂತೆ ಮಕ್ಕಳು ಸತ್ತವು. ಹೆಂಡರು ಸತ್ತರು. ಗೌಡ ಒಬ್ಬನೇ ಉಳಿದ. ಇನ್ನೂ ಅವನ ಅಹಂಕಾರಕ್ಕೆ ಸ್ವಲ್ಪ ಸ್ವಲ್ಪವೂ ಚ್ಯುತಿಬರಲಿಲ್ಲ. ಕೊನೆಗೆ ಅವನೂ ಸತ್ತ. ಗುಡಿಸಲಲ್ಲಿ ಹೆಣಗಳ ರಾಶಿಯೇ ಬಿತ್ತು. ಶಿವಯೋಗಿಗೆ ದುರ್ನಿಂದೆ ಆಡಿದ ದುರಾತ್ಮನ ಹೆಣವನ್ನು ಹೊತ್ತರೆ ನಮಗೂ ಆ ಶಾಪ ತಟ್ಟುತ್ತದೆಯೆಂದು ಊರ ಜನರು ಒಬ್ಬರೂ ಸುಳಿಯಲಿಲ್ಲ. ಊರ ಕುಲಕರ್ಣಿ ಕೀಳು ಜನರಿಂದ ಹೆಣಗಳನ್ನು ಎಳೆಸಿ ಸುಡುಗಾಡಿಗೆಸಾಗಿಸಿದ.

ಆದರೆ ಆ ಹೆಣಗಳೊಂದಿಗೆ ಶಿವಯೋಗಿಯ ಶಾಪ ಇನ್ನೂ ಉಳಿದೇ ಬಿಟ್ಟಿತ್ತು! ಊರಿನ ಜನರು ಕೆಲವರು ಅತ್ಯಾಶೆಯಿಂದ ಹೆಣಗಳ ಮೇಲಿನ ಆಭರಣಗಳನ್ನು ತೆಗೆದುಕೊಂಡರು. ಶಿವಯೋಗಿಯ ಶಾಪ ಅವರಿಗೂ ಹರಿದು ಮೂರೇ ದಿನಗಳಲ್ಲಿ ಸ್ಮಶಾನ ಕಂಡರು!! ಅಂಜಿದ ಜನ ಸಮೀಪ ಬರಲಿಲ್ಲ. ಕೊನೆಗೆ ಹೊಲೆಯರೇ ಗೌಡನ ಆಸ್ತಿಪಾಸ್ತಿಯನ್ನೆಲ್ಲ ಹರಿದು ಹಂಚಿಕೊಂಡು ತಿಂದರು!!!

# ಅನ್ಯಾಯಕ್ಕೆ ಅಗ್ನಿ

ಸಿದ್ಧರಾಮಯ್ಯ ಒಬ್ಬ ಮುಗ್ಧ ಭಕ್ತ. ಆದರೆ ಹತ್ತೂ ಬೆರಳು ಒಂದೇ ಸಮನೆ ಹೇಗಿರಬೇಕು ? ಆತ ವ್ಯಾಪಾರದಲ್ಲಿ ಸಾಕಷ್ಟು ದುಡ್ಡನ್ನು ಗಳಿಸಿದ್ದ. ಆದರೂ ಲಕ್ಷ್ಮಿ ಚಂಚಲೆಯಲ್ಲವೇ? ಈತ ಕೆಲ ದಿನಗಳಲ್ಲೇ ಸಾಲದ ಶಿಶುವಾದ. ಆಸ್ತಿಗಿಂತಲೂ ಸಾಲದ ಮೊತ್ತವೇ ಎರಡು ಪಟ್ಟಾಯಿತು. ಸಾಲತೆತ್ತವರು ಹಗಲು ರಾತ್ರಿ ಇವನ ಮುಂದೆ ಧರಣಿ ಕುಳಿತರು; ಈತ ತಬ್ಬಿಬ್ಬಾಗಿ ಹೋದ. ಇನ್ನು ಸಾಯುವವನಿಗೆ ಶಂಕರನೆ ಗತಿಯಲ್ಲವೇ ? ನೇರವಾಗಿ ವಿಜಯ ಮಹಾಂತ ಶಿವಯೋಗಿಗಳ ಮಠಕ್ಕೆ ಬಂದು ಸಾಷ್ಟಾಂಗ ಹಾಕಿದ. ತನ್ನ ಅಳಲನ್ನು ತೋಡಿಕೊಂಡ. ಹೃದಯ ಬಿಚ್ಚಿ ಅತ್ತ. ಕಾಪಾಡಿರಿ ಎಂದು ಸೆರಗೊಡ್ಡಿ ಬೇಡಿದ.

ಶಿವಯೋಗಿಗಳು ಅನ್ಯಾಯಕ್ಕೆ ಅಗ್ನಿಯಾಗಿದ್ದರೆ ದೈನ್ಯಕ್ಕೆ ದೇವರಾಗಿದ್ದರು. ಅವರ ಹೃದಯ ಸೇವಂತಿಗೆ ಹೂವು ಅರಳಿದಂತೆ ಅರಳಿತು. 'ಸಿದ್ಧರಾಮಯ್ಯ ಈಗ ನಿನ್ನ ಹತ್ತರ ದುಡ್ಡು ಎಷ್ಟಿದೆ ಅದೆಲ್ಲವನ್ನೂ ನಾಳೆ ಇಲ್ಲಿ ತಂದುಕೊಡು' ಎಂದು ಅವನಿಗೆ ಅಪ್ಪಣೆ ಮಾಡಿದರು. ಆತ ಶಿವಯೋಗಿಯ ಮಾತಿಗೆ ಒಪ್ಪಿ ನೇರವಾಗಿ ಮನೆಗೆ ನಡೆದ. ಮನೆಯಲ್ಲಿ ಉಳಿದ ಎಲ್ಲವನ್ನೂ ಅಂದೇ ಮಾರಿದ. ಮರುದಿನ ದುಡ್ಡನ್ನು ಮಠಕ್ಕೆ ತಂದ.

ಇತ್ತ ಶಿವಯೋಗಿಗಳು ಸಾಲ ಕೊಟ್ಟ ಎಲ್ಲ ಸಾವುಕಾರರನ್ನು ಕರೆಸಿದರು. ಅವರಿಗೆ ಸಿದ್ಧರಾಮನು ವ್ಯಾಪಾರದಲ್ಲಿ ಹಾನಿಗೊಂಡ ಸಂಗತಿ ವಿವರಿಸಿ ತಿಳಿಯ ಹೇಳುತ್ತ–

'ಈಗ ಅವನ ಹತ್ತಿರ ಇದ್ದ ಹಣಕ್ಕಿಂತ ನಿಮ್ಮ ಸಾಲವೇ ಎರಡು ಪಟ್ಟಾಗಿದೆ. ನಾನು ಅವನಿಂದ ಕೊಡಿಸಿದಷ್ಟು ಹಣದಿಂದ ಎಲ್ಲರೂ ಸಮಾಧಾನ ರಾಗಿರಿ. ಬಡವನನ್ನು ಕಾಡಬೇಡಿರಿ. ಶಿವ ನಿಮ್ಮನ್ನು ಕಾಪಾಡಲಿ'ಎಂದರು.

ಶಿವಯೋಗಿಗಳ ಅಪ್ಪಣೆಯೆಂದ ಮೇಲೆ ಕೇಳಬೇಕೆ? ಮರುಮಾತೇ ಇಲ್ಲ. ಎಲ್ಲ ಶ್ರೀಮಂತರೂ ಒಪ್ಪಿ ಸಾಷ್ಟಾಂಗ ಹಾಕಿದರು.

ಆದರೆ ಆ ಶ್ರೀಮಂತರಲ್ಲಿ ಒಬ್ಬ ಮಾತ್ರ ತಾನುಕೊಟ್ಟ ಸಾಲದಲ್ಲಿ ಅರ್ಧ ಹಣ ಕಳಕೊಳ್ಳಲು ಸಿದ್ಧನಾಗಲಿಲ್ಲ. ರಂಭಾಟ ಎಬ್ಬಿಸಿದ. ಗುರುವಿಗೆ ಗುರು

ವಾಗಿ ಹಾರಾಟ ನಡೆಸಿದ. ಶಿವಯೋಗಿಗಳು ಹೇಳಿನೋಡಿದರು. ಕೇಳಿ ನೋಡಿದರು. ಆದರೆ ಆತ ಕೊನೆಗೆ–

'ಶಿವಯೋಗಿಗಳಾದ ನಿಮಗೆ ನಮ್ಮ ಸಂಸಾರಿಕರ ತರಲೆ ಏಕೆ? ನಿಮ್ಮಷ್ಟಕ್ಕೆ ನೀವು ಮೂರು ಸಲ ಶಿವಪೂಜೆ ಮಾಡಿಕೊಂಡು ಸುಮ್ಮನಿರಬಾರದೇ? ನಮ್ಮ ದುಡ್ಡಿನ ವ್ಯವಹಾರದಲ್ಲಿ ತಲೆಹಾಕಿ ಇಲ್ಲದ ರಾಡೀ ಯಾಕೆ ಹಚ್ಚಿಕೊಳ್ಳುತ್ತೀರಿ?' ಎಂದು ಹೊಟ್ಟೆಯ ರೊಚ್ಚನ್ನೆಲ್ಲ ಹೊರಗೆ ಹಾಕಿದ.

ಶಿವಯೋಗಿಗಳು ಮತ್ತೆ ನುಡಿದರು–

'ಹಾಗಾದರೆ ನೀನು ನಮ್ಮ ಮಾತು ನಡೆಸಿಕೊಡುವದಿಲ್ಲವೋ?'

ಆತ ಹೇಳಿದ–

'ಆಗದು. ನನ್ನಿಂದಾಗದು. ನೀವು ಈ ಗೊಡವೆಗೆ ಬರುವದೇ ಬೇಡ.' ಎಂದ. ಆಗ ಶಿವಯೋಗಿಗಳು–

'ಹಾಗಾದರೆ ನೀವು ಈ ಭೂಮಿಯ ಮೇಲೆ ಇರುವದೇ ಬೇಡ.'

ಎಂದರು. ಆತ ಕೋಲು ಚುಚ್ಚಿದ ಕೋತಿಯಂತೆ ಕವಕ್ಕೆಂದು ಎದ್ದು ಹೋದ!

ಶ್ರೀಮಂತರೆಲ್ಲರೂ ತಾವು ಕೊಟ್ಟ ಸಾಲದ ಅರ್ಧದಷ್ಟು ಹಣ ಸ್ವಾಮಿಗಳಿಂದ ಪಡೆದು, ಸಾಷ್ಟಾಂಗ ಹಾಕಿ, ಧನ್ಯರಾದೆವೆಂದು ಹೊರಟು ಹೋದರು. ಎದ್ದು ಹೋದ ಆ ಮೂರ್ಖ ಶಿಷ್ಯನಿಗೆ ಉಳಿದವರಂತೆ ಅರ್ಧದಷ್ಟು ಕೂಡ ಹಣ ದಕ್ಕಲಿಲ್ಲ! ಕಾರಣ ಮೂರೇ ದಿನಗಳಲ್ಲಿ ಸುಡುಗಾಡಿಗೆ ಸಡಗರದಿಂದ ಹೋಗಿ, ಮಣ್ಣಲ್ಲಿ ವೈಭವದಿಂದ ಕುಳಿತುಬಿಟ್ಟ!!

# ತಾಯಿಯಾಗು, ತಾಯಿ !

ಇಲಕಲ್ಲಿನ ಅಯ್ಯನಗೌಡನ ಮಗಳು ಸುಶೀಲೆ, ಗುಣಸುಂದರಿ, ಸದ್ಭಕ್ತೆ. ಅವಳನ್ನು ತಾಳೀಕೋಟೆಯ ಭಾರಿ ಶ್ರೀಮಂತನಾದ ರಾಚನಗೌಡನಿಗೆ ಮದುವೆ ಮಾಡಿ ಕೊಡಲಾಗಿತ್ತು. ಇವಳು ಗುಣಸುಂದರಿಯಾದರೆ ಆತ ಕಾಮ-ಸುಂದರನಾಗಿದ್ದ. ಇವಳು ಸುಶೀಲೆಯಾದರೆ ಆತ ವೇಶ್ಯಾರಮಣನಾಗಿದ್ದ. ಹೀಗೆ ರಾಚನಗೌಡ ತನ್ನ ವೇಶ್ಯೆಯಲ್ಲಿ ಸುಖದ ಸ್ವರ್ಗವನ್ನೇ ಕಟ್ಟಹತ್ತಿದ್ದ. ಅವನಿಗೆ ಮನೆ ಬೇಡ, ಮಡದಿಬೇಡ, ಬಳಗಬೇಡ. ತನ್ನ ಐಶ್ವರ್ಯವನ್ನೇ ಅವಳ ಪದತಲಕ್ಕೆ ಸುರುವಿ, ಅವಳ ಭೋಗರತಿಯಲ್ಲೇ ನಿರತನಾಗಿದ್ದ.

ಪಾಪ ಈ ಮುಗ್ಧ ಮಡದಿ ಏನು ತಾನೇ ಮಾಡಿಯಾಳು ? ಗಂಡನ ಮನೆಗೆ ಬಂದರೂ ಸಂಸಾರ ಸುಖವಿಲ್ಲ. ಮಕ್ಕಳನ್ನು ಹಡೆಯುವ ಭಾಗ್ಯ ಇಲ್ಲ. ದಿನ-ದಿನವೂ ನಿಟ್ಟುಸಿರನ್ನೇ ಕುಡಿದು ಬಾಳಹತ್ತಿದಳು. ಶ್ರೀಮಂತಿಕೆಯಲ್ಲಿ ಸೊರಗಿ ಸಾಯಹತ್ತಿದಳು.

ಒಂದುದಿನ ತಾಳೀಕೋಟೆಯ ಕೆಲ ಹಿರಿಯರು ರಾಚನಗೌಡನ ಅವಿವೇಕ ದಿಂದ ಗೌರವಸ್ಥ ಕುಟುಂಬವೇ ಹಾಳಾಗಿ ಹೋಗುವದೆಂಬುದನ್ನು ಅರಿತು ಅತಿಯಾಗಿ ಮರುಗಿ, ಬಹು ಮಾರ್ಮಿಕವಾಗಿ ಹೇಳಿದ ನಾಲ್ಕು ಮಾತುಗಳು ಎಂದಿಗೂ ಮರೆಯಲಾರದಂಥವು—

'ರಾಚನಗೌಡ.......ನೀನು ಊರಿಗೆ ಬುದ್ಧಿ ಹೇಳುವ ಗೌಡ, ನೀನೇ ವೇಶ್ಯೆಯ ಸಂಗಕ್ಕೆ ಬಿದ್ದರೆ ಮುಂದೇನು ಗತಿ ? ನ್ಯಾಯ ನೀಡುವ ದೊರೆಯೆ ಅನ್ಯಾಯದಿಂದ ನಡೆದರೆ ಏನು ಮುಂದೆ? ಹೆಂಡತಿಯು ಗಂಡನಿಗೆ ಅರ್ಧಾಂಗಿ, ಸಹಧರ್ಮಚಾರಿಣಿ, ಆತನ ಸುಖದಲ್ಲೂ ಹೆಂಡತಿ, ದುಃಖದಲ್ಲೂ ಹೆಂಡತಿ ವಂಶವೃಕ್ಷ ಬೆಳೆಯಲು ಅವಳು ತಾಯಿಬೇರು. ಅವಳು ಮನೆತನದ ಮಾದೇವಿ ಶಾಂತಿಯ ಸಿರಿದೇವಿ. ತಾಳ್ಮೆಯ ಭೂದೇವಿ, ಪ್ರೇಮದ ರತಿದೇವಿ. ತ್ಯಾಗದ ಸೀತಾದೇವಿ.

'ಶಿವನ ಸಂಕಲ್ಪದಿಂದ ಹೆಂಡತಿಯಾಗಿ ಬಂದವಳು ಸಾಯುವವರೆಗೂ ಸೇವೆಗೈವವಳು.'

ಹಿರಿಯರ ಮಾತು ಹಾಗಲಕಾಯಿ ಆಯಿತು ಅವನಿಗೆ.

ರಾಜನಗೌಡನ ಹೆಂಡತಿ ಪರಮಸಾಧ್ವಿ, ಪತಿಭಕ್ತಿಸಂಪನ್ನೆ, ಚಿತ್ತರಗಿ ಪೀಠದ ಪ್ರೇಮದ ಕೊಡಗೂಸು. ಅವಳು ದುಃಖದ ಬಂಡಿಯನ್ನೇ ತುಂಬಿಸಿ ಕೊಂಡು ತೌರೂರಿಗೆ ಸೇರಿದಳು. ಆವಳ ಸಂಕಟಕ್ಕೆ ಇಲಕಲ್ಲೇ ಗೋಳಾಡಿತು.

ಒಂದು ದಿನ ಮಠಕ್ಕೆ ಬಂದು, ಏಕೋಭಾವ ಭಕ್ತಿಯಿಂದ ನಿಂತಿದ್ದಾಳೆ. ವಿಜಯಮಹಾಂತ ಶಿವಯೋಗಿಗಳಿಗೆ ಪೊಡಮಟ್ಟು, ಮೂರಕ್ಕೆ ಸರಿದು ಬೆದರಿದ ಜಿಂಕೆಯಂತೆ ಬಾಗಿ ಅಳುತ್ತಿದ್ದಾಳೆ. ಸ್ವಾಮಿಗಳಿಗೆ ಅವಳ ಮನದಳಲು ಅಂತರ್ಯದಲ್ಲೇ ಹೊಳೆಯಿತು. ಇನ್ನೊಬ್ಬರ ಅಂತರಂಗವನ್ನು ಅಳೆಯುವ ಸೂಜಿಗಲ್ಲಿನಂತೆ ಸೂಕ್ಷ್ಮವಾಗಿತ್ತು ಅವರ ಆತ್ಮಲಿಂಗ, ಒಮ್ಮೆಲೇ ನುಡಿದು ಬಿಟ್ಟರು.

'ಹೋಗು ತಾಯಿ. ಸುಮ್ಮನೆ ಏಕೆ ಅಳುವಿ....ನೋಡು ಎಚ್ಚರಿಕೆ.... ಇನ್ನೊಂದು ಬಾರಿಗೆ ಇಲ್ಲಿ ಒಬ್ಬಳೇ ಬರಬೇಡ. ಮಗನನ್ನು ಎತ್ತಿಕೊಂಡು ಬಾ. ಸುಖದಿಂದ ನಗುತ್ತ ಬಾ' ಎಂದು ಹರಿಸಿ ಕಳುಹಿಸಿದರು.

ಆಶ್ಚರ್ಯ ಹಕ್ಕಿಯ ಮೇಲೆ ಕುಳಿತು ಹಾರಿಬಂತು. ಉಸುಕಿನ ಕಣ ಹಿಂಡಿ ನೀರು ತೆಗೆಯಬಹುದು, ಮೃಗಜಲ ಕುಡಿದು ಬಾಯಾರಿಕೆ ಕಳೆಯ ಬಹುದು. ಆದರೆ ಭೋಗಲಂಪಟನನ್ನು ತಿದ್ದುವದು ಸಾಧ್ಯವೇ ಇಲ್ಲ ಎಂಬ ನೀತಿ ಶಾಸ್ತ್ರದ ಮಾತೇ ಸುಳ್ಳಾಯಿತು; ರಾಜನಗೌಡ ತನ್ನ ಉಪಪತ್ನಿಯಲ್ಲಿ ಅಸಹ್ಯ ಹೇಸಿಕೆ ಪಟ್ಟು ಹೊರಗೆ ಹಾಕಿದನು. ನಿಜಧರ್ಮಪತ್ನಿಯಲ್ಲಿ ಅಗಾಧ ಪ್ರೇಮದೀಪ ಕೂಡಿದನು.

ಮತ್ತೇನು? ಮರುವರ್ಷವೇ ಅವನ ಹೆಂಡತಿ ಗಂಡುಮಗನನ್ನು ಹೊತ್ತು ಕೊಂಡು ಬಂದು ಶಿವಯೋಗಿಗಳಿಗೆ ಮಣಿದು, ಹಣ್ಣುಕಾಯಿ ಮಾಡಿಸಿದಳು!

# ಕಾರಭಾರಿಯ ಕಾರಭಾರ

ಮಠದ ಕಾರಭಾರಿಯಿಂದ ಒಂದು ಸಲ ಅನ್ಯಾಯ ಮಠದಲ್ಲೇ ಜರುಗಿಬಿಟ್ಟಿತು. ಪ್ರತಿವಾರ ಸಂಬಳ ಪಡೆದು ಕಾರಕಾನನೊಬ್ಬ ಇಲಕಲ್ಲ ಮಠದಲ್ಲಿ ದುಡಿಯುತ್ತಿದ್ದ. ಮಠದ ಆಯುವ್ಯಯ ವ್ಯವಹಾರದ ಲೆಕ್ಕ ವನ್ನು ನೋಡಿಕೊಳ್ಳುತ್ತಿದ್ದ. ದುಡ್ಡೆಂದರೆ ಯಾರಿಗೆ ಬಾಯಿ ತೆರೆಯಲು ಹಚ್ಚುವದಿಲ್ಲ ? ಅಲ್ಲದೇ ಮಠದ ಸಾವಿರಾರು ಎಕರೆ ಜಮೀನು. ಕಾರಕೂನ ಚಿತ್ತರಗಿಯ ಒಬ್ಬ ರೈತನಿಂದ ಲಾವಣಿ ಪಡೆದು ಸ್ವಂತಕ್ಕೆ ಬಳಸಿಬಿಟ್ಟ. ಆತ ಕೊಟ್ಟಿಲ್ಲವೆಂದು ಶಿವಯೋಗಿಗಳಿಗೆ ಹೇಳಿಬಿಟ್ಟ.

ಸ್ವಾಮಿಗಳು ಅಂತರಂಗ ಸಾಮ್ರಾಜ್ಯದಲ್ಲಿ ಎಷ್ಟು ದಕ್ಷರಾಗಿದ್ದರೋ ಬಹಿರಂಗ ವ್ಯವಹಾರದಲ್ಲಿ ಅಷ್ಟೇ ಕುಶಲಿಗಳಾಗಿದ್ದರು. ಪ್ರತಿಯೊಂದು ಕಾರ್ಯವಿಭಾಗದಲ್ಲಿ ಸೂಕ್ಷ್ಮಮತಿಗಳಾಗಿದ್ದರು. ಕಾರಕೂನನ ಬಗೆಗೆ ಸಂಶಯ ಬಂದು ಆ ರೈತನನ್ನು ಕರೆಸಿ ಕೇಳಿದರು. ರೈತ ಹಣ ಕೊಟ್ಟಿದ್ದೇನೆಂದು ಹೇಳಿದ. ಕಾರಕೂನನನ್ನೂ ಕರೆದರು. ಈತ ಹಣ ಕೊಟ್ಟಿಲ್ಲವೆಂದು ವಾದಿಸಿದ. ಸತ್ಯಾಗ್ನಿಯ ಮುಂದೆಯೇ ಈ ಮೋಸದ ತಮಾಷೆ ನಡೆಯಿತು. ಒಬ್ಬ ಕೊಟ್ಟಿದ್ದೇನೆ ಅನ್ನುತ್ತಾನೆ! ಇನ್ನೊಬ್ಬ ಕೊಟ್ಟಿಲ್ಲ ಎನ್ನುತ್ತಾನೆ!! ಇದ್ದ ಇಬ್ಬರಲ್ಲಿ ಕಳ್ಳರಾರು?

ಪ್ರಶ್ನೆ ಕೊನೆ ವರೆಗೂ ಬಗೆಹರಿಯಲಿಲ್ಲ. ಇಬ್ಬರೂ ಅಷ್ಟೇ ಪ್ರಬಲ ವಾದ ಸಾಧಾರ ಪ್ರಮಾಣಗಳನ್ನೂ ಆಣೆ-ಕಟ್ಟುಗಳನ್ನೂ ಮಾಡಿಬಿಟ್ಟರು. ಶಿವಯೋಗಿಗಳಿಗೆ ನುಂಗಲಾರದ ತುತ್ತಾಯಿತು. ಅವರ ಅಂತರಂಗದ ಸಾತ್ವಿಕ ಮತಿ ತಪ್ತವಾಯಿತು. ಒಡನೆಯೇ ನುಡಿದರು–

'ಸುಳ್ಳಾಡುವವನ ಬಾಯಲ್ಲಿ ಹುಳಗಳು ಬಿದ್ದು ನಾಲಿಗೆ ಕತ್ತರಿಸಿ ಹೋಗುವದು. ಎಚ್ಚರಿಕೆ !'

ಆ ಇಬ್ಬರು ಇದಕ್ಕೂ ಜಗ್ಗಲಿಲ್ಲ. 'ಓಹೋ ಆಗಲಿ' ಎಂದು ನಡೆದರು.

ಮುಂದೆ ಒಂದೇ ವಾರದಲ್ಲಿ ಕಾರಭಾರಿಯ ನಾಲಿಗೆಯಲ್ಲಿ ಒಂದು ಗಂಟು

ಬೆಳೆಯಹತ್ತಿತು. ಎರಡನೆಯ ವಾರಕ್ಕೆ ಅದು ಬಲಿತು ಹಣ್ಣಾಯಿತು. ಮೂರನೇ ವಾರ ಅನ್ನಪಾನ ತೆಗೆದುಕೊಳ್ಳದಂತೆ ಹುಣ್ಣು ಬೆಳೆಯಿತು. ನಾಲ್ಕನೇ ವಾರ ಗಂಟು ಒಡೆದು ರಕ್ತ-ಕೀವ ಬಾಯಲ್ಲೇ ಸುರಿಯತೊಡಗಿತು. ಐದನೇ ವಾರ ಚುರಮರಿ ಆಕೃತಿಯ ಬಿಳಿ ಹುಳಗಳೇ ಹುಣ್ಣನ್ನು ಕೊರೆದು ಹೊರಬೀಳಹತ್ತಿದವು. ಆರನೇ ವಾರ ನಾಲಿಗೆಯೇ ಕತ್ತರಿಸಿ ಹೋಯಿತು! ಕಾರಭಾರಿ ತನ್ನ ಸುಳ್ಳಿನ ಕಾರಭಾರಕ್ಕೆ ತಾನೇ ಮರುಗಿ, ಮಠಬಿಟ್ಟು ರಪಾಟಕಿತ್ತ !!

# ಎತ್ತಿನ ಏಟು ಎಮ್ಮೆಗೆ

ಶಿವಯೋಗಿಗಳು ಒಂದು ಸಲ ದೋಟಿಹಾಳಕ್ಕೆ ದಯಮಾಡಿಸಿದ್ದಾರೆ. ಅಲ್ಲಿ ತಮ್ಮ ಮಠದ ಎತ್ತಿಗೆ ಬೇನೆ ತಗುಲಿ, ಮರಣಾಂತಿಕವಾದ ವೇದನೆಯಲ್ಲಿದ್ದುದನ್ನು ಕಂಡು ಮಲ್ಮಲನೇ ಮರುಗಿದರು. 'ದಯಬೇಕು ಸಕಲ ಜೀವ ರಾಶಿಗಳೆಲ್ಲರಲ್ಲಿ' ಎಂಬ ಅಪ್ಪಗಳ ಅಪ್ಪಣೆ ಅವರ ಅಂತರಾತ್ಮದ ತುಂಗಭದ್ರೆಯಾಗಿಸ್ತು ! ಎತ್ತಿನ ಸಂಕಟ ಇವರ ಆತ್ಮ ಸಂಕಟವೂ ಆಯಿತು. 'ಈ ಊರಲ್ಲಿ ಇದರ ಬೇನೆಗೆ ಮದ್ದು ಕೊಡುವವರು ಯಾರಿಲ್ಲವೇ?' ಎಂದು ಮಠದ ಸೇವಕನಿಗೆ ಕೇಳಿದರು. ಆತ– 'ಬುದ್ಧಿ, ನಿಮ್ಮ ಮಾವಿನ ತೋಪವನ್ನು ಕಾಯುವ ಸಂಗಪ್ಪನು ಈ ರೋಗಕ್ಕೆ ಔಷಧ ಕೊಡುತ್ತಾನೆ' ಎಂದು ನುಡಿದ. ಒಡನೆಯೇ ಸ್ವಾಮಿಗಳು ಸಂಗಪ್ಪನನ್ನು ಬೇಗನೇ ಕರೆತರಲು ಭಕ್ತನನ್ನು ಓಡಿಸಿದರು.

ಭಕ್ತ ಸಂಗಪ್ಪನ ಬಳಿ ಬಂದು ಕೂಡಲೇ ಬರಬೇಕೆಂದು ಶಿವಯೋಗಿಗಳ ಅಪ್ಪಣೆಯನ್ನು ಹೇಳಿದ. ಎತ್ತಿಗೆ ಆದ ಪ್ರಾಣ ಸಂಕಟವನ್ನು ಅರುಹಿದ. ಅದಕ್ಕೆ ಆತ–

'ಆಗಲಿ ಬರುತ್ತೇನೆ. ಈಗ ನೀರು ತುಂಬುತ್ತಿದ್ದೇನೆ. ತುಂಬಿದವನೇ ಬರುತ್ತೇನೆ ಎಂದು ಹೇಳಿ ಕಳಿಸಿದ.

ಸ್ವಾಮಿಗಳಿಗೆ ಬಹು ವಿವಂಚನೆಯಾಯಿತು. ಎತ್ತಿಗೆ ಗುಣವಾಗದೇ ಅವರು ಮಧ್ಯಾಹ್ನದ ಲಿಂಗಪೂಜೆಗೂ ಹೋಗುವಂತಿಲ್ಲ. ಶಂಕರದೂತ ಸಾವಿಗೀಡಾದಾಗ ಶಂಕರ ಪೂಜೆಗೆ ಸ್ಥಾನವೆಲ್ಲಿ?

ಇತ್ತ ಸಂಗಪ್ಪ ನೀರು ತುಂಬಿದ. ಅಷ್ಟಕ್ಕೇ ನಿಲ್ಲದೇ ತನ್ನ ಎಮ್ಮೆಯ ಮೈಯನ್ನು ಹಸನಾಗಿ ಉಜ್ಜಿ ತೊಳೆಯುತ್ತ ನಿಂತ. ಅದಕ್ಕೆ ಹರಗ ತಿನ್ನಿಸಿದ. ಎಮ್ಮೆಯ ಕೊಟ್ಟಿಗೆಯನ್ನೆಲ್ಲ ಹಸನಮಾಡಲು ಒಂದು ಗಂಟೆ ಕಾಲ ಕಳೆದ. ನಂತರ ಅದರ ಹಾಲು ಹಿಂಡುವ ಕೆಲಸದಲ್ಲಿ ಸಾವಧಾನದಿಂದ ತೊಡಗಿದ. ಅಲ್ಲಿ ಸ್ವಾಮಿಗಳು ಸಂಕಟದಿಂದ ದಾರಿ ನೋಡುತ್ತಿದ್ದಾರೆ. ಇಲ್ಲಿ ಈತ ಆನಂದದಿಂದ ಸಾವಧಾನವಾಗಿ ಹಾಲು ಕರೆಯುತ್ತಿದ್ದಾನೆ!

ಶಿವಯೋಗಿಗಳು ಭಕ್ತನಿಗೆ ಎರಡನೇ ಸಲ ಅಪ್ಪಣೆ ಕೊಡಿಸಿದರು. ಭಕ್ತ ಓಡುತ್ತ ಬಂದು–

'ಸಂಗಪ್ಪ ಬೇಗ ಬಾರಪಾ. ಎತ್ತು ಸಾಯಲಾಗ್ಯೆತಿ. ಸ್ವಾಮಿಗಳು ಬಾ ಅಂದರು' ಎಂದು ಹೇಳಿದ. ಈತ ಮಾರುತ್ತರವಾಗಿ–

'ಎತ್ತು ಸಾಯಲಾದರ? ನಾನೇನು ಇಲ್ಲಿ ಖಾಲಿ ಕುಂತೇನಿ ಅಂತ ತಿಳಿತೀ ಏನು? ನೋಡಿಲ್ಲಿ ಏಸ ಮಾಡಾಕತ್ತೇನಿ? ಕಾಣಸ್ಯೆರ ಕಾಣಸ್ತೈತೋ ಇಲ್ಲೋ?

ಸೇವಕ ಮತ್ತೆ ಹೇಳಿದ–

'ಸ್ವಾಮಿಗಳು ಹೇಳ್ಯಾರಪಾ ಸಂಗಪ್ಪಾ.'

ಸಂಗಪ್ಪಾ ಖಾರವಾಗಿ ಉತ್ತರಿಸಿದ–

'ಅವರಿಗೇನು ಹೋಗತೈತಿ ಹೇಳಾಕ? ಇಲ್ಲೇನು ಎಮ್ಮಿ ಹಿಂಡತಾರೇನು ಅವರು?'

ಸೇವಕ ಖಿನ್ನನಾಗಿ ಬಂದು ಸ್ವಾಮಿಗಳಿಗೆ ನಡೆದ ವಾರ್ತೆ ತಲುಪಿಸಿದ. ಆಗ ಸ್ವಾಮಿಗಳು ಸ್ವಲ್ಪ ಸಂಕಟದಿಂದಲೇ ಹೇಳಿದರು–

'ಹೋಗಲಿ ಬಿಡು. ಆತ ಬರುವದೇ ಬೇಡ. ಜಗತ್ತಿನಲ್ಲಿ ರೋಗ ನಮ್ಮ ಎತ್ತಿಗೊಂದೇ ಬರಬೇಕೆಂದು ನಿಯಮವಿಲ್ಲ. ಈ ಎತ್ತಿನ ಸರತಿ ಆ ಎಮ್ಮೆಗೆ ಬರಲಾರದೆ? ಎಂದರು.

ಶಿವಯೋಗಿ ಸಹಜವಾಗಿ ಆಡಿದರೂ ಸತ್ಯದ ನೆರಳೇ ಅಲ್ಲವೇ? ಅದೇ ದಿನ ಸಂಗಪ್ಪನ ಮರಿಯಾನೆಯಂತಿದ್ದ ಎಮ್ಮೆ ಭಾರೀ ರೋಗದಿಂದ ನೆಲಕ್ಕುರುಳಿತು. ಇತ್ತ ಸ್ವಾಮಿಗಳ ಎತ್ತು ಗುಣಮುಖವಾಗಿ ಎದ್ದು ನೀರು ಮೇವು ತಿನ್ನಹತ್ತಿತು. ಎಮ್ಮೆ ನೀರು-ಮೇವು ಬಿಟ್ಟು ಎತ್ತಿನಂತೆಯೇ ಸಂಕಟದಿಂದ ಉರುಳಾಡಿ ಪ್ರಾಣಬಿಟ್ಟಿತು. ಸಂಗಪ್ಪ ಮಾಡಿದ ಪ್ರಯತ್ನಗಳೆಲ್ಲ ವ್ಯರ್ಥವಾದವು. ಆತ ಎಮ್ಮೆಯ ಮೇಲೆ ಬಿದ್ದು ಭೋರೆಂದು ಅಳಹತ್ತಿದ....

# ಆ ಕಲ್ಲು ಅವನಿಗೇ ಸಲ್ಲಲಿ

ಇನ್ನೊಂದು ಸಮಯದಲ್ಲಿ ಇನ್ನೊಂದು ವಿಚಿತ್ರ ಘಟನೆ ಜರುಗಿಬಿಟ್ಟಿತು. ಸ್ವಾಮಿಗಳು ಚಿತ್ತರಗಿಯ ಮಠವನ್ನು ಭರದಿಂದ ಕಟ್ಟಿಸುತ್ತಿದ್ದಾರೆ. ಒಡೆದ ಕಲ್ಲು, ಕಡೆದ ಕಲ್ಲು, ಕಗ್ಗಲ್ಲುಗಳನ್ನು ತಳಪಾಯ ಗೋಡೆಗಳಿಗೆ ಹಾಕುತ್ತಿದ್ದಾರೆ. ಆಗ ಪಕ್ಕದ ಕಿಡಕಿಯ ಮೇಲ್ಬಾವಣಿಗೆ ದೊಡ್ಡದೊಂದು ಹಾಸುಗಲ್ಲು ಬೇಕಾಯಿತು. ಆದರೆ ಆ ಅಳತೆಯ ದಪ್ಪ ಪರಸೀಕಲ್ಲು ಮಠದಲ್ಲಿರಲಿಲ್ಲ. ಕಾಯಕ ನಿಲ್ಲುವಂತಿಲ್ಲ. ಅದೂ ಲೋಕಕಲ್ಯಾಣ ಕಾಯಕ. 'ಚಿತ್ತರಗಿಯಲ್ಲಿ ಎಲ್ಲಿಯಾದರೂ ಈ ಅಳತೆಯ ಕಲ್ಲು ಇದೆಯೇ' ಎಂದು ಕೇಳಿದರು. ಭಕ್ತರೆಲ್ಲ ಇಲ್ಲೆಂಬಂತೆ ತಲೆ ಅಲ್ಲಾಡಿಸಿದರು. ಚಿತ್ತರಗಿ ಪಕ್ಕದ ವೀರಾಪುರದ ಒಬ್ಬ ಭಕ್ತ ಅಲ್ಲಿಯೇ ನಿಂತಿದ್ದ. ಆತ ಒಡನೆಯೇ ನುಡಿದ—

'ಬುದ್ಧಿ ನಮ್ಮ ಊರಲ್ಲಿ ಕುರುಬನ ಮನಿ ಮುಂದೆ ಒಂದು ಪರಸೀಕಲ್ಲು ಇದೆ. ತಾವು ಹೇಳಿಕಳಿಸಿದರೆ ಕೊಡಬಹುದು.'

ಸ್ವಾಮಿಗಳು ತಕ್ಷಣವೇ ತಮ್ಮ ಭಕ್ತನೊಬ್ಬನನ್ನು ವೀರಾಪುರಕ್ಕೆ ಕಳಿಸುತ್ತ—

'ಆ ಕಲ್ಲು ಹಾಗೇ ತರಬೇಡ. ಕಡಕೇಳಿ ತೆಗೆದುಕೊಂಡು ಬಾ. ಮುಂದೆ ಮತ್ತೊಂದು ಕಲ್ಲು ಕೊಟ್ಟರಾಯಿತು' ಎಂದು ಹೇಳಿದರು. ಮತ್ತೊಬ್ಬರ ಕೊರತೆ ಕಳವಳಗಳನ್ನು ಅರಿಯಬಲ್ಲ, ಸೂಕ್ಷ್ಮಸಂಜ್ಞಾತಂತು ಅವರಲ್ಲಿದ್ದವು.

ಈತ ಬಂದು ಕುರುಬನಿಗೆ ಆ ಕಲ್ಲು ಕಡವಾಗಿ ಕೊಡಲು ಕೇಳಿದನು. ಮೊದಲೇ ಕುರುಬ! ಕೇಳಬೇಕೆ? ಯಾಸಿಯಿಂದಲೇ ಕೇಳಿದ–

'ಕಲ್ಲು ಯಾತಕ್ಕಪಾ?'

'ಚಿತ್ತರಗಿ ಮಠಕ್ಕೆ.'

'ಅದಕ್ಕೇನ ಬಿಕ್ಕಿ ಬಿದ್ದೈತಿ ಕುರುಬನ್ನ ಕೇಳಾಕ?'

'ಹಾಗೇ ಕೊಡಬೇಡಪಾ. ಕಡಾ ಕೊಡು.'

'ಮಠದವರ ಗುಣಾನ ಇಂಥಾದ್ದು. ಕಡಾ ಅಂತ ಹೇಳಿ ಬಡಕೊಂಡು ಹೋಗೋದು.

'ಛೇ ; ಹಾಗೇಕನ್ನುವಿ? ಸ್ವಾಮಿಗಳು ಅಪ್ಪಣೆ ಕೊಡಿಸ್ಯಾರು.'

'ಅವರ ಅಪ್ಪಣಿ ಬರೇ ಕಲ್ಲೂ ಮಣ್ಣಿನ್ಯಾಗ ಇರ್ತದೇನು? ಆಗೂದಿಲ್ಲಾ ಹೋಗು.'

ಈತ ಭಾರೀ ನೋವಿನಿಂದ ಹೊರಳಿ ಬಂದು ಸ್ವಾಮಿಗಳಿಗೆ ನಡೆದ ಸಂಗತಿ ಅರುಹಿದನು. ಅದನ್ನು ಕೇಳಿ ಸ್ವಾಮಿಗಳ ಬಾಯಲ್ಲಿ ಹಠಾತ್ತನೇ ಮಾತೊಂದು ಸಹಜವಾಗಿಯೇ ಬಂತು—

'ಆಗಲಿ ಬಿಡಪಾ. ಆ ಕಲ್ಲು ಅವನಿಗೇ ಸಲ್ಲಲಿ.'

ಒಂದು ವಾರ ಕೂಡ ಕಳೆಯಲಿಲ್ಲ. ಕುರುಬ ಖತಂ ಆದ! ಅವನನ್ನು ಸ್ಮಶಾನಕ್ಕೆ ಒಯ್ದು ಕುಣಿಯಲ್ಲಿ ಕೂಡ್ರಿಸಲಾಯಿತು. ಕುಣಿಯಲ್ಲಿ ಕೂಡ್ರಿಸಿದ ಮೇಲೆ ಕುಣಿಬಾಯಿ ಮುಚ್ಚಲು ಒಂದು ಹಾಸುಗಲ್ಲು ಬೇಕಲ್ಲವೇ? ಮತ್ತೇನು ಶಿವಯೋಗಿಗಳಿಗೆ ಕೊಡಲು ನಿರಾಕರಿಸಿದ ಅದೇ ಆ ಹಾಸುಗಲ್ಲನ್ನೇ ತಂದು ಕುಣಿಬಾಯಿ ಮುಚ್ಚಿದರು! ಮಣ್ಣು ಎಳೆದು ಕುಣಿ ತುಂಬಿದರು!!

'ಆಗಲಿ ಬಿಡಪಾ, ಆ ಕಲ್ಲು ಅವನಿಗೇ ಸಲ್ಲಲಿ' ಎಂಬ ಸ್ವಾಮಿಗಳ ನುಡಿ ಸುಳ್ಳಾಯಿತೆ?

ಅವರು ಬೇಕಂತಲೇ ಆಡಿದ ಮಾತಲ್ಲ ಇದು. ಅವರ ಲೋಕಕಲ್ಯಾಣ ಕಾರ್ಯದಲ್ಲಿ ಏನೇ ವಿಘ್ನ ಬರಲಿ, ಅಂತರಾತ್ಮ ಅವರಿಂದ ಇಂಥ ಮಾತುಗಳನ್ನು ಆಡಿಸಿಬಿಡುತ್ತಿತ್ತು. ಅವರೆಂದಿಗೂ ಶಾಪ ಕೊಟ್ಟವರಲ್ಲ. ಆದರೆ ಅವರ ಆಳಾಗಿ ಅವರಲ್ಲಿ ರೂಪುಗೊಳ್ಳುತ್ತಿತ್ತು. ಅದು ಅವರ ಇಚ್ಛೆ ಅಲ್ಲ! ಶಿವನ ಇಚ್ಛೆ!!

# ಸಿದ್ಧನಗೌಡನ ಕೊಲೆ

ಇಲಕಲ್ಲಿನ ಸಿದ್ಧನಗೌಡನೆಂದರೆ ಊರಿಗೆ ಒಬ್ಬ ಹುಲಿಯಂತಿದ್ದ. ಭಾರೀ ಕಾಯ. ಕಲ್ಲೀ ಮೀಸೆ. ಪುಢಾರಿಗಳ ಗಂಡ, ಮುತ್ಸದ್ದಿಗಳ ಮಿಂಡ, ಪ್ರೇಮಕ್ಕೆ ಪ್ರೇಮ. ವೈರಕ್ಕೆ ವೈರ ಅವನ ಜೀವನ ಸೂತ್ರವಾಗಿತ್ತು. ಮಾತಿನಲ್ಲಿ ಠೀವಿ ಇತ್ತು. ಕಂಠದಲ್ಲಿ ಬಿಗುವು ಇತ್ತು. ಎದೆಯಲ್ಲಿ ಹರವು ಇತ್ತು. ಮೊಸೆಯಲ್ಲಿ ಪೌರುಷವಿತ್ತು.

ಸಿದ್ಧನಗೌಡ ಊರಿಗೆ ಹುಲಿಯಾದರೂ ಶಿವಯೋಗಿಗಳಿಗೆ ಅಂಜುತ್ತಿದ್ದ. ಹುಲಿಯು ಸಿಂಹಕ್ಕೆ ಅಂಜಲೇ ಬೇಕಲ್ಲವೇ ? ಶಿವಯೋಗಿಗಳು ಈತನಿಗೆ

'ಸಿದ್ಧಾ, ವೈರತ್ವವನ್ನು ಕಟ್ಟಿಕೊಳ್ಳಬೇಡ. ಊರ ಉಸಾಬರಿ ಬಿಡು. ಹದಿನೆಂಟಕ್ಕೆ ಕೈಹಾಕಬೇಡ. ನಿನ್ನಷ್ಟಕ್ಕೆ ನೀನಿರು. ಮುಂದೆ ಕೆಡಗಾಲ ಸಂಭವ ವಿದೆ. ಎಚ್ಚರಿಕೆ !'

ಎಂದು ಪದೇ ಪದೇ ಹೇಳಿಯೇ ಹೇಳಿದರು. ಆದರೆ ಈತ ಸ್ವಾಮಿಗಳು ಹೇಳಿದಾಗ 'ಹುಂ' ಎಂದು, ಹಿಂದುಗಡೆ, 'ನಾನೆಂದರೆ ಫೌಜದಾರರು ನಡುಗು ತ್ತಾರೆ. ಕಲೆಕ್ಟರ ಅಂಜುತ್ತಾರೆ. ಇದೇನು ಮಹಾ !' ಎನ್ನುತ್ತಿದ್ದ. ಶಿವ ಯೋಗಿಯ ಸೂಚನೆ ಸುಳ್ಳಾದೀತೆ? ಒಂದು ದಿನ ಹಾಡೇ ಹಗಲು ಆತನ ಖೂನಿ ಆಯಿತು! ಆತನ ವಿರುದ್ಧ ಪಾರ್ಟಿಯ ಜನ, ಮರಮೋಸದಿಂದ ಮೈ ಮೇಲೆ ಬಿದ್ದು, ಅನ್ನಾವಿನ್ನಿಯಾಗಿ ಕಡಿದುಬಿಟ್ಟರು.

ಪೋಲೀಸ ತಪಾಸಣೆಯಲ್ಲಿ ಅನೇಕ ಜನ ಕೊಲೆಗಡಕರನ್ನು ಸಂಶಯ ದಿಂದ ಹಿಡಿದು ಬಂಧಿಸಲಾಯಿತು. ಆದರೆ ಅವರ ಮೇಲಿನ ಕೊಲೆಯ ಆಪಾ ದನೆ ಇನ್ನೂ ನ್ಯಾಯಾಲಯದಲ್ಲಿ ಸಿದ್ಧವಾಗಿರಲಿಲ್ಲ. ಅವರೆಲ್ಲ ಚಾಣಾಕ್ಷತನ ದಿಂದ ಉಳಕೊಳ್ಳುವ ಹಾದಿ ಹುಡುಕುತ್ತಿದ್ದರು. ಕೇಸು ಕೋರ್ಟಿನಲ್ಲಿ ಭರ್ಜರೀ ನಡೆಯಿತು. ಎರಡೂ ಪಾರ್ಟಿಯವರು ಹಣವನ್ನು ಹೊಳೆಹರಿಸಿ ದಂತೆ ಹರಿಸಿದರು.

ನಾಳೆ ಕೋರ್ಟಿನಲ್ಲಿ ಮುದ್ದತ್ತು. ಸಾಕ್ಷಿ ವಿಚಾರಣೆ ಇವತ್ತಿನಂತೆ ಸಿದ್ಧನ

ಗೌಡನ ತಮ್ಮನಾದ ಅಯ್ಯಣ್ಣಗೌಡನು ಮುಖ್ಯ ಸಾಕ್ಷಿಗಳನ್ನು ಸಿದ್ಧಮಾಡಿಕೊಂಡು ಪ್ರಯಾಣಕ್ಕೆ ಸಿದ್ಧನಾದ. ಹೋಗುವ ಮೊದಲು ಶಿವಯೋಗಿಯ ಆಶೀರ್ವಾದ ಪಡೆಯಲು ಎಲ್ಲರೂ ಮಠಕ್ಕೆ ಬಂದು ಶ್ರೀಗಳವರಿಗೆ ಸಾಷ್ಟಾಂಗ ಹಾಕಿದರು. ಅಯ್ಯನಗೌಡನಿಗೆ ದುಃಖ ಒತ್ತರಿಸಿ ಬಂತು. ಅಣ್ಣನ ಕೊಲೆಯ ಸಂಕಟದಿಂದ ಬಿಕ್ಕಿ ಬಿಕ್ಕಿ ಅಳಹತ್ತಿದನು. ಸ್ವಾಮಿಗಳ ಕರುಳು ಉಕ್ಕಿಬಂದು ಆತನನ್ನು ಸಮಾಧಾನ ಪಡಿಸುತ್ತ ಹೇಳಿದರು—

'ಅಯ್ಯನಗೌಡಾ ಅಳಬೇಡ. ಶಾಂತನಾಗು. ಸಮಾಧಾನ ತಾಳು. ನಿಮ್ಮ ಅಣ್ಣನಿಗೆ ನಾವು ತಿಳಿಹೇಳಿದೆವು. ಆದರೆ ಆತ ನಮ್ಮ ಮಾತು ಕೇಳಲಿಲ್ಲ. ಜೀವನದಲ್ಲಿ ವೈರಿಗಳನ್ನೇ ಕಟ್ಟಿಕೊಂಡ. ಮಿತ್ರರನ್ನು ಗಳಿಸಿಕೊಳ್ಳಲಿಲ್ಲ. ನೀನೂ ಅವನ ದಾರಿಗೆ ಬೀಳಬೇಡ. ಹಿಂಸೆಗೆ ಪ್ರತಿಹಿಂಸೆ ಮಾಡಬೇಡ. ಅದು ದುಃಖದಲ್ಲೇ ಪರ್ಯವಸಾನವಾಗುತ್ತದೆ' ಎಂದರು.

ಅಯ್ಯನಗೌಡ ಅಂಗಲಾಚಿ ಕೇಳಿದ—

'ಬುದ್ಧಿ; ತಮ್ಮ ಮಾತನ್ನು ಶಿರಸಾವಹಿಸುತ್ತೇನೆ. ಆದರೆ ಕೊಲೆಗಡುಕರು ಇನ್ನೂ ಬಾಳಿರುವರಲ್ಲಾ ? ಅವರಿಗೂ ನಿಮ್ಮ ಕರುಣೆ ಇದೆಯೇ ?'

'ಛೀ ಹುಚ್ಚಪ್ಪ. ಸುಮ್ಮನೆ ನೀನು ಮುದ್ದತ್ತಿಗೆ ಹಾಜರ ಆಗು. ನ್ಯಾಯದೇವತೆ ಬದುಕಿದ್ದಾಳೆ. ಸತ್ತಿಲ್ಲ !'

'ಆಗಲಿ ಬುದ್ಧಿ, ಆಶೀರ್ವದಿಸಿರಿ !'

....ಎಂದು ಅಡ್ಡಬಿದ್ದನು. ಶ್ರೀಗಳು ತಮ್ಮ ಹತ್ತಿರ ಇದ್ದ ಹತ್ತು ಮಾವಿನ ಹಣ್ಣುಗಳನ್ನು ಆತನ ಉಡಿಯಲ್ಲಿ ಹಾಕಿ ಹೇಳಿದರು—

'ಗೌಡಾ....ಈ ಹತ್ತು ಹಣ್ಣುಗಳನ್ನು ಹಿಡಿ. ನೀನು ಈ ಹಣ್ಣುಗಳನ್ನು ತಿಂದು ಚನ್ನಾಗಿ ನೀರು ಕುಡಿ, ಆ ನೀರು ನಿನ್ನ ವೈರಿಗಳಿಗೆ ನೀರು ಕುಡಿಸುವುದು' ಎಂದರು.

ಶ್ರೀಗಳ ಮಾತು ಮಂತ್ರವಲ್ಲವೇ ? ಸಿದ್ಧನಗೌಡನನ್ನು ಕೊಂದ ಹತ್ತು ಜನರಿಗೆ ಕರಿನೀರಿನ ಶಿಕ್ಷೆಯಾಯಿತು ! ಶಿಕ್ಷೆಯಲ್ಲಿಯೂ ಅನೇಕರು ರೋಗಬಾಧೆಯಿಂದ ಚಿಂತಾಗ್ನಿಯಿಂದ ಪಟಪಟನೆ ಸತ್ತುಹೋದರು !!

ಶಿವಯೋಗಿಗಳ ಮಾತಿನ ಸಂಕೇತ ಎಷ್ಟು ಅದ್ಭುತ ? ಇವರ ಮಾತು ಮೀರಿದ್ದರಿಂದ ಸಿದ್ಧನ ಗೌಡನ ಕೊಲೆ ಆಯಿತು ! ಮಾವಿನ ಹಣ್ಣು ಕೊಟ್ಟ ಸೂಚನೆಯಿಂದ ಕೋರ್ಟಿನ ಕೇಸು ಹಣ್ಣಾಗಿ ಗೆದ್ದು ಬಂದಿತು !! ಹತ್ತು ಮಾವಿನ ಹಣ್ಣುಗಳನ್ನು ಕೊಟ್ಟಿದ್ದರಿಂದ ಹತ್ತು ಜನರಿಗೆ ಶಿಕ್ಷೆ ಯಾಯಿತು !!! ಹಣ್ಣುಗಳನ್ನು ತಿಂದು ನೀರು ಕುಡಿ, ಆ ನೀರು ನಿನ್ನ ವೈರಿಗಳಿಗೆ ನೀರು ಕುಡಿಸುವದು' ಎಂದದ್ದರಿಂದ; ಆ ಹತ್ತು ಜನ ಕೊಲೆಗಡುಕರಿಗೆ ಕರಿನೀರಿನ ಶಿಕ್ಷೆಯೇ ಆಯಿತು !!!!

# ನೀಲಾಂಬಿಕೆಯ ಮಡಿವಂತಿಕೆ

ಕಂದಗಲ್ಲ ಪರ್ವತಶಾಸ್ತ್ರಿಗಳ ಹೆಸರನ್ನು ಕೇಳದವರಾರು ? ಪರ್ವತ ದಂತೆಯೇ ಪ್ರಕಾಂಡ ಪಂಡಿತರು. ಅವರ ಮಗಳೇ ನೀಲಾಂಬಿಕೆ. ವಿಚಿತ್ರ ಹುಡುಗಿ. ತಾರುಣ್ಯ ತುಂಬಿದರೂ ತಾಮಸ ಬಲಿಯದ ಪ್ರಾಜಾಸಂಪನ್ನೆ.

ಆದರೆ ಅವಳ ಭಕ್ತಿಯೇ ಅವಳಿಗೆ ಪೆಡಂಭೂತವಾಗಿ ಕಾಡಬೇಕೆ ? ಮಡಿವಂತಿಕೆಯೇ ಮಹಾಹುಚ್ಚಾಗಿ ಸೇರಬೇಕೆ? ಹೆಜ್ಜೆಹೆಜ್ಜೆಗೆ ಮಡಿ. ಉಸಿರು ಬಿಟ್ಟರೆ ಮಡಿ. ಉಸಿರು ತೆಗೆದುಕೊಂಡರೆ ಮಡಿ, ಸ್ವಲ್ಪವೂ ಮೈಲಿಗೆ ಸೋಂಕುವಂತಿಲ್ಲ. ಮಡಿವಂತಿಕೆ ಅತಿರೇಕವನ್ನು ಮುಟ್ಟಿಬಿಟ್ಟಿತು ! ಮೈಲಿಗೆ ಯಾಗುವದೆಂದು ತಂದೆತಾಯಿಗಳನ್ನೇ ಮುಟ್ಟುವದನ್ನು ಬಿಟ್ಟಳು. ಹಾಸಿಗೆಯನ್ನು ಮುಟ್ಟಿದರೆ ಮೈಲಿಗೆಯೆಂದು ನೆಲದ ಮೇಲೆಯೇ ಮಲಗ ತೊಡಗಿದಳು. ಮೈಲಿಗೆಯಾಗುತ್ತದೆಯೆಂದು ಮನೆಯ ಕಂಬಗಳನ್ನೂ– ಪಾತ್ರೆಗಳನ್ನೂ–ವಸ್ತುವಡವೆಗಳನ್ನೂ ಮುಟ್ಟಲಿಲ್ಲ.

ಈ ಹುಚ್ಚು ಇಲ್ಲಿಗೇ ನಿಲ್ಲಲಿಲ್ಲ. ಲಿಂಗವಿಲ್ಲದವರು ಕಣ್ಣಿಗೆ ಬಿದ್ದರೆ ಸ್ನಾನಮಾಡುತ್ತಿದ್ದಳು, ಅವರ ಧ್ವನಿ ಕಿವಿಯಲ್ಲಿ ಬಿದ್ದರೆ ಸ್ನಾನ, ಭೇರಿ– ಮೃದಂಗ ಮೊದಲಾದ ಚರ್ಮವಾದ್ಯಗಳ ಧ್ವನಿ ಕೇಳಿದರೆ ಸ್ನಾನ, ನಾಯಿಗಳು ಬೊಗಳಿದರೆ ಸ್ನಾನ, ಕಾಗೆಗಳು ಕೂಗಿದರೆ ಸ್ನಾನ, ಕೊರವರು ಸನಾಯಿ ಬಾರಿಸಿದರೆ ಸ್ನಾನ, ಹೊಲೆಯರು ಕಾಳಿಯನ್ನು ಊದಿದರೆ ಸ್ನಾನ ! ಹಗಲು ರಾತ್ರಿ ಸ್ನಾನವೇ ಸ್ನಾನ. ತಲೆಯಮೇಲೆಯೇ ನೀರು ಸುರುವಿಕೊಳ್ಳುತ್ತಿದ್ದಳು.

ಹೀಗಾಗಿ ಕೂದಲು ಕಟ್ಟು ಎಂದಿಗೂ ಆರಲಿಲ್ಲ. ನೆಗಡಿಯಾದರೂ ಬಿಡುವಂತಿಲ್ಲ !

ಪರ್ವತಶಾಸ್ತ್ರಿಗಳಿಗೆ ಇದೊಂದು ಒಡೆಯಲಾರದ ಒಗಟಾಯಿತು. ಬಿಡಿಸದ ಕಗ್ಗಂಟಾಯಿತು. ಕೇಳಿನೋಡಿದರು, ಹೇಳಿನೋಡಿದರು, ಬೇಡಿ ನೋಡಿದರು, ಬೆದರಿಸಿ ನೋಡಿದರು. ಯಾವುದಕ್ಕೂ ಅವಳ ಅತಿರೇಕ ಮಡಿ ಇಳಿಯಲಿಲ್ಲ. ಮತ್ತೆ ಮತ್ತೆ ಹೆಚ್ಚಾಯಿತು. ಶಾಸ್ತ್ರಿಗಳು ಅವಳಿಗೆ ಲಗ್ನದ ರುಚಿ ಹಚ್ಚಿದರು. ಪೀತಾಂಬರ–ಬಂಗಾರ ದಾಗೀನಗಳ ಆಸೆ ತೋರಿದರು. ಪಂಚಪಕ್ವಾನ್ನ ಭೋಜನ ಉಣಿಸಿದರು, ಯಾವುದಕ್ಕೂ ಅವಳ ಆಚಾರ

ಅಳಿಯಲಿಲ್ಲ. ಪ್ರಾಪಂಚಿಕದ ಸುಖ, ಸಂಸಾರದ ಅಭಿರುಚಿ, ಕಾಮದ ಲಾಲಸೆ, ವಾತ್ಸಲ್ಯದ ಒತ್ತಾಸೆ ಯಾವವೂ ಅವಳನ್ನು ಮರುಳುಗೊಳಿಸಲಿಲ್ಲ. ಮಡಿಯಲ್ಲಿ ತಾನೇತಾನಾದಳು.

ಶಾಸ್ತ್ರಿಗಳು ಅವಳ ಹುಚ್ಚು ಬಿಡಿಸಬೇಕೆಂದು ಕೂಡಲಸಂಗಮಕ್ಕೆ ಕರೆದೊಯ್ದರು. ಅಲ್ಲಿ ಎರಡು ತಿಂಗಳ ಇದ್ದರೂ ಅವಳ ಮಡಿವಂತಿಕೆ ಸರಿಯ ಲಿಲ್ಲ. ಅದನ್ನು ಬಿಡಿಸಲು ಸಂಗಮನಾಥನೂ ಸೋತುಹೋದ.

ಕೊನೆಗೆ ಪರ್ವತಶಾಸ್ತ್ರಿಗಳ ಕೊರಗು ವಿಜಯಮಹಾಂತ ಶಿವಯೋಗಿ ಗಳಿಗೂ ತಲುಪಿತು. ಅವರು ಆಕಸ್ಮಿಕವಾಗಿ ಕಂದಗಲ್ಲಿಗೆ ಆಗಮಿಸಬೇಕಾಯಿತು. ಆಗ ಶಾಸ್ತ್ರಿಗಳಿಗೂ ಕಾಯಿಲೆಯಾಗಿತ್ತು. ಮಾತಾಡಿಕೊಂಡು ಬರೋಣವೆಂದು ಅವರ ಮನೆಗೆ ದಯಮಾಡಿಸಿದರು. ನೀಲಾಂಬಿಕೆಯ ವಿಚಿತ್ರ ವರ್ತನೆ, ಗಾಢವಾದ ಭಕ್ತಿ ಸ್ವಾಮಿಗಳಿಗೆ ಸಂತೃಪ್ತಿಗೊಳಿಸಿದವು.

ಆಗಲೇ ಮಧ್ಯಾಹ್ನದ ಪೂಜಾಸಮಯವಾಯಿತು. ಸ್ವಾಮಿಗಳು ಮೆಲ್ಲನೇ ಮೇಲೆದ್ದರು. ಆದರೆ ಶಾಸ್ತ್ರಿಗಳು ಬಿಡಲಿಲ್ಲ. ಇಲ್ಲಿಯೇ ಪೂಜೆ ತೀರಿಸಿಕೊಂಡು ಹೋಗಬೇಕೆಂದು ಆಗ್ರಹಪಡಿಸಿದರು. ಆದರೆ ಇವರ ಆಚಾರಕ್ಕೆ ಸಂಸಾರಿಕರಲ್ಲಿ ಅನುಕೂಲತೆ ಸಾಧ್ಯವೇ ಇಲ್ಲ. ಆದರೂ ಶಿವಯೋಗಿ ಗಳೇ ಮರುಕ ಹುಟ್ಟಿ, ತಮ್ಮ ಲಿಂಗಪೂಜಾ ಪ್ರಸಾದದ ಸೇವೆಯನ್ನು ನೀಲಾಂಬಿಕೆ ಮಾಡಿದರೆ ಮಾತ್ರ ತಾವು ಅಲ್ಲಿ ಪೂಜೆ ತೀರಿಸಿಕೊಳ್ಳುವದಾಗಿ ಕರಾರು ಹಾಕಿದರು. ಶಾಸ್ತ್ರಿಗಳು ತಕ್ಷಣ ಒಪ್ಪಿದರು.

ಆ ದಿನ ನೀಲಾಂಬಿಕೆಗೆ ತನ್ನ ಮಡಿಧರ್ಮದ ಬಾಗ್ಯದ ಬಾಗಿಲು ತೆರೆ ದಂತಾಯಿತು. ಸಾಕ್ಷಾತ್ ಮಡಿವಂತ ಮಹಾಪುರುಷನೇ ತನ್ನ ಕೈಯಿಂದ ಪೂಜೆ ಸ್ವೀಕರಿಸುವದೆಂದರೆ ಕೇಳಬೇಕೆ! "ನನ್ನ ಉಗ್ರ ವ್ರತ ಇಂದು ಸಫಲವಾಯ್ತು, ಧನ್ಯಳಾದೆ ! ಧನ್ಯಳಾದೆ !!" ಎಂದು ಹಿಗ್ಗಿ ಕುಣಿದಾಡಿದಳು. ಮಡಿಯಿಂದ ತಾನೇ ಬಾವಿಗೆ ಹೋಗಿ ನೀರು ತಂದಳು. ಪತ್ರಿ-ಪುಷ್ಪ ತಂದಳು. ಪೂಜಾ ಕೋಣೆ ಸಜ್ಜು ಮಾಡಿದಳು. ಗುಗ್ಗಳ-ಕರ್ಪೂರ-ದೀಪ-ಧೂಪ-ಗಂಧ-ಅಕ್ಷತೆ-ತಾಂಬೂಲ-ಪಂಚಾಮೃತ-ಪಂಚಾರತಿಗಳನ್ನು ಸಡಗರದಿಂದ ಅಣಿಗೊಳಿಸಿದಳು. ವಿಜಯ ಮಹಾಂತಶಿವಯೋಗಿಗಳು ಅಂದು ವೈಭವದಿಂದಲೇ ಪೂಜಾಪ್ರಸಾದ ಗಳನ್ನು ಪೂರೈಸಿ ಇಲಕಲ್ಲಿಗೆ ಮರಳಿಹೋದರು.

ಆದರೆ ಇದೇನು ವಿಚಿತ್ರ ! ಅಂದಿನಿಂದಲೇ ಅವಳ ಉಗ್ರಮಡಿವಂತಿಕೆ ಎಲ್ಲಿಗೋ ಹೋಗಿಬಿಟ್ಟಿತು !! ಎಲ್ಲರಂತೆ ಒಂದೇ ಸಲ ಸ್ನಾನ. ಎಲ್ಲರಂತೆ ಆಚಾರ. ಎಲ್ಲರಂತೆ ಮಾತು–ಕಥೆ–ಆಟ–ವಿನೋದ–ಹಾಸ್ಯ–ಸರಸಗಳಲ್ಲಿ ಮನೆಯವರೊಂದಿಗೆ ಬೆರೆತಳು. ವಿಜಯಮಹಾಂತ ಶಿವಯೋಗಿ ಅವಳ ಹುಚ್ಚನ್ನು ಅವಳಿಗೇ ಅರಿಯದಂತೆ ತನ್ನ ಜೋಳಿಗೆಯಲ್ಲಿ ತುಂಬಿಕೊಂಡು ಹೋಗಿಬಿಟ್ಟಿದ್ದ !

# ಸಾಲಕ್ಕೆ ಸೋತ ಬಡ ಜಂಗಮ

'ದಯವೇ ಧರ್ಮದ ಮೂಲವಯ್ಯಾ' ಎಂದು ಡಂಗುರ ಸಾರಿದಂತೆ ಸಾರಿ ಆಡಂಬರದ ಜೀವನದಲ್ಲಿ ಸುಖಿಸುವ ಆಚಾರವಂತರು ಎಷ್ಟಿಲ್ಲ? 'ಅಪ್ಪಗಳ' ವಚನಗಳನ್ನು ಮಂತ್ರದಂತೆ ಪಠಿಸಿ, ವಿಜಯ ಮಹಾಂತ ಶಿವಯೋಗಿಗಳು ಕರುಣೆಯ ಸಾಕಾರ ಮೂರ್ತಿಗಳಾಗಿದ್ದರು. ಇದೊಂದು ಇವರ ಜೀವನದಲ್ಲಿ ಬಿಡಿಸಲಾಗದ ವಿಚಿತ್ರ ಸಂಗತಿ. ಯಾಕೆಂದರೆ ಇವರು ನೋಡಲು ಭೀತಿ ಹುಟ್ಟುವಷ್ಟು ಉಗ್ರರೂಪಿಗಳಾಗಿದ್ದರು. ಇವರ ಸಹಜ ಮಾತಿನಿಂದಲೇ ಅನೇಕ ಅವಿವೇಕಿಗಳ ವಂಶಗಳು ತಳಬುಡ ಕಿತ್ತು ನಾಶವಾಗಿದ್ದವು. ಇಂಥ ಭಯಂಕರ ಯೋಗಮೂರ್ತಿ! ಆದರೂ ಅವರ ಅಂತರಂಗ ಕೂಸಿನಂತೆ ಕೋಮಲವಾಗಿತ್ತು. ಹೂವಿನಂತೆ ನಯವಾಗಿತ್ತು ಎಂಬುದನ್ನು ಜನರು ಅರಿಯರು. ಇವರ ಕಟಾಕ್ಷದಿಂದ ಲಕ್ಷಾವಧಿ ಭಕ್ತರ ಕೊರಗು-ಕಳವಳ ಅವರಿಗರಿಯದೇ ಜಾರಿಹೋಗಿದ್ದವು. ಈ ವ್ಯಕ್ತಿತ್ವವೇ ಈ ಮಹಾ ಶಿವಯೋಗಿಯ ಜೀವನದಲ್ಲಿ ಒಡೆಯಲಾಗದ ಮಹಾಒಗಟು. ಆದರೆ ಅವರ ಒಗಟೇ ಅಲ್ಲ! ಅದೊಂದು ಪ್ರೇಮದ ಕಾರಂಜಿ!! ಕರುಣಾ ಸಿಂಧುವಿನ ಜಲಪುಂಜ!!!

ಬಳ್ಳಾರಿಯ ಪಕ್ಕದ ಒಂದು ಪುಟ್ಟಹಳ್ಳಿ. ಅಲ್ಲಿ ಒಬ್ಬ ಬಡಜಂಗಮ. ಮಕ್ಕಳು ಮಾತ್ರ ಏಳು ಜನರು! ಹೆಂಡತಿ ಮಹಾ ಜಗಳಗಂಟಿ. ಈಗ ಬೀಳುತ್ತದೆಯೋ ಇನ್ನೊಂದು ಕ್ಷಣಕ್ಕೆ ಬೀಳುತ್ತದೆಯೋ ಎಂದು ಹೆದರಿಸುವ ಮುರುಕು ಮನೆ, ಇದರ ಮೇಲೆ ಬಡತನ, ಮತ್ತೆ ಅದರ ಮೇಲೆ ಸಾಲ! ಹೀಗಾಗಿ ಬಾಳುವುದೇ ಬೇಸರವಾಗಿ ಕಂಗೆಟ್ಟುಬಿಟ್ಟಿದ್ದನು. ಇವನದೇ ಒಂದು ಚಿಕ್ಕ ಜಮೀನು ಇತ್ತು. ಅದರ ಆಧಾರದ ಮೇಲೆ ಒಬ್ಬ ಶ್ರೀಮಂತ ಈತನಿಗೆ ಎರಡುನೂರು ರೂಪಾಯಿಗಳನ್ನು ಸಾಲಕೊಟ್ಟ. ಅಂದಿನಿಂದ ಸುಖಸಂಸಾರ ಸುರುವಾಯಿತು! ಅಂಬಲಿಯ ಬದಲು ಪಂಚಾಮೃತ ಆರಂಭವಾಯಿತು!! ಎಲುವಿನ ಗೂಡಿನಂತಿದ್ದ ಮಕ್ಕಳು ಕೆಲದಿನಗಳಲ್ಲೇ ಹಾಲ್ಗಾಳು ತಿಂದ ಗೊರವಂಕಗಳಂತೆ ಉಬ್ಬಿದರು. ಜಗಳಗಂಟಿ ಹೆಂಡತಿ ಉದ್ದಕ್ಕೂ ಅಗಲಕ್ಕೂ ಲಕ್ಷ್ಮಿ ಆದಳು.

ಮತ್ತೇನು ? ಕೆಲ ದಿನಗಳಲ್ಲೇ ರೂಪಾಯಿ ದಿಕ್ಕಾಪಾಲಾದವು. ಅಂಬಲಿಯ ಗಡಿಗೆಗೂ ದಿಕ್ಕಿಲ್ಲವಾಯಿತು. ಇತ್ತ ಸಾಹುಕಾರ ಜಬರಿಸಿ ಅಬ್ಬರಿಸಿ ಗದರಿಸಿ ಹೋಗಹತ್ತಿದ. ಅತ್ತ ಮಳೆ ಆಗದ್ದರಿಂದ ಭೂಮಿಯಲ್ಲಿ ಬಿತ್ತಿದ ಬೀಜ ನೆಲದಲ್ಲೇ ಕಮರಿಹೋಗಿದ್ದವು. ಹೆಂಡತಿಯ ಕಾಟ ಹೆಚ್ಚಾಯಿತು. ಮಕ್ಕಳು ಹಿಟ್ಟಿನ ಜೋಳಿಗೆಯನ್ನು ಹರಿಯಹತ್ತಿದವು. ತಾನು ತಂದ ಎರಡು ನೂರು ರೂಪಾಯಿಗೆ ಬಡ್ಡಿಯೂ ಅಷ್ಟೇ ಸೇರಿ ನಾಲ್ಕುನೂರಾಯಿತು! ಹೊಲಮನೆ ಎರಡೂ ಮಾರಿದರೂ ಆ ಸಾಲ ಪೂರ್ತಿ ಮುಟ್ಟುತ್ತಿದ್ದಿಲ್ಲ. ಅದು ಅಗ್ಗಳತೆ ಕಾಲವಲ್ಲವೇ? ಒಂದು ವರ್ಷ ಮುಗಿಯಿತು, ಮಳೆ ಇಲ್ಲ. ಎರಡು ವರ್ಷ ದಾಟಿದವು. ಮಳೆ ಇಲ್ಲ. ಸಾಹುಕಾರ ಧರಣೆ ಕುಳಿತ. ಇತ್ತ ಹೆಂಡತಿ ಮಕ್ಕಳು ಹಲ್ಲಿಯಾದವು. ಬಡವನಿಗೆ ಬೇರೆ ದಾರಿಯೇ ಹೊಳೆಯಲಿಲ್ಲ.

ಒಂದು ದಿನ ರಾತ್ರಿ ಆ ಬಡಜಂಗಮ ಮೆಲ್ಲನೇ ಎದ್ದ. ಯಾರಿಗೂ ಗೊತ್ತಾಗದಂತೆ ಆ ಊರಿನಿಂದ ಪಲಾಯನ ಮಾಡಿಬಿಟ್ಟ! ತಾನು ಇಲ್ಲದಿದ್ದರ ಹೆಂಡತಿ ಮಕ್ಕಳು ಭಿಕ್ಷುಕರಿಗಿಂತಲೂ ಕಡೆಯಾಗಿ ಸಾಯುತ್ತವೆಯೆಂದು ಆತ ವಿಚಾರಿಸಲಿಲ್ಲ. ಕಂಡ ಕಂಡ ಊರಿಗೆ ಹೋದ. ಗುಡಿ-ಗುಂಡಾರ-ಮಠ-ಮಾನ್ಯಗಳಿಗೆ ಹೋಗಿ, ನಾಲ್ಕೊಪ್ಪತ್ತು ದಾಸೋಹದಲ್ಲಿ ಉಂಡು, ಸೇವೆ ಮಾಡುತ್ತ ಹಾಗೇ ಮುಂದುವರಿದ. ಕಾಲಕ್ರಮದಲ್ಲಿ ಚಿತ್ತರಗಿ ಮಠಕ್ಕೂ! ಬಡತನದ ಚಕ್ರವರ್ತಿಯು ಹಸಿವೆಯ ಅಂಬಾರಿಯಲ್ಲಿ ಕುಳಿತು ಬಂದಂತೆ ಬಂದ! ಸ್ವಾಮಿಗಳಿಗೆ ದೀರ್ಘದಂಡ ವಂದನೆ ಸಲ್ಲಿಸಿ, ಏನೂ ಆಡದೆ ಒಂದು ಮೂಲೆಗೆ ಸುಮ್ಮನೆ ಕುಳಿತುಬಿಟ್ಟ.

ವಿಜಯ ಮಹಾಂತ ಸ್ವಾಮಿಗಳು ಭಾರೀ ತೀಕ್ಷ್ಣಮತಿಗಳಲ್ಲವೇ? ಕಾರಣ ಅವರು ಜೀವನದ ಕಷ್ಟನಷ್ಟಗಳಲ್ಲಿ ಹುಣ್ಣು ಹಾಗಲವಾಗಿ ಮುಳ್ಳು ಮುಳ್ಳು ಮೂರಗಲಾಗಿ ಬೆಳೆದುಬಂದಿದ್ದರು. ಅಲ್ಲದೇ ಅವರ ದಿವ್ಯದೃಷ್ಟಿಯಲ್ಲಿ ತಮ್ಮ ಬಳಿಗೆ ಸುಳಿದವರ ಕಷ್ಟ-ನಷ್ಟಗಳು ಗೋಚರಿಸುತ್ತಿದ್ದವು. ಮೆಲ್ಲನೆ ಮಾಹೇಶ್ವರನನ್ನು ವಿಚಾರಿಸಿದರು. ಬಡತನದ ಕೊಳ್ಳಿದೆವ್ವ ಆತನನ್ನು ಕೊಳ್ಳೆಹೊಡೆದು ಸೂರೆ ಮಾಡಿದ ಸಂಗತಿ ತಿಳಿಯಿತು. ಆದರೂ ತಮ್ಮ ನಿರ್ಮಲ ಭಾಷೆಯಲ್ಲಿ ಅವನನ್ನು ಗದರಿಸಿದರು.

'ನೀನು ಹೀಗೆ ಓಡಿಬಂದರೆ ಹೆಂಡರು ಮಕ್ಕಳ ಗತಿಯೇನು? ನೀನೊಬ್ಬ ಸಂಕಟದಿಂದ ಪಾರಾದರೆ ಮುಗಿಯಿತೇನು? ರಣಹೇಡಿಯಂತೆ ಓಡಿಬರುವದು ನಿನ್ನಂಥ ಜಂಗಮನಿಗೆ ಶೋಭಿಸೀತೆ? ಅವರೆಲ್ಲರನ್ನೂ ಕೊಂದು ನೀನೊಬ್ಬ ಬಾಳ ಬೇಕೆನ್ನುವಿಯಾ? ನಡೆ ಇಲ್ಲಿಂದ. ನಿನ್ನಂಥ ಮಂದಮತಿಗೆ ಈ ಮಠ ದಲ್ಲಿ ಸ್ಥಾನವಿಲ್ಲ.

ಆದರೆ ಆತ ಈ ಮಾತಿಗೆ ಅಲುಗಲಿಲ್ಲ. ಅಂಗಲಾಚಿ ಬೇಡಿಕೊಂಡನು. ತಾನು ಹೋದರೆ ಸಾಲಕೊಟ್ಟ ಶ್ರೀಮಂತ ತನ್ನ ತಲೆಬುರುಡೆಯ ಪರಟೆ ಗಳನ್ನೇ ಬಿಚ್ಚುತ್ತಾನೆಂದು ಗೋಗರೆದನು. ಚಿತ್ತರಗಿಯ ಮಠದಲ್ಲೇ ಸ್ವಸ್ಥವಾಗಿ ಸೇವೆ ಮಾಡುತ್ತ ಮುಂದೆ ಹದಿನಾಲ್ಕು ದಿನಗಳವರೆಗೆ ಮಠದಲ್ಲೇ ಉಳಿದನು.

ಆದರೆ ಕಥೆ ಇಲ್ಲಿಗೇ ನಿಲ್ಲಲಿಲ್ಲ. ಸಾಲಕೊಟ್ಟ ಶ್ರೀಮಂತ ಬಡಜಂಗಮ ನನ್ನು ನುಂಗಿ ನೀರ್ಗುಡಿಯುವಂತೆ ಹಲ್ಲು ಕಟೆಯುತ್ತ ಆತ ಹೋದ ಸುಳು ವನ್ನು ಊರಿಂದೂರಿಗೆ ಹೋಗಿ ಕೇಳುತ್ತ ಕೇಳುತ್ತ ನೇರವಾಗಿ ಚಿತ್ತರಗಿ ಮಠಕ್ಕೆ ಬಂದನು. ಕಾರಣ ಏನೂ ಕಾಗದ ಪತ್ರ ಮಾಡಿಕೊಳ್ಳದೇ ಕೇವಲ ಬಾಯ್ಮಾತಿನ ಮೇಲೆ ಆತ ಸಾಲಕೊಟ್ಟಿದ್ದನು.

ಚಿತ್ತರಗಿಯ ಮಠದಲ್ಲಿ ಬಡ ಜಂಗಮ ಇದ್ದದ್ದನ್ನು ಕಂಡು, ಹಸಿದ ಸಿಂಹ ಹೆಣ್ಣು ಚಿಗರೆಯ ಮೇಲೆ ಹಾರಿಬಂದಂತೆ ಬಂದ. ಅವನನ್ನು ತಾಡು ಕುಟ್ಟಿದಂತೆ ಥೂಕಾರ ಹಾಕಹತ್ತಿದ. ಬಡಜಂಗಮನೂ ನಿರ್ವಿಕಲ್ಪ ಸಮಾಧಿ ಹತ್ತಿದ ಸನ್ಯಾಸಿಯಂತೆ ಸುಮ್ಮನೆ ಕುಳಿತ. ಮಿಸುಗಲಿಲ್ಲ. ಬೇಕಾ ದಷ್ಟು ಬೈದರೂ ನನಗೆ ಪಂಚಾಮೃತದ ಅಭಿಷೇಕವೆಂದು ತಿಳಿದು ಕಲ್ಲು ಮೂರ್ತಿಯಂತೆ ಕುಳಿತ. ಆ ಬಡವ ಬಲಿಯಲ್ಲಿ ಬಿದ್ದ ಮೊಲದಂತೆ ಸುಮ್ಮನೇ ಆದ.

ಈ ಭೀಕರದ ದೃಶ್ಯವನ್ನು ಶಿವಯೋಗಿಗಳು ಕಣ್ಣಾರೆ ಕಂಡರು. ಜಂಗಮ ಪ್ರಾಣಿ ಅನ್ಯಾಯವಾಗಿ ಸಾಯುವುದನ್ನು ಅವರು ನೋಡಿ ಸಹಿಸಿಯಾರೇ? ಶಿವಯೋಗಿಗಳು ಜಂಗಮರ ಮೇಲೆ ಪಂಚಪ್ರಾಣಿಯಾಗಿದ್ದರು. ಅವರ ಆತ್ಮವೇ ಜಂಗಮಲಿಂಗವಾಗಿತ್ತು. ನೇರವಾಗಿ ಶ್ರೀಮಂತನನ್ನು ಕರೆದು ಸಾಲ ಎಷ್ಟಾಗಿದೆ ಹೇಳು ಎಂದರು.

ಶ್ರೀಮಂತನು ಸ್ವಾಮಿಗಳ ಬಳಿಗೆ ಬಂದು, ಅವರ ಪ್ರಚಂಡ ವೈರಾಗ್ಯ ತೇಜಕ್ಕೆ, ಪ್ರಖರ ಪ್ರಕಾಶಕ್ಕೆ, ಉಜ್ವಲ ಕಾಂತಿಗೆ ಬೆರಗಾಗಿ ಸಾಷ್ಟಾಂಗ ಪ್ರಣಾಮ ಹಾಕಿ ಹೇಳಿದ—

'ಬುದ್ಧೀ' ಈತನಿಗೆ ನಾನು ಕಾಗದ ಪತ್ರ ಮಾಡಿಸಿಕೊಳ್ಳದೇ ಎರಡು ನೂರು ರೂಪಾಯಿ ಸಾಲ ಕೊಟ್ಟೆ. ಅದರ ಬಡ್ಡಿ ಎರಡುನೂರು ಆಗಿದೆ. ಒಂದು ಪೈ ಸಹ ಈತ ಹಿಂದಿರುಗಿ ಕೊಟ್ಟಿಲ್ಲ. ಈಗ ಇಲ್ಲಿ ಓಡಿ ಬಂದಿದ್ದಾನೆ, ಕಾಪಾಡಬೇಕು.'

ಎಂದು ಪರಿಪರಿಯಾಗಿ ಬೇಡಿಕೊಂಡ. ಶಿವಯೋಗಿಗಳಿಗೆ ಪ್ರಾಣಸಂಕಟ ಕ್ಕಿಟ್ಟುಕೊಂಡಿತು. ಅವರೇ ನಿರ್ಧಾರವಾಗಿ ಹೇಳಿಬಿಟ್ಟರು—

'ನೋಡು! ಈತ ಬಡವ ನಿನ್ನ ಸಾಲ ಮುಟ್ಟಿಸಲಾರ. ನಾನೇ ಮುಟ್ಟಿಸುತ್ತೇನೆ. ಬಡ್ಡಿಯನ್ನು ಚಿತ್ತರಗಿಯ ಪೀಠಕ್ಕೆ ಅಸ್ತು ಅಂದುಬಿಡು. ಹೆಚ್ಚಿನ ಆಶೆ ಮಾಡಬೇಡ. ಮೂಲಧನ ನಿನಗೆ ಈಗಿಂದೀಗಲೇ ಕೊಟ್ಟು ಬಿಡುತ್ತೇನೆ'

ಎಂದು ತಕ್ಷಣವೇ ಎರಡುನೂರು 'ಸೂರ್ತಿ' ರೂಪಾಯಿಗಳನ್ನು ತರಿಸಿ ಅವನಿಗೆ ಎಣಿಸಿ ಕೊಟ್ಟುಬಿಟ್ಟರು! ಶ್ರೀಮಂತ ಅವರ ಅಪಾರ ಕರುಣಾ ಸಾಗರದೆದುರು ಪೆಕ್ಕಸ ಬೆರಗಾಗಿ, ಮಹಾ ಆನಂದದಿಂದ ದೀರ್ಘದಂಡ ಪ್ರಣಾಮವನ್ನು ಹಾಕಿಬಿಟ್ಟ. ಅಷ್ಟೇ ಅಲ್ಲ—

'ಬುದ್ಧಿ, ಈ ದಿನ ತಮ್ಮ ದರ್ಶನದಿಂದ ಉದ್ಧಾರನಾದೆ. ಸಾಲಗಾರ ನನ್ನು ಹುಡುಕಿಕೊಂಡು ಬಂದು ಶಿವನನ್ನೇ ಕಂಡಂತೆ ನನಗಾಯಿತು. ಇಂದು ನನ್ನ ಬಾಳು ಸಾರ್ಥಕವಾಯಿತು. ತಮ್ಮ ಮಠಕ್ಕೆ ಈ ಐವತ್ತು ರೂಪಾಯಿ ಗಳನ್ನು ನನ್ನ ಕಾಣಿಕೆಯಾಗಿ ಸಲ್ಲಲಿ ಸ್ವೀಕರಿಸಿರಿ. ಆಶೀರ್ವದಿಸಿರಿ'

—ಎಂದು ಆತ ಆ ಧನದಲ್ಲೇ ಐವತ್ತು ರೂಪಾಯಿಗಳನ್ನು ಎಣಿಸಿ ಶ್ರೀಗಳ ಪಾದದ ಮುಂದೆ ಇಟ್ಟನು.

ಸ್ವಾಮಿಗಳು ದುಡ್ಡನ್ನು ಹುಣಸೆಕಾಯಿ ಹುರಿದು ಆಡಿಸಿದಂತೆ ಆಡಿಸಿದ ಮಹಿಮರು. ಮಣ್ಣಿಗಿಂತ ಅದಕ್ಕೆ ಹೆಚ್ಚಿನ ಬೆಲೆ ಕೊಟ್ಟಿರಲಿಲ್ಲ. ಆ ಐವತ್ತು ರೂಪಾಯಿಗಳನ್ನು ನೇರವಾಗಿ ಬಡಜಂಗಮನನ್ನು ಕರೆದು ಆತನ ಉಡಿಯಲ್ಲಿ ಹಾಕಿಬಿಟ್ಟರು! ಆತನಿಗೆ ಮತ್ತೆ ಗದರಿಸುತ್ತ—

'ಹುಂ ಹೋಗಿನ್ನು, ನಿನ್ನ ಊರಿಗೆ ಹೋಗಿ ಹೆಂಡತಿ ಮಕ್ಕಳನ್ನು ಕಾಪಾಡು. ಹಾಗೆಲ್ಲಾ ಅವರನ್ನು ಬಿಟ್ಟುಬರಬಾರದು, ಹುಚ್ಚಪ್ಪಾ'

ಎಂದರು. ಆ ಬಡಜಂಗಮನಿಗ ಸಾಕ್ಷಾತ್ ಮೋಕ್ಷಸುಖವೇ ಮಹಾ ಶಿವಯೋಗಿಯ ಕರುಣಾಮಣಿಯಾಗಿ ತನ್ನ ಮೇಲೆ ಧುಮುಕುತ್ತಿದೆಯೆಂದು ಅನ್ನಿಸಿತು. ಸ್ವಾಮಿಗಳ ದಾಸೋಹದ ಪ್ರಸಾದ ಸೇವಿಸಿ, ಶ್ರೀಮಂತ ಹಾಗೂ ಬಡ ಜಂಗಮರಿಬ್ಬರೂ ಎಂದೂ ಜಗಳಾಡದ ಗೆಳೆಯರಂತೆ ಊರು ಸೇರಿದರು!

# ಮಂಗಲದ ತೆಂಗು

ಬಾಗಿಲುಕೋಟೆಯಲ್ಲಿ ಶಿವಯೋಗಿಗಳ ಪ್ರಸಾದವಾಣಿಯಿಂದಲೇ ಬಸವಪುರಾಣ ನಡೆದಿತ್ತು. "ಅಪ್ಪನವರ" ಜೀವನವನ್ನು ಶ್ರೀಗಳು ತಮ್ಮ ಅರುಹಿನ ಬೆಟ್ಟದಿಂದ ಅರಿತು ನುರಿತಂತೆ ಧಾರಾಳವಾಗಿ ಪ್ರವಚನ ನಡೆಸಿದರು. ಅನೇಕ ವಾರಗಳ ವರೆಗೆ ಈ ಪ್ರವಚನ ಕಾರ್ಯ ಮುಂದುವರೆಯಿತು. ಅವರ ವಾಣಿಯಲ್ಲಿ ಪಾಂಡಿತ್ಯದ ಗುದ್ದಾಟವಿರಲಿಲ್ಲ. ಅನುಭವದ ಹಾಲು ಹೊಳೆ ಉಕ್ಕುತ್ತಿತ್ತು.

ಓರ್ವ ಭಕ್ತ ಪ್ರತಿದಿನವೂ ಪ್ರವಚನದ ಮಂಗಲಕ್ಕೆ ಎಂದು ತೆಂಗನ್ನು ಒದಗಿಸುವ ಸತ್ಕಾರ್ಯವನ್ನು ಕೈಕೊಂಡಿದ್ದ. ಈ ನಿಯಮ ಅನೇಕ ದಿನಗಳ ವರೆಗೆ ಚಾಚೂ ತಪ್ಪದೆ ಸಾಗಿತು. ಒಂದುದಿನ ಆತ ದೂರದ ಹಳ್ಳಿಯೊಂದರಲ್ಲಿ ಇದ್ದ ಗಣಾರಾಧನೆಗೆ ಹೋಗಿದ್ದ, ವಾಹನ ಸೌಕರ್ಯಗಳು ತಪ್ಪಿಹೋದದ್ದರಿಂದ ಆತನಿಗೆ ಅಂದು ಸಕಾಲದಲ್ಲಿ ಮಠಕ್ಕೆ ಮರಳಿ ಬಂದು ತೆಂಗನ್ನು ಒದಗಿಸುವದು ಸಾಧ್ಯವಾಗಿರಲಿಲ್ಲ. ಇತ್ತ ಆ ದಿವಸ ಬಸವಪುರಾಣದ ಪ್ರವಚನದ ಕೊನೆಗೆ ಎಲ್ಲರೂ ಮಂಗಳಾರತಿ ಹಾಡಲು ಎದ್ದು ನಿಂತರು. ಆದರೆ ಮಂಗಲಕ್ಕೆ ತೆಂಗೇ ಇಲ್ಲ! ಎಲ್ಲರಲ್ಲಿ ಗುಜುಗುಜು ನಡೆಯಿತು. ಯಾರೊಬ್ಬರೂ ತೆಂಗು ತಂದಿರಲಿಲ್ಲ.

"ತೆಂಗಿನಕಾಯಿ ಬರಲಿಲ್ಲವೇ ? ಆ ಭಕ್ತ ಎಲ್ಲಿ ?" ಎಂದು ಶಿವಯೋಗಿಗಳು ಕೇಳಿದರು. ಎಲ್ಲರೂ ಬೆಪ್ಪನೆ ಕುಳಿತರು. ಶಿವಯೋಗಿಗಳಿಗೆ ಇದೊಂದು ಬಹಿರಂಗ ಪರೀಕ್ಷಾ ಕಾಲವೇ ಬಂದೊದಗಿತು. ಒಬ್ಬ ಭಕ್ತ ಮೆಲ್ಲನೇ ಹೇಳಿದ—

'ಬುದ್ಧೀ, ಇದೊಂದು ದಿವಸ ಹಾಗೇ ಮಂಗಲ ಮುಗಿಸಿದರಾಗದೇ ?' ಶಿವಯೋಗಿಗಳು ಹೇಳಿದರು—

'ಹುಚ್ಚಪ್ಪಾ ಅದು ಹೇಗೆ ? ಅಪ್ಪನವರ ವಚನಕ್ಕೆ ತೆಂಗು ಸಿಗುವದಿಲ್ಲವೆ ? ಹೋಗು ಅಲ್ಲಿ. ಆ ಮಾಡದಲ್ಲಿ ನೋಡು'

ಎಂದು ಬೆರಳು ಮಾಡಿ ತೋರಿಸಿದರು.

ಭಕ್ತ ಅಲ್ಲಿ ಹೋಗಿ ನೋಡುತ್ತಾನೆ; ದಷ್ಟಪುಷ್ಟವಾದ ದೊಡ್ಡ

ತೆಂಗೊಂದು ಮಹಲಕ್ಷ್ಮಿ ಕುಳಿತಂತೆ ಮಾಡದಲ್ಲಿ ಕುಳಿತಿದೆ! ಸಭಿಕರೆಲ್ಲ ತಬ್ಬಿಬ್ಬಾಗಿ ಹೋದರು. ಕಾರಣ ಅದು ದೂರದ ಮಾಡ ಆಗಿರಲಿಲ್ಲ. ಸಭೆಯು ಪಕ್ಕದ ಗೋಡೆಯಲ್ಲೇ ಇದ್ದ ಅದರಲ್ಲಿ ಅನೇಕ ಜನರು ಸ್ವಾಭಾವಿಕವಾಗಿ ದೃಷ್ಟಿ ಹಾಯಿಸಿದ್ದರು. ಆಗ ತೆಂಗು ಇರಲಿಲ್ಲ ! ಈಗ ತೆಂಗು ಇದೆ !! ಇದೇನು ವಿಚಿತ್ರವೆಂದು ಹೌಹಾರಿ ಹೋದರು.

ಒಬ್ಬ ಹಿರಿಯ ಭಕ್ತ—'ಗೌರಿಯನ್ನು ಬಯಸದ ಶಿವಯೋಗಿ ನಾರೀಕೇಳ ಕೊಟ್ಟ !' ಎಂದು ಉದ್ಗಾರ ತೆಗೆದ. ಆ ನಾರೀಕೇಳ ಫಲ ಶಿವಯೋಗಿಗಳ ತೆಂಗಿನ ಮರದಿಂದ ಈಗ ತಾನೇ ಇಳಿಸಿದಂತಿತ್ತು !

ಅಂದು ಮಂಗಲ ಮಾಡಿ ಎಲ್ಲರೂ ಆ ತೆಂಗಿನ ಪ್ರಸಾದ ಸ್ವೀಕರಿಸಿದರು. ಅದರ ಸಾಮರ್ಥ್ಯದಿಂದ ಅವರೆಲ್ಲರ ಭ್ರಾಂತಿ–ಚಿಂತೆ–ಸಂತಾಪ ಸಂಕಷ್ಟಗಳು ಪರಿಹಾರವಾದವು. ಶಿವಯೋಗಿ ಸಾಮಾನ್ಯನೇ ?

# ಕಾದೆಣ್ಣೆಯಲ್ಲಿಯೂ ಕರುಣೆ

ಇಲಕಲ್ಲಿನ ಚನ್ನಮಲ್ಲಮ್ಮ ಮಹಾಂತೇಶನಲ್ಲಿ ಅಪಾರ ನಿಷ್ಠೆ ಇರಿಸಿದ ಸುಂದರ ತರುಣಿ. ಬಾಲ ಮುತ್ತೈದೆ. ಅವಳ ನಂಬಿಕೆ ಎಲ್ಲರಂತಲ್ಲ. ಉಕ್ಕಾದರೂ ಬಾಗೀತು. ವಜ್ರವಾದರೂ ಪುಡಿಯಾದೀತು. ಆದರೆ ಅವಳ ಅಪಾರ ವಿಶ್ವಾಸ ಎಂದಿಗೂ ಅಳುಕದು. ಅಲ್ಲಾಡದು. ಅವಳ ತಾಯಿಯೂ ಚಿತ್ತರಗಿ ಪೀಠದ ಸಾಕುಮಗಳಂತೆ ಬೆಳೆದ್ದಳು ಯಾವ ಬಳ್ಳಿಯಿಂದ ಯಾವ ಫಲ ಬಿಡಬೇಕೊ ಅದೇ ಫಲ ಆಗಬೇಕಲ್ಲವೇ? ದ್ರಾಕ್ಷೆಯ ಬಳ್ಳಿಯಲ್ಲಿ ಎಂದಾದರೂ ಹಾಗಲಕಾಯಿ ಆದೀತೆ ?

ಹೀಗಿರಲು ಒಂದು ವಿಷಮ ಘಟನೆ ಬಾಲಿಕೆ-ಚನ್ನಮಲ್ಲಮ್ಮನ ಮೇಲೆ ಹೆಡೆಎತ್ತಿ ಬಂದಿತು. ಮನೆಯಲ್ಲಿಯ ಬಂಗಾರದ ದಾಗೀನುಗಳು ಕಳವಾದವು. ಅವಳ ದೊಡ್ಡವ್ವ ಕಳವಿನ ಆಪಾದನೆಯನ್ನು ಈ ಮುಗ್ಧ ಬಾಲಿಕೆಯ ಮೇಲೆಯೇ ಹೊರಿಸಬೇಕೆ? ಏನೂ ಅರಿಯದ ಈ ತವರು ಮನೆಯ ಕೂಸು ಗೋಳಾಡಿತು. ಗೋಗರೆಯಿತು. ಮಗಳ ಮೇಲೆ ಅನ್ಯಾಯವಾಗಿ ಹೇರಿದ ಅಪವಾದಕ್ಕೆ ತಾಯಿ ಬೇಗುದಿಗೊಂಡಳು— 'ನನ್ನ ಮಗಳು ಕಳ್ಳಿ ಅಲ್ಲ. ಆಕಳ ಕರು ಇದ್ದಂತೆ ಇವೆ. ಅವಳ ಮೇಲೆ ಅಪವಾದ ಹೊರಿಸಬೇಡಾ' ಎಂದು ಹೇಳಿದರು. ಆದರೆ ಆ ದೊಡ್ಡ ಹೆಣ್ಣು ಮಗಳು ಕೇಳಲೇ ಇಲ್ಲ. ರಂಭಾಟ ಎಬ್ಬಿಸಿದಳು. ನಾಲ್ಕು ಜನ ಕೂಡಿಸಿದಳು. ಬಂದವರ ಮುಂದೆ ಹೋದವರ ಮುಂದೆ ಛೀ ಹಳಿ ಹಾಕಿದಳು.

ಪ್ರಾಣಕ್ಕಿಂತಲೂ ಮರ್ಯಾದೆ ಹೆಚ್ಚಲ್ಲವೇ ? ' ವಿಜಯ ಮಹಾಂತೇಶ್ವರನ ಆಣೆಯಾಗಿಯೂ ನಾನು ಕದ್ದಿಲ್ಲ ದೊಡ್ಡವ್ವಾ ' ಎಂದು ಆಣೆ ಮಾಡಿ ಹೇಳಿದಳು. ಮಹಾ ಶಿವಯೋಗಿಯ ಆಣೆಯ ಬೆಲೆಯೂ ಅವಳ ದೊಡ್ಡವ್ವನಿಗೆ ತಿಳಿಯಲಿಲ್ಲ. ತನ್ನ ಪಂಥವನ್ನೇ ಹಟಕ್ಕೇ ಹಚ್ಚಿ ನೆರೆದ ಮಂದಿಯಲ್ಲಿ ಬಾಲಿಕೆಯ ಮೇಲೆ ಹರಿಹಾಯ್ದು ಹೇಳಿದಳು—

'ಏ ಕಳ್ಳೀ, ನಿನ್ನ ಹುಳುಕು ಮುಚ್ಚುವ ಸಲುವಾಗಿ ಆಣೀ ಇಡತೀಯಾ? ಆಣಿಗೀಣಿ ನನಗ ನಂಬಿಕೆ ಇಲ್ಲ. ನೀ ಖರೇ ಸಂಭಾವಿತ ಸಂಬಾರಗಿಣಿ ಆದದ್ದೇ ನಿಜವಾಗಿದ್ದರೆ ಕಾದ ಎಣ್ಣೆಯಲ್ಲಿಯ ದುಡ್ಡು ಕೈಯಿಟ್ಟು ತೆಗೆದುಕೊಡು,

ಅದು ಸುಟ್ಟರೆ ನೀ ಕಳ್ಳಿ. ಸುಡದಿದ್ದರೆ ನಾ ಕಳ್ಳಿ ಆತs? ಮಹಾಶರಣಮ್ಮನ ಗತಿ ಆಣೇ ಇಡತೀದಿ. ತೋರಿಸು ನಿನ್ನ ತಾರೀಫಾ.'

ಎಂದಳು. ಈ ಮಾತಿಗೆ ಆ ಮುಗ್ಧ ಬಾಲಿಕೆ ತಕ್ಷಣವೇ ಒಪ್ಪಿದಳು ಕೂಡಿದ ಜನ ಬೇಡವೆಂದು ಹೇಳಿದರು. ಆ ಬಾಲಿಕೆಯ ತಾಯಿಯೇ ಧೀರ ಶಾಲಿನಿಯಾಗಿ ಉತ್ತರಕೊಟ್ಟಳು–

'ಅಂಜಬೇಡಿರಿ. ವಿಜಯ ಮಹಾಂತೇಶ್ವರನ ಆಣೆಗಿಂತ ಕಾದ ಎಣ್ಣೆ ದೊಡ್ಡದೇ? ನಮ್ಮ ಪಡದಪ್ಪ ಎಷ್ಟು ದೊಡ್ಡವ ಆಸ್ನೊದು ಇಲ್ಲೇ ಒರೆ ಗಲ್ಲಿಗೆ ಹತ್ತಲಿ' ಎಂದಳು. ಅವಳ ಅಪಾರವಾದ ನಂಬಿಕೆಯನ್ನು ಕಂಡು ಜನ ತಬ್ಬಿಬ್ಬಾದರು.

ಆಗಲೇ ಪರೀಕ್ಷೆ ಸುರುವಾಯಿತು. ಕಡಾವಿಯೊಂದರಲ್ಲಿ ಎಣ್ಣೆಯನ್ನು ಸುರುವಿ ಚನ್ನಾಗಿ ಖಳಖಳಾ ಎನ್ನುವಂತೆ ಕುದಿಸಿದರು. ಒಂದು ರಾಣಿದುಡ್ಡು ಅದರಲ್ಲಿ ಎಸೆದರು. ದೊಡ್ಡವ್ವ ಎಣ್ಣೆ ಸರಿಯಾಗಿ ಕಾದಿದೆಯೋ ಪರೀಕ್ಷಿಸಲು ದೂರದಿಂದ ಎರಡು ಹನಿ ನೀರು ಕಡಾವಿಯಲ್ಲಿ ಉಗ್ಗಿದಳು. ಒಮ್ಮೆಲೇ ಭಗ್ಗೆಂದು ಉರಿ ಎದ್ದಿತು.

ತಾಯಿ ಮಗಳಿಗೆ ಸ್ನಾನ ಮಾಡಿಸಿ ಮಡಿಯಾದ ಸೀರೆ ಉಡಿಸಿದಳು. ಹಣೆಯಲ್ಲಿ ಹರನನ್ನು ನೆನೆಸಿ ಭಸ್ಮ ಹಚ್ಚಿದಳು. ಉರಿಯುತ್ತಿರುವ ಅಗ್ನಿಯ ಮುಂದೆ ಸೆರಗು ಹಾಸಿ ವಂದಿಸಿ ಒಕ್ಕೊರಲಿನಿಂದ ಬೇಡಿಕೊಂಡಳು–

'ಮಹಾಂತೇಶಾ ನೀನು ಸತ್ಯವಂತ. ನಮ್ಮನ್ನು ಸಲುಹಿದ ತಂದೆ ನೀನೆ. ತಾಯಿ ನೀನೆ. ಆಪದ್ಬಂಧು ನೀನೆ. ನಿನ್ನ ಆಣೆಗಿಂತ ಈ ಕುದಿಯುವ ಎಣ್ಣೆ ದೊಡ್ಡದೇ ? ನನ್ನ ಮಗಳು ಅಪರಾಧಿನಿ ಇದ್ದರೆ ಸುಟ್ಟು ನೀರು ಕುಡಿ. ಇಲ್ಲದಿದ್ದರೆ ಎತ್ತಿ ಮುದ್ದಿಟ್ಟು ಸಲಹು ತಂದೆ........'.

ಆ ಮುಗ್ಧ ಮಗಳಲ್ಲಿ ಅದೆಂಥ ಅಪಾರ ವಿಶ್ವಾಸ ! ಕಲ್ಲೆದೆಯವರು ಕದಲಿ ಹೋದರು. ಎದೆವಂತರೂ ನಡುಗಿಬಿಟ್ಟರು. ಆದರೆ ಅವಳ ಅಪಾರ ನಂಬಿಕೆ ಅಚ್ಚಳಿಯದೆ ಬೆಳಗಿತು. ವಿಜಯ ಮಹಾಂತೇಶನನ್ನು ಅಂತಃಕರಣದಲ್ಲಿ ಕರೆದಳು. ತನ್ನನ್ನು ಆವರಿಸಿದ ಅಪವಾದವನ್ನು ಕಳೆಯೆಂದು ಅಂಗಲಾಚಿ ಬೇಡಿದಳು. ಕಣ್ಣೀರಿನಿಂದ ಆತ್ಮದಲ್ಲಿ ಆತನ ಪಾದಪೂಜೆ ಮಾಡಿದಳು.

ನಂಬಿ ಕರೆದಡೆ ಓ ಎನ್ನನೇ ಶಿವನು ? 'ಜಯ ಜಯ ಮಹಾಂತೇಶಾ....

........ಹರಹರ ಮಹಾಂತೇಶಾ........ ಶಿವಶಿವಾ ಮಹಾಂತೇಶಾ...........' ಎಂದು ಕುದಿಯುತ್ತಿರುವ ಕಾದೆಣ್ಣೆಯಲ್ಲಿ, ಕಮಲದಂತಹ ಕೋಮಲ ಕೈ ಎದ್ದಿ. ದುಡ್ಡನ್ನು ಹೊರತೆಗೆದು ದೊಡ್ಡವ್ವನ ಮುಖದ ಮೇಲೆ ಬೀಸಿ ಒಗೆದಳು ! ಇವಳ ಕೈಗೆ ಏನೂ ಆಗಲಿಲ್ಲ. ಕಾದೆಣ್ಣೆಯಲ್ಲಿ ಅದ್ದಿ ತೆಗೆದರೂ ಸಂಪಿಗೆಯಂತೆ ಸುಂದರ! ಸೇವಂತಿಗೆಯಂತೆ ಶುಭ್ರ !! ಅಪಾರವಾದ ದೈವೀ ಕಳೆಯಿಂದ ಶೋಭಿಸಿತು. ಇವಳು ಚೆಲ್ಲಿದ ದುಡ್ಡು ದೊಡ್ಡವ್ವನ ಮುಖದ ಮೇಲೆ ಗಟ್ಟಿಯಾಗಿ ಹತ್ತಿಕೊಳ್ಳಬೇಕೆ ? ಕ್ಷಣದಲ್ಲಿ ಅವಳ ಮುಖದ ಮೇಲೆ ಪಾಪದ ಪತಾಕೆಯಂತೆ, ದೊಡ್ಡಗುಳ್ಳೆಯೊಂದು ಕಾಣಿಸಿಕೊಂಡಿತು. ನೆರೆದ ಮಂದಿ ಈ ಬಾಲಿಕೆಗೆ ಕೈ ಬಾಗಿ–ತಲೆ ಬಾಗಿ–ಎದೆ ಬಾಗಿ ವಂದಿಸಿದರು. ಅನೇಕ ಹೆಣ್ಣು ಮಕ್ಕಳು ಅವಳ ದೊಡ್ಡವ್ವನನ್ನು ವಾರಿಗಣ್ಣಿಲೆ ಸೆರಗಿನಲ್ಲೇ ಲಟಗಿ ಮುರಿದು ಹೋದರು. ಇನ್ನು ಕೆಲವರು ಅವಳಿಗೆ ಕೇಳುವಂತೆಯೇ "ಈ ಮುದಿಗೂಬೆಗೆ ಈಗ ಮಾಂತೇಶಾ ಬುದ್ಧಿ ಕಲಿಸಿದಾ" ಎಂದು ಹೇಳುತ್ತ ಹೋದರು.

ಅತ್ತ ಮಠದಲ್ಲಿ ವಿಜಯಮಹಾಂತಯೋಗಿಗಳು ಇಡೀ ಸಮಯದಲ್ಲಿ ಲಿಂಗಪೂಜೆಯಲ್ಲಿ ಮಗ್ನರಾಗಿದ್ದರು. ಈ ಬಾಲಿಕೆಯ ಪ್ರಾರ್ಥನೆ ಅವರಿಗೆ ಶಿವ ಯೋಗದಲ್ಲೇ ಕೇಳಿತೆಂದು ತೋರುತ್ತದೆ. ಇವಳು ಕಾದೆಣ್ಣೆಯಲ್ಲಿ ಕೈಯದ್ದಿ ವಿಕೆ ಲಿಂಗ ಮಧ್ಯದಲ್ಲಿ ಕಡಿತೆಂದು ಕಾಣುತ್ತದೆ. ಅಲ್ಲಿಂದಲೇ ಹರಿಸಿ ರಕ್ಷಿಸಿದರು. ಅವರ ಆತ್ಮದ ಶೀತಲ ಸಿಂಧೂನದಿ, ಹಿಮಾಲಯದ ಹಿಮವಾಗಿ ಆ ಎಣ್ಣೆ ಯಲ್ಲಿ ಆಗಲೇ ಸೇರಿ ಬಿಟ್ಟಿತ್ತು!

ದಿವ್ಯ ಜ್ಞಾನದಿಂದ ಎಲ್ಲವನ್ನು ಕಂಡುಕೊಂಡ ಶಿವಯೋಗಿಗಳು ಪೂಜಾ ನಂತರ, ತ್ವರಿತವಾಗಿ ಆ ಭಕ್ತಳ ಮನೆಗೆ ಬಂದು ಬಿಟ್ಟರು. ಭಕ್ತಕಾಯ ಮಮಕಾಯರಾದ. ಮಹಾಭಕ್ತವತ್ಸಲರಾದ ಅವರಿಗೆ ಮಠದಲ್ಲೇ ಸುಮ್ಮನೆ ನಿಲ್ಲಲಾದೀತೇ ? ಬಂದವರೇ "ಚನ್ನವ್ವನನ್ನು ಕರೆಯಿರಿ" ಎಂದರು. ಅವಳು ಭಕ್ತಿಯಿಂದ ಬಂದುವಂದಿಸಿ. ಬಾಳೆಯ ಗೊನೆ ಬಾಗಿ ನಿಂತಂತೆ ನಿಂದಳು. ಶಿವಯೋಗಿಗಳು ಆ ಬಾಲ ಮುತ್ತೈದೆಗೆ ಹರುಷದಿಂದ ಹೇಳಿದರು—

"ಅಮ್ಮಾ ನೀನು ಶಿಶುರೂಪದ ಪಾರ್ವತಾದೇವಿ. ನಿನ್ನ ಸಂಸಾರ ಸುಖವಾಗಲಿ, ನಿನ್ನ ಮಗಳನ್ನು ವರ್ಷ ತುಂಬುವ ಒಳಗೆ ಮಠಕ್ಕೆ ತಾ"ಎಂದರು.

ಶಿವಯೋಗಿಯ ಹರಕೆ ಸುಳ್ಳಾದೀತೆ? ಬಾಲ ಮುತ್ತೈದೆ ಬೆಳೆದ ಐದೆ ಆದಳು. ಒಂದು ವರ್ಷ ಕಳೆಯಲಿಲ್ಲ. ಗಂಡನೊಂದಿಗೆ ಮಗಳನ್ನು ಹೊತ್ತು ಕೊಂಡು ಬಂದು, ಮಠದಲ್ಲಿ ಪೂಜಾಭಿಷೇಕ ಮಾಡಿಸಿದಳು! ಶ್ರೀಗಳಿಂದ ಶುಭಾಶೀರ್ವಾದ ಹೊಂದಿದಳು.

# ಸತ್ಯದ ದಿಗ್ವಿಜಯ

ವಿಜಯ ಮಹಾಂತ ಶಿವಯೋಗಿಗಳ ಬಹುವಿಧ ವ್ಯಕ್ತಿತ್ವವನ್ನು ಅಳತೆ ಮಾಡಿ ಹೇಳುವದು ಸಾಧ್ಯವೇ ಇಲ್ಲ. ಅವರು ಅಲ್ಲಮ ಪ್ರಭುವಿನಂತೆ ಅನುಭಾವ ಯೋಗಿಗಳೂ ಅಹುದು. ಚನ್ನಬಸವಣ್ಣನಂತೆ ಜ್ಞಾನಯೋಗಿಗಳೂ ಅಹುದು. ಸಿದ್ಧರಾಮನಂತೆ ಕರ್ಮಯೋಗಿಗಳೂ ಅಹುದು. ಜೊತೆಗೆ ಬಸವಣ್ಣ-ಅಕ್ಕಮಹಾದೇವಿಯರಂತೆ ಭಕ್ತಿಯೋಗಿಗಳೂ ಆಗಿದ್ದರು. ಅವರ ವ್ಯಕ್ತಿತ್ವದ ವ್ಯಾಖ್ಯೆ ಇಷ್ಟಕ್ಕೇ ಮುಗಿಯಲಿಲ್ಲ. ಅಲ್ಲಿ ಕರುಣೆಯ ಸಾಗರವಿದೆ. ಸಿದ್ಧಿಯ ಸೂರೆ ಇದೆ. ಅನುಗ್ರಹದ ಆಸರೆ ಇದೆ.

ಹತ್ತು ಸುಳ್ಳು ಹೇಳಿ ಒಂದು ಕವಡಿ ಉಳಿಸುವ ಜನರೇ ಬಹಳ! ಯೋಗಿಗಳಿಗೆ ಕೂಡ ಸುಳ್ಳು ಕಲ್ಲುಸಕ್ಕರೆಯಂತೆ ಬೆನ್ನು ಹತ್ತಿರುತ್ತದೆಯಂತೆ !!

ಒಂದು ಸಲ ಕುತೂಹಲಕಾರಿಯಾದ ಘಟನೆಯೊಂದು ಜರುಗಿತು. ಶ್ರೀಗಳು ಇಲಕಲ್ಲ ಮಠದ ಕಟ್ಟಡದ ರಚನೆಯಲ್ಲಿ ಭರದಿಂದ ತೊಡಗಿದ್ದರು. ಆಗ ಕಂಬ-ತೊಲೆಗಳಿಗಾಗಿ ಕಟ್ಟಿಗೆ ಬೇಕಾಯಿತು. ಪ್ರತಿಯೊಂದಕ್ಕೂ ಭಕ್ತರಿಗೆ ಬಾಯಿ ಬಿಡುವದು ಅವರಿಂದ ಆಗದ ಮಾತು. ಅವರು ಬೇಡುವವರಾಗಿರಲಿಲ್ಲ. ನೀಡುವವರಾಗಿದ್ದರು. ತಮ್ಮ ಮಠದ ಹೊಲದೊಳಗೆ ತೆಂಗಿನಂತೆ ಬೆಳೆದ ಎರಡು ಬೇವಿನ ಮರಗಳು ಇರುವದು ಅವರಿಗೆ ನೆನಪಾಯಿತು. ಆ ಗಿಡ ಕಡಿದು ತರಲು ಕೆಲ ಆಳುಗಳನ್ನು ಕಳಿಸಿದರು.

ಆಳುಗಳೆಂದರೆ ಕೇಳಬೇಕೆ? ಪೂರ್ವಕ್ಕೆ ಹೋಗೆಂದರೆ ಪಶ್ಚಿಮಕ್ಕೆ ಹೋಗಿ ನೇರವಾಗಿ ಅವರು ಶ್ರೀಗಳು ಹೇಳಿದ ಗಿಡಗಳನ್ನು ಬಿಟ್ಟು ಐದಾರು ಸರಕಾರಿ ಮರಗಳನ್ನೇ ಬೊಡ್ಡೆ ಸಹಿತ ಕಡಿದು ಉರುಳಿಸಿಬಿಟ್ಟರು.

ಮತ್ತೇನು ಕೇಳುವದು ? ಸುದ್ದಿ ನೇರವಾಗಿ ಮಾಮಲೇದಾರರಿಗೆ ತಲುಪಿತು. ಮಾಮಲೇದಾರ ಇದ್ದಲ್ಲಿಂದಲೇ ಟೇಬಲ್ ಗುದ್ದಿ ಒದರಾಡಿದ. 'ಯಾರವನು ಸರಕಾರಿ ಗಿಡಗಳನ್ನು ನನ್ನ ಹುಕುಂ ಇಲ್ಲದೇ ಕಡಿಸಿದವನು? ಎಳೆದು ತನ್ನಿರಿ' ಎಂದು ಆರ್ಡರ ಮಾಡಿಬಿಟ್ಟ. ಸುದ್ದಿ ತಿಳಿದು ಇಲಕಲ್ಲ ಊರಿನ ಭಕ್ತರೆಲ್ಲ ಕೈಬಾಯಿ ಬಡಿದುಕೊಳ್ಳುತ್ತ ಮಾಮಲೇದಾರರ ಬಳಿಗೆ ಹೋದರು. ಪರಿಪರಿಯಾಗಿ ಬೇಡಿದರು. ಸ್ವಾಮಿಗಳಿಗೆ ಸಾಮಾನ್ಯರಂತೆ

ಮಾಡಬೇಡಿರೆಂದು ಪ್ರಾರ್ಥಿಸಿದರು. ಎಲ್ಲಿ ಏನು ಮಾಡುವನೋ ಎಂದು ಎಲ್ಲರೂ ನಡುಗಿ ಹೋದರು. ಇವರ ನಡುಕ ನಿಜವೇ ಆಯಿತು. ಆತ ಕಾಯದೇಶೀರ ಏನು ಮಾಡಬೇಕೊ ಅದನ್ನೇ ಮಾಡಲು ಸಿದ್ಧನಾದ.

ಇಲಕಲ್ಲ ಭಕ್ತರಿಗೆ ಪ್ರಾಣಸಂಕಟ ಬಂತು. ತಮ್ಮ ಮಠದ ಸ್ವಾಮಿಗಳು ಬಂದೀಖಾನೆ ಸೇರಬೇಕೆ? ಸರ್ವಥಾ ಸಾಧ್ಯವಿಲ್ಲ. ಪ್ರಾಣಹೋದರೂ ಸರಿಯೇ ಎಂದು ಸಿದ್ಧರಾದರು. ಮಾಂತಪ್ಪ ಎಂಬ ಒಬ್ಬ ಹೆಸರಿನ ಇಲಕಲ್ಲ ಭಕ್ತನನ್ನು ಈ ಕೆಲಸಕ್ಕೆ ಸಿದ್ಧಮಾಡಿದರು. ಆತ ಮಾಮಲೇದಾರರಿಗೆ ಭೆಟ್ಟಿಯಾಗಿ 'ಸಾಹೇಬರೇ, ಆ ಗಿಡಗಳನ್ನು ನಾನೇ ಕಳ್ಳತನದಿಂದ ಕಡಿಸಿದ್ದೇನೆ' ಎಂದು ಹೇಳಿಬಿಟ್ಟ. ಮಾಮಲೇದಾರರು ಹಿಂದು ಮುಂದು ನೋಡದೆ ಅವನನ್ನು ವಿಚಾರಣೆಗೆ ಗುರಿಮಾಡಿ ಬಂದೀಖಾನೆಗೆ ಹಾಕಿಸಿಬಿಟ್ಟರು.

ಸುದ್ದಿ ವಿಜಯ ಮಹಾಂತ ಶಿವಯೋಗಿಗಳಿಗೆ ತಲುಪಿತು. ಸುಳ್ಳಿನ ಮಂಚದ ಮೇಲೆ ಮಲಗುವ ಶಿವಯೋಗಿ ಅವರಲ್ಲ. ಸತ್ಯ ಕರಗಸದಂತೆ ಕೊಯ್ದರೂ ಅದೇ ಆನಂದಕರ ಎಂದು ಬಗೆದ ಮಹಾತ್ಮರಲ್ಲವೇ ಅವರು? ನೇರವಾಗಿ ತಾವೇ ಮಾಮಲೇದಾರರ ಕಛೇರಿಗೆ ಹೋದರು. ಮೊದಲು ಇವರನ್ನು ಏನೋ ಒಬ್ಬ ಸಾಮಾನ್ಯ ಸ್ವಾಮಿ ಎಂದು ತಿಳಿದಿದ್ದ ಆ ಅಧಿಕಾರಿ, ಈಗ ಇವರನ್ನು ಕಂಡು ತಬ್ಬಿಬ್ಬಾಗಿ ಹೋದ. ಧಕ್ಕನೇ ಕುರ್ಚಿಯಿಂದೆದ್ದು ವಂದಿಸಿದ. ಸ್ವಾಗತಿಸಿದ. ಶಿವಯೋಗಿಗಳ ಮುಖದಲ್ಲಿ ಅವನಿಗೆ ಸ್ವರ್ಗ-ಮರ್ತ್ಯ-ಪಾತಾಳ ಲೋಕಗಳೆಲ್ಲವೂ ಕಂಡಂತಾದವು. ಎರಡು ಕಾಲಿನ ಮೇಲೆ ನಿಲ್ಲುವದೇ ಅವನಿಗೆ ಅಸಾಧ್ಯವಾಯಿತು. ಅವು ಥರಥರ ನಡುಗಹತ್ತಿದವು. ಪ್ರಚಂಡ ಯೋಗಬಲದ ಮುಂದೆ ಅಧಿಕಾರ ಬಲ ನಿಲ್ಲಬಲ್ಲುದೆ?

ಶಿವಯೋಗಿಗಳು ಹೇಳಿದರು—

'ಮಾಮಲೇದಾರರೇ, ನೀವು ಗಿಡಕಡಿದ ಪ್ರಕರಣದಲ್ಲಿ ಮಾಂತಪ್ಪ ಎಂಬ ನಿರಪರಾಧಿಯನ್ನು ಬಂಧಿಸಿದ್ದೀರಿ. ಅದು ತಪ್ಪು. ಶಿಕ್ಷೆ ಅಪರಾಧಿಗೇ ಸಲ್ಲಬೇಕು. ಮರಕಡಿಸಿದ ಅಪರಾಧಿ ನಾನು. ಶಿಕ್ಷೆ ಅವನಿಗೇಕೆ? ಮೊದಲು ಅವನನ್ನು ಬಿಡಿರಿ. ಮತ್ತು ನನಗೆ ಯಾವ ಶಿಕ್ಷೆ ಸಲ್ಲಬೇಕೋ ನೀಡಿರಿ' ಎಂದರು.

ಮಾಮಲೇದಾರ ತೋಬೋ ತೋಬೋ ಎಂದು ತೊಗರಿ ಹುರಿದಂತೆ ತೊಳಲಾಡಿದ. ಶ್ರೀಗಳಿಗೆ ಸಾಷ್ಟಾಂಗ ಹಾಕಿದ. ಬಂಧಿಸಿದ ಮಾಂತಪ್ಪನನ್ನೂ ಬಿಟ್ಟ! ಕ್ಷಮಾಪಣೆ ಕೇಳಿಕೊಂಡು ಕಳಿಸಿಕೊಟ್ಟ!!

ಇದು ಸತ್ಯದ ದಿಗ್ವಿಜಯವಲ್ಲವೇ ? ಸತ್ಯಸಾಕ್ಷಾತ್ಕಾರಕ್ಕೆ ಇದಕ್ಕಿಂತ ಇನ್ನೆಂಥ ನಿದರ್ಶನ ಬೇಕು ? ಶ್ರೀಗಳ ಸಾವಿರ ಮುಖಗಳಲ್ಲಿ ಇದು ಒಂದು ಮುಖ. ಅವರ ವ್ಯಕ್ತಿತ್ವ ಇನ್ನೂ ಅಗಾಧವಾಗಿದೆ, ಇನ್ನೂ ಆಳವಾಗಿದೆ. ಅಗಿದಷ್ಟೂ ಆಳ. ಸುಲಿದಷ್ಟೂ ಸುಂದರ. ಅವರ ಅಂತ್ಯವಿಲ್ಲದ ಮಹಾಂತರಲ್ಲವೇ ?

# ಘನಮಠರಿಗೆ ದರ್ಶನ

ವೈರಾಗ್ಯದ ಬಳಿಗೆ ವೈರಾಗ್ಯ ಬಂದಂತೆ. ಕೈವಲ್ಯದ ಬಳಿಗೆ ಕೈವಲ್ಯ ಬಂದಂತೆ, ಪರಂಜ್ಯೋತಿಯ ಬಳಿಗೆ ಪರಂಜ್ಯೋತಿ ಬಂದಂತೆ. ಘನಮಠ ಶಿವಯೋಗಿಗಳು ಚಿತ್ತರಗಿಯಲ್ಲಿ ವಿಜಯ ಮಹಾಂತ ಶಿವಯೋಗಿಗಳ ಮಠಕ್ಕೆ ದಯಮಾಡಿಸಿದರು. ಚಂದ್ರ ಚಂದ್ರನನ್ನು ಕೂಡಿದಂತಾಯಿತು! ಸೂರ್ಯ ಸೂರ್ಯನನ್ನು ಸೇರಿದಂತಾಯಿತು.

ವಿಜಯಮಹಾಂತ ಶಿವಯೋಗಿಗಳಂತೆ ಅವರೂ ನಿಷ್ಠುರ ನಿಯಮದ ಕಟ್ಟಾಳುಗಳು. ನಾಡುನಾಡಿನಲ್ಲಿ ಶಿವತತ್ವವನ್ನು ಬೋಧಿಸುತ್ತ ಕಾಳಿನ ಭಿಕ್ಷೆ ಪಡೆಯುತ್ತಿದ್ದರು. ಅದೇ ಕಾಳನ್ನು ಕಲ್ಲಿನ ಗುಂಡಿನಿಂದ ಅರಿದು ದಪ್ಪರೊಟ್ಟಿ ತಯಾರಿಸುತ್ತಿದ್ದರು. ಆ ರೊಟ್ಟಿಯನ್ನು ಒಲೆಯ ಕೆಂಡದ ಮೇಲೆಯೇ ಸುಟ್ಟು, ಅದಕ್ಕೆ 'ಬಸವನರೊಟ್ಟಿ'ಯೆಂದು ಹೆಸರಿಟ್ಟು, ಖಾರ-ಹುಳಿ-ಉಪ್ಪು ಬಯಸದೆ ಶಾಕ-ಪಾಕಗಳನ್ನು ಬೇಡದೇ ಹಾಗೆಯೇ ಸೇವಿಸುತ್ತಿದ್ದರು. ಜಂಗಮ ಪ್ರಾಣಿಗಳಾಗಿ, ಭಕ್ತ ದಯಾಘನರಾಗಿ ಮೆರೆಯುತ್ತಿದ್ದರು, ಇವರು ಅನೇಕ ವೈರಾಗ್ಯದ ಗೀತೆಗಳು ಬರೆದು ಕನ್ನಡ ನಾಡಿನಲ್ಲಿ ತೂರಿದರು. ಅನುಭಾವಿ ಕವಿಗಳಾಗಿದ್ದರು. ಅವರ ಹಾಡುಗಳು ಕೇಳದ ಭಕ್ತರಿಲ್ಲ, ಮನಮುಟ್ಟಿ ಹಾಡದ ಭಾವುಕರಿಲ್ಲ.

ಚಿತ್ತರಗಿಯ ಮಠದಲ್ಲಿ ಘನಮಠದಾರ್ಯರು ಬಸವ ಪುರಾಣವನ್ನು ವಿಜಯ ಮಹಾಂತ ಶಿವಯೋಗಿಗಳ ಸನ್ನಿಧಿಯಲ್ಲಿ ಭಕ್ತಿಯುಕ್ತಿ ಹೇಳತೊಡಗಿದರು. ಅನೇಕ ನಗರ ಗ್ರಾಮಗಳನ್ನು ಅವರು ಸುತ್ತಾಡಿ, ಪುರಾಣ ಪ್ರವಚನ ಮಾಡಿದ್ದರೂ, ಇಲ್ಲಿಯಂತೆ ಅಗಾಧ ಉತ್ಸಾಹದಿಂದ ಎಲ್ಲಿಯೂ ಹೇಳಿರಲಿಲ್ಲ. ಜನ ಕಿಕ್ಕಿರಿದು ಸೇರಹತ್ತಿತು. ಸುತ್ತಮುತ್ತಲಿನ ನೂರಾರು ಗ್ರಾಮಗಳ ಸದ್ಭಕ್ತರು ಕೂಡಹತ್ತಿದರು. ಪುರಾಣ ಮಂಗಲವಂತೂ ಸಹಸ್ರಗಣಾರಾಧನೆಯಿಂದ ಮಹಾಪ್ರಸ್ಥದಿಂದ ಭಾರೀ ವೈಭವಶಾಲಿಯಾಗಿ ಮುಕ್ತಾಯವಾಯಿತು.

ಘನಮಠದಾರ್ಯರು ಬಸವ ಪುರಾಣ ಹೇಳಿದ ನೆನಪಿನ ಕುರುಹಾಗಿ ಉಳಿಯಲೆಂದು ಚಿತ್ತರಗಿಯ ಭಕ್ತರು ಮಠದ ಎದುರಿನ ಬೇವಿನ ಮರದ ತುಟ್ಟತುದಿಗೆ ಭಾರೀ ಗಾತ್ರದ ನಂದಿ ಧ್ವಜವನ್ನು ಕಟ್ಟಿದರು. ಅದು ಅಪ್ಪಗಳ ಅಮೃತವಾಣಿಯನ್ನು ಆಕಾಶಕ್ಕೂ ಹೇಳುತ್ತ ಹಾರಾಡುತ್ತಿದೆಯೆಂಬಂತೆ ವಿಜಯ ಮಹಾಂತ ಶಿವಯೋಗಿಗಳಿಗೆ ಭಾಸವಾಯಿತು.

# ನೀನೊಲಿದರೆ ಕೊರಡು ಕೊನರುವುದಯ್ಯ

ಚಿತ್ತರಗಿ ಮಠದ ಬೀಳು ಭಾಗಗಳನ್ನು ಜೀರ್ಣೋದ್ಧಾರಗೊಳಿಸಲು ವಿಜಯ ಮಹಾಂತ ಶಿವಯೋಗಿಗಳು ಅನುವಾದರು. ಆ ಕಾರ್ಯಕ್ಕೆ ಕಟ್ಟಿಗೆಯ ಅಭಾವ ಬಹಳಾದುದರಿಂದ ಆ ಬೇವಿನ ಮರವನ್ನು ಕಡಿಯಲು ಭಕ್ತರಿಗೆ ಅಪ್ಪಣೆ ಕೊಟ್ಟರು. ಚಿತ್ತರಗಿ ಪುರ ಭಕ್ತರಿಗೆ ಪರಿಹರಿಸಲಸಾಧ್ಯವಾದ ಸಂಕಟ. ತುಂಬಿದ ಕಳವಳದಿಂದ, ಎದೆ ಇಲ್ಲದ ಧೈರ್ಯದಿಂದ ಶಿವಯೋಗಿಗಳ ಬಳಿಗೆ ಬಂದು ಮೆಲ್ಲನೆ ಅರಿಕೆ ಮಾಡಿದರು—

'ಬುದ್ಧೀ....ತಾವು ಬೇವಿನ ಮರ ಕಡಿಯಲು ಅಪ್ಪಣೆಕೊಟ್ಟಿರಿ. ಅದರ ಮೇಲೆ ಘನಮಠದಾರ್ಯರು ಬಸವ ಪುರಾಣ ಹೇಳಿದ ನಂದಿಧ್ವಜ ಕಟ್ಟಲಾಗಿದೆ.' ಅದು ಇನ್ನೂ ಹಾರಾಡುತ್ತಿದೆ. ಅದನ್ನು ಹೇಗೆ ಕಡಿಸುವದು? ಅಮಂಗಲವಲ್ಲವೇ?' ಎಂದರು.

ಸ್ವಾಮಿಗಳು— 'ಅದಕ್ಕೇನಾಗುತ್ತದೆ. ಸುಮ್ಮನೆ ಕಡಿಯಬಿಡಿರಿ. ಬೇಕಾದರೆ ಆ ಧ್ವಜವನ್ನು ಮಠದ ಮಗ್ಗುಲಿಗಿದ್ದ ಬೇವಿನಮರಕ್ಕೆ ಕಟ್ಟಿರಿ' ಎಂದು ಅಪ್ಪಣೆ ಕೊಟ್ಟರು. ಭಕ್ತರು ಮತ್ತೂ ದಂಗಾದರು. ಅಂಜುತ್ತಲೇ ಹೇಳಿದರು—

'ಅಪ್ಪನವರೆ, ಮಠದ ಮಗ್ಗುಲಿನ ಬೇವಿನ ಗಿಡ ತಿಪ್ಪೆಯ ಮಧ್ಯದಲ್ಲಿ ಇದೆ. ಅಂಥ ಜಾಗೆಯಲ್ಲಿ ನಂದಿಧ್ವಜ ಹೇಗೆ ಒಯ್ಯುವದು? ಅಲ್ಲದೆ ಆ ಬೇವಿನಮರ ಹೋದ ವರ್ಷವೆ ಒಣಗಿ ಮೋಟುಮರವಾಗಿ ನಿಂತಿದೆ. ಒಣಗಿದ ಗಿಡಕ್ಕೆ ಕಟ್ಟಿದರೆ ಅವಮರ್ಯಾದೆಯಲ್ಲವೆ?'

ಸ್ವಾಮಿಗಳು ಒಂದೊಂದು ಸಲ ಹಿಡಿದ ಪಟ್ಟು ಬಿಡುವವರಲ್ಲ. ಅವರ ಜೀವನದಲ್ಲಿ ಎಂದಿಗೂ ಒಂದು ಮಾತು ಮೊದಲು ಆಡಿ, ಆ ಮೇಲೆ ಅದನ್ನು ತಿದ್ದಿ ಮತ್ತೊಂದು ಮಾತು ಆಡಿದ ಉದಾಹರಣೆಗಳೇ ಇಲ್ಲ. ಅಂತೆಯೇ ಅವರ ವಾಣಿ ವೇದವಾಣಿಯಾಯಿತು. ವೇದವನ್ನು ಎಂದಾದರೂ ತಿದ್ದಿ ಹೊಸದಾಗಿ ಬರೆಯಬಹುದೇ? ಎಂದಿಗೂ ಸಾಧ್ಯವಿಲ್ಲ. ಶಿವಯೋಗಿಗಳ ಮಾತೇ ಜೀವಂತ ವೇದವಾಗಿತ್ತು. ಸಂಶಯವನ್ನು ಅಭಿವ್ಯಕ್ತ ಮಾಡಿದ ಆ ಭಕ್ತರಿಗೆ ಈ ಸಲ ಕಟ್ಟುನಿಟ್ಟಾಗಿ ಹೇಳಿದರು—.

'ಹಾಗಾದರೆ ಅದಕ್ಕೆ ನಂದಿಧ್ವಜವೆಂದು ಯಾಕೆ ಅನ್ನಬೇಕು? ಅದು ನಿಜವಾಗಿ ನಂದಿಧ್ವಜವೇ ಇದ್ದುದಾದರೆ ಅದನ್ನು ಒಯ್ದಲ್ಲಿ ತಿಪ್ಪೆ ಉಪ್ಪರಿಗೆಯಾಗಬೇಕು. ಪೋಟುಮರ ಚಿಗುರಬೇಕು. ಇಲ್ಲವಾದರೆ ಅದು ನಂದಿಧ್ವಜವೇ ಅಲ್ಲ. ಸುಮ್ಮನೇ ಒಯ್ದುಕಟ್ಟಿರಿ.'

ಭಕ್ತರಿಗೆ ಏನೂ ತಿಳಿಯದಾಯಿತು. ಅಪ್ಪನವರ ಅಪ್ಪಣೆ ಶಿರಸಾಮಾನ್ಯ! ಮೀರಿದರೆ ಮೂವತ್ತು ಕುತ್ತು!! ಹೀಗೆಂದು ವಿಚಾರಿಸದೆ ಧ್ವಜವನ್ನು ಕಿತ್ತು, ತಿಪ್ಪೆಯಲ್ಲಿದ್ದ ಪೋಟು ಮರದ ಕೊನೆಗೆ ಕಟ್ಟಿಬಿಟ್ಟರು. ಕೆಲವರು ತಲೆ ನೆರೆದ ಹಿರಿಯರು–'ಇದೇನು ಮಹಾಸ್ವಾಮಿಗಳಿಗೆ ಹುಚ್ಚು ಹತ್ತಿದೆಯೇ? ಯಾವ ಸಾಮಾನು ಎಲ್ಲಿ ಇಡಬೇಕನ್ನೂದರ ಗೊತ್ತೈತೋ ಇಲ್ಲೋ? ಎಂದು ಒಳಗೊಳಗೆ ಗುನುಗಿಕೊಂಡರು.

ಹತ್ತು ದಿನ ಹಾರಿರಲಿಲ್ಲ. ಆ ಪೋಟು ಬೇವಿನಮರ ವಸಂತಮಾಸದ ಬಿಲ್ವವೃಕ್ಷದಂತೆ ಚಕಚಕನೇ ಚಿಗಿಯಹತ್ತಿತು. ಮೂಗುತಿ ಇಟ್ಟ ಮುತ್ತೈದೆ ಕಳಸಾರತಿ ಹಿಡಿದಂತೆ, ಆ ಧ್ವಜವನ್ನು ಹೊತ್ತು ಜೀವಂತವಾಗಿ ಕಂಗೊಳಿಸ ತೊಡಗಿತು. ಒಡನೆಯೇ ಅನೇಕ ಭಕ್ತರು ಆ ಪವಿತ್ರ ಮರದ ದರ್ಶನಕ್ಕೆ ಬರಹತ್ತಿದರು. ಆಗ ತಿಪ್ಪೆ ತಿಪ್ಪೆಯಾಗಿಯೇ ಹೇಗೆ ಉಳಿದೀತು? ಅಲ್ಲಿ ಅತಿ ಸುಂದರವಾದ ವಿಶಾಲ ಕಟ್ಟೆಯೊಂದನ್ನೇ ಅದರ ಸುತ್ತ ಕಟ್ಟಿಬಿಟ್ಟರು.

ಶಿವಯೋಗಿಗಳು 'ಅಪ್ಪಗಳ' ಸಾಮರ್ಥ್ಯವನ್ನೂ ನಂದಿಧ್ವಜದ ಪಾರಮ್ಯವನ್ನೂ ಲೋಕಕ್ಕೆ ಪ್ರಯೋಗ ಮಾಡಿಯೇ ತೋರಿಸಿದರು. 'ನೀನೊಲಿದರೆ ಕೊರಡು ಕೊನರುವದಯ್ಯ' ಎಂಬ 'ಅಪ್ಪನವರ' ಅಮೃತವಾಣಿ ಶ್ರೀಗಳವರ ಕೈಯಲ್ಲಿ ಸಾಕಾರವಾಗಿ ಮೆರೆಯಿತು! ಪ್ರತ್ಯಕ್ಷ ನಿದರ್ಶನವಾಯಿತು!!

# ಕರುಣೆಯು ಕಂದ

ನಾಗೂರಿನ ಪಾಪಣ್ಣನ ಕಥೆಯೆ ಬಲುವಿಚಿತ್ರ. ಆತನಿಗೆ ಭೂತ ಪಿಶಾಚಿಗಳ ಬಾಧೆ ಸುರುವಾಗಿಬಿಟ್ಟಿದೆ. ಅದರಿಂದ ಸುಂದರಿಯಾದ ಮಡದಿ ಸತ್ತು ಹೋದಳು. ಹುಟ್ಟಿದ ಮಕ್ಕಳೆಲ್ಲ ಮಣ್ಣು ಪಾಲಾದವು. ಮನೆ ಹಾಳಾಯಿತು. ಹೊಲ ಹೋಯಿತು. ದುಡ್ಡು ಬರಿದಾಯ್ತು. ಕೊನೆಗೆ....ಪಾಪ!....ಎಲುವಿನ ಹಂದರದ ಪಾಪಣ್ಣನೊಬ್ಬನೆ ಉಳಿದ!!

ಪಾಪಣ್ಣ ಚಿತ್ತರಗಿ ಪೀಠದ ಪರಮ ಶಿಷ್ಯ. ಆದರೆ ಅನೇಕ ವರ್ಷಗಳಿಂದ ಆ ಕಡೆಗೆ ತಾತ್ಸಾರ ಮಾಡಿಬಿಟ್ಟಿದ್ದ. ಈಗ ಬಂಡಿ ಬರಿದಾದ ಮೇಲೆ ಹೊಂಡದ ನೆನಪಾಯಿತು. ದುಃಖದ ತೇರಿನಂತೆ ಎಳೆಯುತ್ತ ಏರುತ್ತ ಅಳುತ್ತ ಬಳಲುತ್ತ ಚಿತ್ತರಗಿಗೆ ಬಂದು, ಮಹಾಸ್ವಾಮಿಗಳಿಗೆ ಸಾಷ್ಟಾಂಗವೆರಗಿದ. ಶ್ರೀಗಳ ಪಾದ ದರ್ಶನದಿಂದ ಆತನ ಮರವೆ ಕರಗಿಹೋಯಿತು. ಬಿಕ್ಕಿ ಬಿಕ್ಕಿ ಅತ್ತು, ಚಿತ್ತರಗಿ ಪೀಠಕ್ಕೆ ಕಣ್ಣೀರಿನ ಅಭಿಷೇಕ ಎರೆದ.

ದಯಾಘನರಾದ ಸ್ವಾಮಿಗಳು ಆತನ ಆಗುಹೋಗುಗಳೆಲ್ಲವನ್ನೂ ಕೇಳಿಕೊಂಡರು. ಪಾಪಣ್ಣನಿಗೆ ಅವನಿಗರಿಯದಂತೆಯೆ ಭೂತಭಾತೆ ಕಾಡುತ್ತಿದ್ದುದು ಶಿವಯೋಗಿಗಳಿಗೆ ಮುಖಮಾತ್ರ ದರ್ಶನದಿಂದಲೇ ವಿದಿತವಾಯಿತು. ಪಾಪಣ್ಣನೂ ಸ್ವಾಮಿಗಳನ್ನು ತನ್ನ ಮುರುಕಲು ಮನೆಗೆ ಆಮಂತ್ರಿಸಿದ. ವಿಜಯಮಹಾಂತ ಶಿವಯೋಗಿಗಳು ಕೇವಲ ಶ್ರೀಮಂತ ಬಂಧುಗಳಾಗಿರಲಿಲ್ಲ.

ಎಲ್ಲರನ್ನೂ ಸರಿಸಮಾನರಾಗಿ ಕಾಣುತ್ತಿದ್ದರು. ಅಷ್ಟೇ ಏಕೆ; ಬಡವರನ್ನು ಒಂದು ಗುಂಜಿ ಹೆಚ್ಚಾಗಿಯೆ ಸನ್ಮಾನಿಸುತ್ತಿದ್ದರು, ಬಡವರೆಂದರೆ ಚಿತ್ತರಗಿ ಪೀಠದ ಒತ್ತಿ ಇಟ್ಟ ಮುತ್ತುಗಳೆಂಬಂತೆ ಅಪ್ಪಿಕೊಳ್ಳುತ್ತಿದ್ದರು !

ಅದೇ ದಿನ ಶ್ರೀಗಳ ಪರಮಪಾವನ ಪಾದಂಗಳು ಪಾಪಣ್ಣನ ಮುಗ್ಗಲು ಮನೆಯಲ್ಲಿ ಸುಳಿದಾಡಿದವು. ಅವರ ಪಾದಪೂಜೆ ಭಕ್ತಿಯ ಶ್ರೀಮಂತಿಕೆಯಲ್ಲಿ, ಭಾವದ ವೈಭವದಿಂದ ನೆರವೇರಿತು.

ಹಸನ್ಮುಖಿಗಳಾದ ಶಿವಯೋಗಿಗಳು ಹಿಂದು ಮುಂದೆ ನೋಡದೆ– 'ಪಾಪಣ್ಣ ಚಿಂತಿಸಬೇಡ. ಇನ್ನು ಹಾನಿ ಇಲ್ಲ. ಮುಂದಿನ ವರ್ಷ ಮಗನನ್ನು

ಕರೆತಂದು ಹಣ್ಣು-ಕಾಯಿ ಮಾಡಿಸು' ಎಂದರು. ಇಷ್ಟು ಹೇಳಿ ತಮ್ಮ ಮಠಕ್ಕೆ ಮರಳಿ ದಯಮಾಡಿಸಿದರು.

ಇತ್ತ ನಾಗೂರಿನ ಜನರೆಲ್ಲ, ಸ್ವಾಮಿಗಳ ಮಾತು ಕೇಳಿ ಕಕ್ಕಾಪಿಕ್ಕಿಯಾಗಿ ಹೋದರು. ಆಗ ಅವರು ತಮ್ಮ ತಮ್ಮಲ್ಲಿ ವಿಚಾರಿಸುತ್ತ—

'ಸ್ವಾಮಿಗಳು ಗಂಡು ಮಗನನ್ನು ಹಡೆಯೆಂದು ಪಾಪಣ್ಣನಿಗೆ ಆಶೀರ್ವದಿಸಿದರು. ಆದರೆ ಅವನಿಗೆ ಹೆಂಡತಿಯೇ ಇಲ್ಲವಲ್ಲಾ ! ಹೆಂಡತಿ ಇಲ್ಲದೆ ಸುಪುತ್ರನನ್ನು ಹಡೆಯುವದಾದರೂ ಹೇಗೆ ? ಬಹುಶಃ ಸ್ವಾಮಿಗಳು ಅಜಮಾಸು ಪಂಚವೀಸು ಆಶೀರ್ವಾದ ಒಗೆದಿರಬಹುದು. ಹತ್ತಿದರೆ ಹಸ್ತ್ರಲಿ; ಬಿಟ್ಟರೆ ಬಿಡಲಿ ಎಂದು ಆಶೀರ್ವಾದ ಮಾಡುವ ಅಮೃತ ಹಸ್ತಗಳು ಜಗತ್ತಿನಲ್ಲಿ ಎಷ್ಟಿಲ್ಲ ? ಅದೇ ನಂಬರಿನಲ್ಲಿ ಇವರೂ ಯಾಕಿರಬಾರದು ? ಹೋಗಲಿ....ಇನ್ನೊಂದು ಮದುವೆಯಾಗುತ್ತಾನೆಂದು ಒಂದು ಪಕ್ಷಕ್ಕೆ ನಾವು ತಿಳಿದರೆ; ಈ ತಿರುಕನಿಗೆ ಹೆಣ್ಣಾದರೂ ಯಾರು ಕೊಡಬೇಕು ? ಇದೂ ಹೋಗಲಿ.... ಯಾರಾದರೂ ಹೆಣ್ಣು ಕೊಟ್ಟಾರೆಂದು ಇನ್ನೊಂದು ಪಕ್ಷಕ್ಕೆ ತಿಳಿದರೆ; ಕೈಯಲ್ಲಿ ಕಾಸಿಲ್ಲದ ಈ ಕುಬೇರನಿಗೆ ಲಗ್ನಕ್ಕೆ ದ್ರವ್ಯವಾದರೂ ಎಲ್ಲಿಂದ ಬಂದೀತು ?' ಎಂದು ಪರಿಪರಿಯಾಗಿ ತರ್ಕಿಸಿದರು.

ಆದರೆ ತರ್ಕಕ್ಕೂ ನೈಜ ನಂಬಿಕೆಗೂ ಪೂರ್ವ–ಪಶ್ಚಿಮದಷ್ಟು ಅಂತರ ವಿಲ್ಲವೇ ? ನೋಡು ನೋಡುವಷ್ಟರಲ್ಲಿ ಲಕ್ಷ್ಮಿ ಪಾಪಣ್ಣನ ಹಿಂದೆ ಗೆಜ್ಜೆಕಟ್ಟಿ ಕೊಂಡು ಕುಣಿದಾಡಹತ್ತಿದಳು. ಆತ ಉದ್ರಿ ತಂದು ಸುರುವು ಮಾಡಿದ ವ್ಯಾಪಾರ ಒಂದಕ್ಕೆ ಹತ್ತಾಗಿ ಹೆಚ್ಚಳವಾಯಿತು. ದ್ರವ್ಯಕೂಡಿತು. ಇನ್ನೇನು ಕೇಳಬೇಕು ? ದುಡ್ಡಿದ್ದರೆ ಎಲ್ಲವೂ ಬರುವುದಿಲ್ಲವೇ ? ಹದಿನಾರರ ಹರೆಯದ ಹೆಣ್ಣುಗಳನ್ನು ಕನ್ಯಾದಾನ ಮಾಡಿಕೊಡಲು ಅನೇಕರು ನಾ ಮುಂದೆ ತಾ ಮುಂದೆ ಎಂದು ಬಂದರು. ಮದುವೆಯೂ ಆಯಿತು. ಮದುವೆಯಾದ ಮೇಲೆ ಮಗ ಬರದೇ ಇರುತಾನೆಯೆ ? ವೇಳಾಪತ್ರಿಕೆಯನ್ನು ಹಚ್ಚಿ ಇಟ್ಟಂತೆ; ಲಗ್ನವಾದ ಒಂಬತ್ತೇ ತಿಂಗಳಿಗೆ ಸತ್ಪುತ್ರ ಅವತಾರ ತಾಳಿಬಿಟ್ಟ ! ಪಾಪಣ್ಣ ಪಪ್ಪೈ ಹಣ್ಣಿನಂತೆ ಹಿಗ್ಗಿ ಚಿತ್ತರಗಿ ಮಠಕ್ಕೆ ಹಣ್ಣುಕಾಯಿ ಮಾಡಿಸಿದ. ಮಗನಿಗೆ ಮಾಂತೇಶ ಎಂದು ಹೆಸರಿಟ್ಟ.

# ಒಲಿದರೆ ವರದಾನ, ಮುನಿದರೆ ಮುಗದಾಣ !

ಮಾರವಾಡಿ ಕೊಟ್ಟ ಸಾಲ ಮಾರೆಮ್ಮ ಒಂದರೂ ಮುಗಿಯಲಿಲ್ಲವಂತೆ! ಮಾರವಾಡಿಯ ಮುಂಡಾಸದಂತೆ ಬಡ್ಡಿಯೂ ಉದ್ದುದ್ದವಾಗಿಯೇ ಸುತ್ತಿ ಕೊಳ್ಳುತ್ತದೆ. ಅದಕ್ಕೆ ಚಕ್ರಬಡ್ಡಿ ಮಹಾಬಡ್ಡಿಗಳೂ ಸೇರದೆ ಗತಿ ಇಲ್ಲ.

ಬಾದವಾಡಿಗೆ ಬಸಪ್ಪ ಮಾರವಾಡಿಯೊಬ್ಬನಿಂದ ನಾಸೂರು ರೂಪಾಯಿ ಸಾಲ ತಂದಿದ್ದ. ಬಡತನ ಹೆಚ್ಚಿದ್ದರಿಂದ ಸಾಲ ತೀರಿಸುವದು ಅಸಾಧ್ಯ ವಾಯಿತು. ಮಾರವಾಡಿ ಒಮ್ಮೆ ಸಹ ಅವನಿಂದ ಹೊರಳಿ ಸಾಲ ಕೇಳಲಿಲ್ಲ. ಕಾರಣ ಬಡ್ಡಿ ಬೆಳೆವಷ್ಟು ಸುಖವಲ್ಲವೇ ? ಮೂಲಧನ ನಾಲ್ಕು ನೂರಾದರೆ ಬಡ್ಡಿ ಐದು ನೂರಾಯಿತು ? ಒಮ್ಮೆಲೆ ಒಂಬತ್ತುನೂರು ರೂಪಾಯಿ ಹೇಗೆ ಮುಟ್ಟಿಸುವದು? ಬಸಪ್ಪ ಬೇಸಿಗೆಯ ಹೊಲದಂತೆ ಬತ್ತಿಹೋದ. ಚಳಿಗಾಲದ ಮರದಂತೆ ಒಣಗಿದ. ಬಡ್ಡಿಗೆ ಮಹಾಬಡ್ಡಿ ಸೇರಿತು. ಮೂಲಧನ ಹಿಡಿದು ಒಟ್ಟು ಸಾಲ ಹದಿನೇಟು ನೂರು ರೂಪಾಯಿ ಆಯಿತು !

ಈಗ ಮಾರವಾಡಿ ಬಸಪ್ಪನನ್ನು ಕೂಡಿದ ಜನರಲ್ಲಿ ಕಿಮ್ಮತ್ತು ಕಳೆಯಲು ಸುರುವು ಮಾಡಿದ.

ಬಸಪ್ಪನಿಗೆ ಇನ್ನು ಚಿತ್ತರಗಿ ಮಠವೆ ಗತಿಯಾಯಿತು. ಓಡಿಬಂದು ಸ್ವಾಮಿಗಳ ಪಾದ ಹಿಡಿದುಕೊಂಡ. ವಿಜಯಮಹಾಂತ ಶಿವಯೋಗಿಗಳ ಜೀವನ ದಲ್ಲಿ ಗಮನಿಸಬೇಕಾದ ಎರಡು ಮಹತ್ವದ ಅಂಶಗಳೆಂದರೆ : ಯಾರೇ ಎಂಥ ಕಷ್ಟದಲ್ಲಿಯೇ ಅವರನ್ನು ಮೊರೆಹೋಗಲಿ. ಅವರು ಎಂದಿಗೂ ನಿರಾಶರಾಗಿ ಹೊರಳಿ ಹೋಗಿಲ್ಲ. ಇದು ಮೊದಲ ಅಂಶ ! ಅವರ ಅಪ್ಪಣೆಗೆ ವಿರುದ್ಧ ಹೋದ ಯಾರೂ ಬಾಳಿಲ್ಲ. ಬದುಕಿಲ್ಲ. ಇದು ಎರಡನೆಯ ಅಂಶ !!

ಶಿವಯೋಗಿಗಳು ಬಸಪ್ಪನ ಅಳಲನ್ನು ಶಾಂತಿಯಿಂದ ಕೇಳಿಕೊಂಡರು. "ಈಗ ನಿನ್ನ ಹತ್ತಿರ ಎಷ್ಟು ದುಡ್ಡು ಇದೆ ?" ಎಂದು ಮೊದಲು ಕೇಳಿದರು. "ಮನೆಯ ಸಾಮಾನು ಸಟ್ಟೆಲ್ಲವನ್ನೂ ಮಾರಿದರೆ ಹದಿನೈದು ನೂರು ಆಗ ಬಹುದು ಬುದ್ಧೀ" ಎಂದು ಹೇಳಿಕೊಂಡ. ಆತ ತೆಗೆದುಕೊಂಡ ಸಾಲ ನಾನೂರು ! ಈಗ ಕೊಡುವ ಸಾಮರ್ಥ್ಯ ಹದಿನೈದು ನೂರು !! ಬಡ್ಡಿ

ಹಿಡಿದು ಒಟ್ಟು ಸಾಲ ಹದಿನೆಂಟು ನೂರು !!! ಇದೇನು ವಿಚಿತ್ರವೆಂದು ಶಿವ ಯೋಗಿಗಳು ಮರುಗಿದರು.

ಮರುದಿನವೆ ನಾಲ್ಕೈದು ಹಿರಿಯ ಪುರ ಪ್ರಮುಖರ ಸಮ್ಮುಖದಲ್ಲಿ ಶ್ರೀಗಳು ಮಾರವಾಡಿಯನ್ನು ಮಠಕ್ಕೆ ಬರಮಾಡಿಕೊಂಡರು. ಅವನಿಗೆ ಒಮ್ಮೆಲೆ ವಿಷಯವನ್ನು ಅರಿಕೆಮಾಡಲಿಲ್ಲ. ವ್ಯವಹಾರ ಕುಶಲಿಗಳಾದ ಸ್ವಾಮಿ ಗಳು ಮೊದಲು ಅವನಿಗೆ ತಮ್ಮ ಮಾತನ್ನು ಮೀರುವದಿಲ್ಲವೆಂಬಂತೆ ಆಣೆ ಮಾಡಿಸಿಕೊಂಡರು. ಮಾರವಾಡಿ ಕೊಂಯ್‌ಗುಡುತ್ತಲೆ ಆಣೆಮಾಡಿದ. ತರುವಾಯ ಬಸಪ್ಪನ ನೂರಾರು ರೂಪಾಯಿ ಸಾಲವನ್ನು ಬಡ್ಡಿ ಸೇರಿಸಿ, ಹದಿನೈದು ನೂರು ರೂಪಾಯಿಗೆ ಮುಟ್ಟಿಸಿಕೊಳ್ಳುವಂತೆ ತಿಳಿಸಿದರು. ಒಮ್ಮೆಲೆ ಹದ್ದು ಹಾರಿದಂತೆ ಮಾರವಾಡಿ ಎದ್ದು ನಿಂತು—

'ಇದೇ ಏನು ನಿಮ್ಮ ಆಣೆ ಮಾಡಿಸಿಕೊಂಡ ಕಂತ್ರಾಟ? ಮತ್ತೇನಾದ್ರೂ ಹೇಳ್ರಿ. ದುಡ್ಡಿನ ವಿಷಯದಲ್ಲಿ ಒಂದು ಪೈ ಕೂಡಾ ಸರಿಯೂದಿಲ್ಲ. ದಾನಾ ಬೇಕಾದ್ರ ಕೇಳಿ, ಒಂದು ಬಿಟ್ಟು ನಾಲ್ಕು ದುಡ್ಡು ಕೊಟ್ಟೇನು. ಆದ್ರ ನಮ್ಮ ವ್ಯವಹಾರದಾಗ ಕೈ ತುಡುಕಬ್ಯಾಡ್ರಿ' ಎಂದು ನಿಷ್ಠುರರಾಗಿ ನುಡಿದು ಅಲ್ಲಿಂದ ಹೊರಟುಬಿಟ್ಟ.

ಶಿವಯೋಗಿಗಳು ಸುಮ್ಮನಾಗಿಬಿಟ್ಟರು. ಆದರೆ ಅವರ ಅಂತಃಕರಣದ ನೋವು ಮಾತ್ರ ಸುಮ್ಮನಾಗಲಿಲ್ಲ. ಒಂದೇ ತಿಂಗಳಲ್ಲಿ ಮಾರವಾಡಿಯ ಇಬ್ಬರು ಚಿನ್ನದ ಪುತ್ಥಳಿಯಂತಿದ್ದ ಹಿರಿಯ ಗಂಡುಮಕ್ಕಳು ಸತ್ತುಹೋದರು! ವ್ಯಾಪಾರದಲ್ಲಿ ಭಾರೀ ನಷ್ಟ ಉಂಟಾಯಿತು !! ತಾನು ಶ್ರೀಗಳವರ ಅಪ್ಪಣೆಗೆ ತಾತ್ಸಾರ ಮಾಡಿದ್ದೇ ಈ ಫಲವೆಂದು ತಿಳಿಯಲು ಮಾರವಾಡಿಗೆ ತಡ ಹತ್ತಲಿಲ್ಲ. ಮಠಕ್ಕೆ ಓಡಿಬಂದು ದೀರ್ಘದಂಡ ನಮಸ್ಕಾರ ಹಾಕಿದ. ಗಲ್ಲಗಲ್ಲ ಬಡಿದುಕೊಂಡು, ತೋಬೋ ತೋಬೋ ಎಂದು ಹದಿನೈದು ನೂರು ರೂಪಾಯಿಗೆ ಸಾಲ ಮುಗಿಸಿಕೊಂಡುಬಿಟ್ಟ.

ಮುಂದೆ ಬಸಪ್ಪ ವ್ಯಾಪಾರದಲ್ಲಿ ಏರುತ್ತಲೇ ಹೋದ. ಮಾರವಾಡಿ ಇಳಿಯುತ್ತಲೇ ನಡೆದ. ಕಾರಣ ಶಿವಯೋಗಿಗಳು ಒಲಿದರೆ ವರದಾನ, ಮುನಿದರೆ ಮುಗುದಾಣವಾಗಿರಲಿಲ್ಲವೇ ?

# ಧೂಳಪ್ಪ ಅಕ್ಕೀ ಅನ್ನವನ್ನೇ ಉಂಡ

ಓತಗೇರಿಯ ಧೂಳಪ್ಪ ಒಳ್ಳೇ ಕಟ್ಟುಮಸ್ತಾದ ಜಬರ್ದಸ್ತ ಕೂಲಿಆಳು. ಕಲ್ಲೀ ಮೊಸೆಯ ಹುರಿಯಾಳು. ಒಂದು ದಿನ ಸ್ವಾಮಿಗಳು ಆತನಿಗೆ ಓತಗೇರಿ ಮಠದ ಕಟ್ಟಡ ಕೆಲಸಕ್ಕೆ ಬರಬೇಕೆಂದು ಹೇಳಿ ಕಳಿಸಿದರು. ಕರೆಯಲಿಕ್ಕೆ ಹೋದ ಭಕ್ತನ ಮುಂದೆ ಧೂಳಪ್ಪ ಸ್ವಲ್ಪ ದಿಮಾಕಿನಿಂದಲೇ ಉತ್ತರಿಸಿದ—

'ನಾನು ಬೇರೆ ಕಡೆಗೆ ದುಡಿಯಲು ಹೋದರೆ ದಿನಕ್ಕೆ ಏಳು ಆಣೆ ಕೂಲಿ ಸಿಗುತ್ತದೆ. ಆದರಿಂದ ದಿನಕ್ಕೆ ಮೂರುಸಲ ಅಕ್ಕಿಅನ್ನ ಕುಳಿತು ಉಣ್ಣುತ್ತೇನೆ. ನಿಮ್ಮ ಸ್ವಾಮಿಗೋಳು ಅಂದ್ರ ಸ್ವಾಮಿಗೋಳು. ದಕ್ಷಿಣಾ ಇಸ್ಕೋಳಾಕ ಬರ್‍ತೈತಿ. ದುಡ್ಡು ನೀಡಾಕ ಬರೋದಿಲ್ಲ ? ದಿನಾ ನಾಲ್ಕಾಣೆ ಕೂಲಿ ಕೊಟ್ಟ ಕಳಸ್ತಾರು. ಅದರಿಂದೇನಾದೀತು ? ಬರೋದಾಗೋದಿಲ್ಲ ಅಂತ ಹೇಳು.'

ಭಕ್ತ ಬೆಪ್ಪನಾಗಿ ಮರಳಿದ. ಶ್ರೀಗಳಿಗೆ ಸುದ್ದಿಯನ್ನು ಇದ್ದಕ್ಕಿದ್ದಂತೆಯೆ ವರದಿಮಾಡಿದ, ಸ್ವಾಮಿಗಳು ಈ ಮಾತು ಕೇಳಿ—

'ಆಗಲಿ ಬಿಡಪಾ. ಆತ ಅಕ್ಕಿ ಅನ್ನಾನೇ ಕುಳಿತು ಉಣ್ಣಲಿ' ಎಂದರು. ವಿಜಯ ಮಹಾಂತ ಶಿವಯೋಗಿಗಳು ಕಣ್ಣು ಮಿಳುಕಿಸಿದರೂ ಅದಕ್ಕೆ ಒಂದು ಗೂಢಾರ್ಥ ಇದ್ದೇ ಇರುತ್ತಿತ್ತು ಏನೋ ! ಸಹಜವಾಗಿ ಆಡಿದ ಈ ಮಾತೂ ನಿಜವಾಗಬೇಕೆ ? ನಾಲ್ಕು ದಿನ ಜಾರಿರಲಿಲ್ಲ; ಧೂಳಪ್ಪನಿಗೆ ಬಾಯಿರೋಗ ಬಂದಿತು. ಮಂಗನ ಬಾವಿನಂತೆ ಗಲ್ಲ ಪುಟಚೆಂಡಾಗಿ ಉಬ್ಬಿದವು. ಮೂಗು ಅಗಲವಾಯಿತು, ಕಣ್ಣು ಬಳಸಿಕ್ಕವು. ಬಾವಿನ ಒಳಗೆ ಗೆದ್ದ ಹೊತು ಹೋಯಿತು. ಕೆಲಸ ಕಟ್ಟಾಯಿತು. ರೋಗ ಹೆಚ್ಚಾಯಿತು. ವೈದ್ಯರಿಗೆ ತೋರಿಸಿದ. ಅವರು ಮೂರು ತಿಂಗಳ ಕೇವಲ ಅಕ್ಕಿ ಅನ್ನವನ್ನೇ ಉಣ್ಣಬೇಕೆಂದು ಪತ್ತೆ ಹೇಳಿದರು. ಹುಳಿ-ಉಪ್ಪು-ಖಾರದ ದರ್ಶನ ಕೂಡಾ ಮಾಡಬಾರದೆಂದು ಕಡ್ಡಾಯವಾಗಿ ಎಚ್ಚರಿಕೆ ಕೊಟ್ಟರು. ಮತ್ತೇನು ಕೇಳುವದು ? ಧೂಳಪ್ಪ ಅಕ್ಕಿ ಅನ್ನವನ್ನು ಕುಳಿತೇ ಉಣ್ಣಹತ್ತಿದ ! ತಲೆ ಅಲ್ಲಾಡಿಸಿದರೆ ಹಾವು ಕಡಿದಂತೆ ನೋವು ಆಗುತ್ತಿತ್ತು. ಇನ್ನು ಕೆಲಸಕ್ಕೇನು ಹೋಗುತ್ತಾನೆ.

ಅಕ್ಕಿ ಅನ್ನವಾದರೂ ಎಷ್ಟು ದಿನದೊರೆತೀತು ? ಕುಳಿತು ಉಣ್ಣುವವಗೆ ಅಕ್ಕಿಅನ್ನ ಸಾತೀತೆ ? ಗಂಜಿಗೆ ಕೂಡ ದಿಕ್ಕಿಲ್ಲವಾಯಿತು. ಪಾಪ ಮಾಡುವಾಗ ಅದರ ಪರಿವೆ ಬರುವದಿಲ್ಲ. ಪ್ರಾಯಶ್ಚಿತ್ತ ಕಾಲದಲ್ಲಿ ಹಿಂದೂ ಮುಂದೂ ನೆನಪಾಗಿ ತನ್ನನ್ನೇ ಬಯ್ದುಕೊಂಡ. ತನ್ನನ್ನೇ ಶಪಿಸಿಕೊಂಡ. ನೇರವಾಗಿ ಮಠಕ್ಕೆ ಹೋಗಿ ಶಿವಯೋಗಿಗಳಿಗೆ ಅಡ್ಡಬಿದ್ದು ಕ್ಷಮಾಪಣೆ ಯಾಚಿಸಿದ. ಕ್ಷಮೆಗಾಗಿಯೇ ಅವತಾರ ಎತ್ತಿದ ಪಾವನಗಂಗಾ ಮೂರ್ತಿಯಲ್ಲಿ ಕ್ಷಮೆ ದೊರೆಯದೇ ಇದ್ದೀತೆ ? ಶಿವಯೋಗಿಗಳು ಎರಡು ಖಜೂರದ ಬೋಟು ಕೊಟ್ಟು 'ಗುಣವಾಗುತ್ತದೆ ಹೋಗು' ಎಂದರು. ಧೂಳಪ್ಪನ ಬಾಯಿಯ ರೋಗ ಬರುವಾಗಲೂ ನಾಲ್ಕೇ ದಿನಗಳಲ್ಲಿ ಬಂದಿತ್ತು; ಈಗ ಹೋಗುವಾಗಲೂ ನಾಲ್ಕೇ ದಿನಗಳಲ್ಲಿ ಹೋಯಿತು ! ಅಂದಿನಿಂದ ಧೂಳಪ್ಪ ಮಠದ ಕೆಲಸಗಳನ್ನು ಎಂದೂ ಕಡಗಣಿಸಲಿಲ್ಲ.

# ಚಿತ್ತದ 'ಪ್ರಸಾದ

ದೋಟಿಹಾಳದ ವೀರಬಸಯ್ಯ ಮಠದ ಭಕ್ತ. ಆದರೆ ಅವನದು ಆರಾಣೆ ತೂಕದ ಭಕ್ತಿ ಮಾತ್ರ. ಉಳಿದ ಹತ್ತಾಣೆ ಮಾತ್ರ ಸಂಸಾರಕ್ಕೇ ಮೀಸಲು.

ಇಂಥವನು ಮಠದ ಜೀತಕ್ಕೆ ನಿಂತ, ವರ್ಷದ ಸಂಬಳ ಮುಂಗಡವೇ ಪಡೆದುಬಿಟ್ಟ. ಶಿವಯೋಗಿಗಳು; ಎಂಥವರೇ ಇರಲಿ ಮೊದಲು ನಂಬಿಬಿಡುತ್ತಿದ್ದರು. ಮುಂದೆ ಹೆಚ್ಚು ಕಡಿಮೆ ಆದರೆ ಅವರ ಯೋಗಬೆತ್ತ ಸಿದ್ಧವೇ ಇರುತ್ತಿತ್ತು.

ವೀರಬಸಯ್ಯನ ಅಣ್ಣ ಕೊಟ್ಟೂರೇಶ. ಹೆಸರು ಕೊಟ್ಟೂರೇಶ ಆದರೂ ಅವನ ಭಕ್ತಿ ತಳಸೀಳಿದ ಗಡಿಗೆ. ಮಠದ ಸ್ವಾಮಿಗಳೆಂದರೆ ಅವರೂ ಒಬ್ಬ ದೊಡ್ಡ ಕಮಠದ ಮನುಷ್ಯ ಎಂದು ತಿಳಿದಿದ್ದ.

ಇತ್ತ ಕೋಟ್ಟೂರೇಶನಿಗೆ ಆಮಶೌಚ ಕೂಡಿಕೊಂಡು ಹಾಸಿಗೆ ಹಿಡಿದ. ಅತ್ತ ಅದೇ ಆಗ ಮಠದ ಜೀತಕ್ಕೆ ನಿಂತ ವೀರಬಸಯ್ಯ ನಾಲ್ಕು ದಿನ ರಜೆ ಪಡೆದು ಊರಿಗೆ ಬಂದುಬಿಟ್ಟ. ಆದರೆ ಬಂದವ ಹೊರಳಲೇ ಇಲ್ಲ. ಹೊರಳಿ ಹೋಗಬಾರದೆಂದು ಅವನ ವಿಚಾರವಿರಲಿಲ್ಲ. ಆದರೆ ಅಣ್ಣನ ರೋಗ ತಮ್ಮನನ್ನು ಕಟ್ಟಿಹಾಕಿತು. ಮೂರು ತಿಂಗಳುಗಳು ಜಾರಿಹೋದವು.

ಶಿವಯೋಗಿಗಳೇ ತಮ್ಮ ಆಳು ಮನುಷ್ಯ ವೀರಬಸಯ್ಯನನ್ನು ವಿಚಾರಿಸಲು ನೇರವಾಗಿ ಅವನ ಮನೆಗೇ ಬಂದರು. ಆದರೆ ಅವನದೂ ದೊಡ್ಡ ನಶೀಬವೆನ್ನಬೇಕು ! ಶ್ರೀಗಳು ಬಂದ ಸಮಯಕ್ಕೆ ಆತ ಊರಲ್ಲೇ ಇರಲಿಲ್ಲ.

ಮನೆಗೆ ಬಂದ ಮಹಾತ್ಮರನ್ನು ಅಣ್ಣನಾದ ಕೊಟ್ಟೂರೇಶ ಗೌರವದಿಂದ ಕಾಣಬೇಡವೇ ? ರೋಗದ ಬಾಧೆಯಿಂದ ಕಂಗಾಲಾದುದರಿಂದ ಎತ್ತಬೇಕತ್ತ ಉತ್ತರಿಸಿದ. ಏಕವಚನದಲ್ಲಿ ಹೀಯಾಳಿಸಿದ. ಸ್ವಾಮಿಗಳೂ ಸರಿಗೆ ಸರಿ, ಬೆಸಕ್ಕೆ ಬೆಸವಾಗಿ ನಿಂತರು....

'ನಿನ್ನ ತಮ್ಮ ಜೀತಕ್ಕೆ ಕೈಕೊಟ್ಟಿದ್ದಾನೆ. ಕಳಿಸಿಕೊಡುತ್ತಿಯೋ ಇಲ್ಲೋ ?'

ಕೊಟ್ಟೂರೇಶ ಏಕವಚನದಿಂದ ಹೇಳಿದ—

'ನಿನಗೆ ಬುದ್ಧಿ ಇದೆಯೋ ಇಲ್ಲವೋ ? ಇಲ್ಲಿ ನಾವು ಸಾಯಾಕ ಹತ್ತೇವಿ ಹ್ಯಾಂಗ ಬರತಾನ ಅವನು ?'

'ಹಾಗಾದರೆ ನಾವು ಕೊಟ್ಟ ಪಗಾರ ಹೊರಳಿ ಕೊಟ್ಟುಬಿಡು. ಹೆಚ್ಚಿನ ಮಾತು ಆಡಬೇಡ' ಆತ ಹೇಳಿದ—

'ಕೊಡೋದಿಲ್ಲ. ಏನು ಮಾಡುತ್ತೀ ಮಾಡು'

ಸ್ವಾಮಿಗಳು ಸಿಟ್ಟು ಮಸ್ತಕಕ್ಕೇರಿತು. ಅದು ನೋಡುವವರಿಗೆ ಸಿಟ್ಟು. ತಿಳಿದವರಿಗೆ ಅಮೃತದ ಪೆಟ್ಟು ! ನೇರವಾಗಿ ತಮ್ಮ ಬೆತ್ತವನ್ನು ಎತ್ತಿ ರೋಗಿಯ ಮೇಲೆ ಚೆನ್ನಾಗಿ ಪ್ರಹಾರ ಮಾಡಿ ಹೊರಟುಬಿಟ್ಟರು !!

ಕೊಟ್ಟೂರೇಶ ಕೊಂಯ್‌ಗುಟ್ಟಿ ಹೋದ. ಆದರೆ ಮಹಾತ್ಮರು ಹೊಡೆದರೆ ಪಾಪನಾಶವೆಂದು ಹಿರಿಯರು ಹೇಳುತ್ತಾರೆ. ಮೂರು ತಿಂಗಳಿಂದ ಹಾಸಿಗೆ ಹಿಡಿದ ಕೊಟ್ಟೂರೇಶ ಮೂರೇ ದಿನಗಳಲ್ಲಿ ಗುಣಮುಖವಾಗಿ ಎದ್ದು ಕುಳಿತ. ಮೆಲ್ಲಗೆ ಅಡ್ಡಾಡಹತ್ತಿದ. ಆತನ ಸಿಟ್ಟು, ಕ್ರೋಧ, ಮದಾಂಧತೆ ಎಲ್ಲಿಗೋ ಓಡಿ ಹೋಗಿದ್ದವು. ಸ್ವಾಮಿಗಳು ಬೆತ್ತದ ಏಟಿನಿಂದ ತನ್ನ ಮಾಯಾ ಕತ್ತಲೆಯನ್ನೇ ಕಡಿದು ರೋಗವನ್ನು ಓಡಿಸಿದರೆಂದು ತಿಳಿದುಬಿಟ್ಟ. ಬೆತ್ತವೇ ಆತನ ಬಾಳಿಗೆ ಮಹಾಪ್ರಸಾದವಾಗಿಬಿಟ್ಟಿತ್ತು !

ಆತನ ಪರಿವರ್ತನೆ ಅಗಾಧವಾಗಿ ಆಯಿತು. ಮುಂಗಡ ಪಡೆದ ಹಣದೊಂದಿಗೆ ತಮ್ಮನನ್ನು ಕರೆದುಕೊಂಡು ಮಠಕ್ಕೆ ಹೋದ. ಸ್ವಾಮಿಗಳಿಗೆ ಹಣವನ್ನು ಸಲ್ಲಿಸಿದ್ದು ಮಾತ್ರವಲ್ಲದೆ, ತಮ್ಮನನ್ನು ಒಂದು ವರ್ಷ ಸಂಬಳವಿಲ್ಲದೆ ದುಡಿಸಿಕೊಳ್ಳಿರೆಂದು ಪ್ರಾರ್ಥಿಸಿದ.

ಈ ಮಾತು ಶಿವಯೋಗಿಗೆ ಒಪ್ಪೀತೆ ? ಬಂದ ದುಡ್ಡನ್ನು ಮರಳಿ ಅವರಿಗೇ ಕೊಟ್ಟು. ರೋಗದ ಸಾಲವನ್ನು ತೀರಿಸಲು ಹೇಳಿದರು. ಅವನ ತಮ್ಮನನ್ನು ಮಠದ ಮಗನಂತೆ ಕೆಲಸಕ್ಕೆ ಸ್ವೀಕರಿಸಿದರು.

# ಇಲಕಲ್ಲಿನಿಂದ ಮುಂಬಯಿಗೆ

ಚಿತ್ತರಗಿ ಪೀಠದ ಪ್ರಾರಂಭದಿಂದಲೂ ಕುದುರೆ ಸಂಪ್ರದಾಯ ನಡೆದು ಬಂದ ಪ್ರಶಸ್ತಿ. ಪೀಠಾಚಾರ್ಯರೆಲ್ಲ ಹೆಚ್ಚಾಗಿ ಪಾಲಕಿ ಬೋವಿಯಲ್ಲಿ ಇಲ್ಲವೆ ಕುದುರೆಯ ವಿಜಯಯಾತ್ರೆ ಕೈಕೊಳ್ಳುವದು ವಾಡಿಕೆ. ಚಿತ್ತರಗಿ ಪೀಠಕ್ಕೆ ಅನೇಕ ರಾಜಮನೆತನಗಳಿಂದ ಇಂಥ ಪ್ರಶಸ್ತಿ ಪ್ರದಾನಗಳು ಸ್ವಲ್ಪ ಹೆಚ್ಚಾಗಿಯೆ ದೊರೆತಿದ್ದವು. ಪೀಠದ ಹಕ್ಕು ಬಾಧ್ಯತೆಗಳಾಗಿ ಬಾಳಿಕೊಂಡು ಬಂದಿದ್ದವು. ಆದರೆ ವಿಜಯ ಮಹಾಂತ ಶಿವಯೋಗಿಗಳು ತುಂಬ ಸಾದಾ ಸರಳ ಜೀವಿಗಳಿದ್ದುದರಿಂದ ಇವನ್ನೆಲ್ಲ ಬದಿಗೆ ತಳ್ಳಿ; ಕುದುರೆ ಸವಾರಿ ಯೊಂದನ್ನೇ ಉಳಿಸಿಕೊಂಡರು. ಚಿಕ್ಕ ಗ್ರಾಮಗಳಿಗೆ ಹೋಗುವಾಗ ಎತ್ತಿನ ಬಂಡಿಗಳನ್ನೂ ಬಳಸಿದರು. ವೈಭವ–ಆಡಂಬರ–ನಿಶಾನಿ–ವಂದಿಮಾಗಧರ ಉಗ್ಗಡ-ರಾಜಾವಳಿ–ಪಟ್ಟಾವಳಿ–ಬಿರುದಾವಳಿಯೆಂದರೆ ಅವರ ಹುಟ್ಟುವೈರಿ ಗಳಾಗಿದ್ದವು. ಅಶ್ವಾರೋಹಣ ವಿಶೇಷ ಇಲ್ಲದಿದ್ದರೂ ಮಠಕ್ಕೆ ಮಾನ್ಯಾಳಿ ಯಾಗಿ ಬಂದ ಉಜ್ವಲ ಪರಂಪರೆಯನ್ನು ಒಡುವಂತಿಲ್ಲ. ಅದಕ್ಕೆ ಸರ್ವಲಕ್ಷಣ ಸಮನ್ವಿತವಾದ ಪಟ್ಟದ ಕುದುರೆಯೇ ಬೇಕು.

ಆದ್ದರಿಂದ ಶಿವಯೋಗಿಗಳು ಪೀಠದ ಪರಂಪರೆಗೆ ಒಗ್ಗುವ, ಉಜ್ವಲ ಧವಲವರ್ಣದ ಕುದುರೆಯನ್ನು ಆಯ್ಕೆ ಮಾಡಿ ತರಲು ತಾವೇ ಮುಂಬೈ ಯಾತ್ರೆಗೆ ಹೋಗಬೇಕಾಯಿತು. ಮಾರ್ಗದಲ್ಲಿ ಹುನಗುಂದ, ಅಮೀನಗಡ, ಚಿತ್ತರಗಿ ಮೊದಲಾದ ಕಡೆಗಳಲ್ಲಿ ತ್ರಿಕಾಲ ಲಿಂಗಪೂಜೆಗಳು ಸಾಂಗವಾಗಿ ಸಾಗಿ ದವು. ಬಾಗಿಲುಕೋಟೆಯ ವರೆಗೆ ಬಂಡಿಯ ಮೇಲೆ ಹೋದರು. ಬಾಗಿಲು ಕೋಟೆಯಿಂದ ಉಗಿಬಂಡಿ ಮಾರ್ಗವಾಗಿ ಸೋಲ್ಲಾಪೂರಕ್ಕೆ ಶಿವಯೋಗಿಗಳ ಯಾತ್ರೆ ಸಾಗಿತು. ಬಾಗಿಲುಕೋಟೆಯ ಸದ್ಭಕ್ತರು ಸೊಲ್ಲಾಪುರದ ಆಗರ್ಭ ಶ್ರೀಮಂತ ವಾರದ ಮಲ್ಲಪ್ಪನವರಿಗೆ ಶ್ರೀಗಳ ಆಗಮನದ ಬಗ್ಗೆ ತಂತಿ ಕಳಿಸಿದರು. ಪೂಜಾವಿಧಿಗೆ ಲೋಪ ಬರದಂತೆ ಸಕಾಲಿಕ ಸೇವೆ ಸಲ್ಲಿಸಲು ಸೂಚನೆ ಕಳಿಸಿದರು.

ವಾರದ ಮಲ್ಲಪ್ಪನವರ ತೋಟದಲ್ಲಿ ಶ್ರೀಗಳವರಿಗೆ ಪೂಜಾ ಪ್ರಸಾದದ ವ್ಯವಸ್ಥೆ ಆಯಿತು. ಸೊಲ್ಲಾಪುರಕ್ಕೆ ಹೋದರೂ ಇವರು ತಮ್ಮ ಸ್ವಯಂಪಾಕ

ಬಿಡಲಿಲ್ಲ. ಕಾಳು - ಬೇಳೆ – ಉಪ್ಪು – ಖಾರ – ಕಾಯಿಪಲ್ಯ – ತೊಪ್ಪಲು ಪಲ್ಯ ಎಲ್ಲವನ್ನೂ ಒಂದೇ ಪಾತ್ರೆಯಲ್ಲಿ ಬೇಯಿಸಿ ಸೇವಿಸುವದು ತಪ್ಪಲಿಲ್ಲ. ಯಾವ ಶ್ರೀಮಂತನ ಮನೆಗೆ ಹೋದರೂ ತಮ್ಮದೆ ಸ್ವಯಂಪಾಕ. ಇವರ ಈ ಪ್ರಚಂಡ ನಿಷ್ಠುರತೆಯೇ ಇವರ ಪ್ರಖರ ಪ್ರಕಾಶಕ್ಕೆ ಮೂಲ ತೈಲವಲ್ಲವೆ ?

ಸೊಲ್ಲಾಪುರದ ತೋಟದಲ್ಲಿ ಪೂಜಾವಿಧಿ ಸಾಂಗವಾಗಿ ಜರುಗಿತು. ವಾರದ ಮಲ್ಲಪ್ಪನವರ ಪರವಾಗಿ, ಕುಂಟೋಜಿ ಚನ್ನಬಸವೇಶ್ವರ ಶರಣರು ಇವರನ್ನು ಪೂಜೆ-ಪ್ರಸಾದಕ್ಕೆ ಮಲ್ಲಪ್ಪನವರ ಅರಮನೆಗೆ ಆಮಂತ್ರಿಸಲು ಬಂದರು. ಆದರೆ ಈ ರಾಜಪದ್ಧತಿ ವಿಜಯ ಮಹಾಂತ ಶಿವಯೋಗಿಗಳಿಗೆ ಸೇರಲಿಲ್ಲ. ಇದು ದಾಸೋಹಂ ಭಕ್ತಿ ಅಲ್ಲ, ಶ್ರೀಮಂತ ಭಕ್ತಿ. ರಾಜಠೀವಿಯ ಭಕ್ತಿಯೆಂದು ತಿಳಿದು ತಾತ್ಸಾರ ಮಾಡಿದರು. ಅಲ್ಲದೆ ತನ್ನ ಮನೆಗೆ ಬಂದ ಸ್ವಾಮಿಗಳ ಪ್ರಸಾದಕ್ಕೆ ಬೇರೆ ವ್ಯವಸ್ಥೆ, ಅದಕ್ಕೆ ಬೇರೆ ಆಳುಗಳನ್ನು ನೇಮಿಸುವದು ಇದು ಆಳರಸರ ಭಕ್ತಿಯೆಂದು ತುಚ್ಛೀಕರಿಸಿದರು. ವಾರದ ಮಲ್ಲಪ್ಪನವರು ಮನೆಗೆ ದಯಮಾಡಿಸಿದ ಗಣಂಗಳ ಜೊತೆಗೆ ಪ್ರಸಾದ ಸೇವಿಸದೇ ತಾವೇ ಪ್ರತ್ಯೇಕ ಭುಂಜಿಸುವ ವಿಧಾನ ಇರಿಸಿಕೊಂಡದ್ದು ಇವರಿಗೆಂತು ಸರಿ ಬರಬೇಕು ? ಭಕ್ತಿಭಾಂಡಾರಿ ಬಸವೇಶ್ವರ ಮಹಾಮಂತ್ರಿಯಾದರೂ ದಾಸರ ದಾಸನಾಗಲಿಲ್ಲವೆ ? ಅಂಥ ನಿಜಭಕ್ತಿ ಬೇಕಾಗಿತ್ತು ಶಿವಯೋಗಿಗಳಿಗೆ. ಕೋಟಿ ಹೊನ್ನು ತಂದು ಮುಂದಿರಿಸಿದರೂ ಅದು ಇವರ ನೈಜ ನಿಷ್ಠೆಯ ನಿರಂಜನ ಸರೋವರವನ್ನು ಕಲಕುತ್ತಿರಲಿಲ್ಲ.

ಶಿವಯೋಗಿಗಳು ಜಿಗುಪ್ಸೆ ಹೊಂದಿದ ಸಂಗತಿ ವಾರದ ಮಲ್ಲಪ್ಪನವರಿಗೆ ಅರಿಕೆಯಾಯಿತು. ಕೊನೆಗೆ ತಾವೇ ಬಂದು ತಮ್ಮರಮನೆಗೆ ಪೂಜೆಗಾಗಿ ಆಮಂತ್ರಿಸಿದರು. ವಿಜಯ ಮಹಾಂತ ಶಿವಯೋಗಿಗಳು ಕೆಲವು ಕರಾರುಗಳನ್ನೇ ಅವರಿಗೆ ಹಾಕಿಬಿಟ್ಟರು.

'ನಾಳೆ ನಮ್ಮನ್ನು ಕರೆಯಲು ಆಳುಗಳನ್ನು ಕಳಿಸಬಾರದು. ಸ್ವತಃ ನೀನು ನಿನ್ನ ಹೆಂಡತಿ ಬರಬೇಕು. ಬರಿಗಾಲಿನಿಂದ ಬರಬೇಕು. ಮೆರವಣಿಗೆಯಲ್ಲಿ ನಮ್ಮನ್ನು ಒಯ್ಯುತಕ್ಕದ್ದಲ್ಲ. ನಮ್ಮ ಪೂಜಾಸೇವೆಯನ್ನು ನೀವಿಬ್ಬರೂ ದಂಪತಿಗಳೇ ಮಾಡಬೇಕು. ಆಳುಗಳಿಂದ ಮಾಡಿಸಕೂಡದು, ಅಂದರೆ

ಮಾತ್ರ ನಮಗೆ ಬರಲೊಪ್ಪಿಗೆ' ಎಂದರು. ಮಲ್ಲಪ್ಪನವರು ಮರುಮಾತಿಲ್ಲದೆ ಈ ಪ್ರಕಾಂಡ ಜ್ಯೋತಿರ್ಮಂಡಲಕ್ಕೆ ತಲೆವಾಗಿದರು.

ಮರುದಿನ ಶಿವಯೋಗೀಶ್ವರನ ಪಾದಪೂಜೆ ವೈಭವದಿಂದಲೇ ಜರುಗಿತು. ಮಲ್ಲಪ್ಪನವರು ಪೂಜಾನಂತರ ನೂರು ಬೆಳ್ಳಿ ರೂಪಾಯಿಗಳನ್ನು ದಕ್ಷಿಣೆ ಇತ್ತು ಕೇಳಿದರು—

'ಸ್ವಾಮಿಗಳೇ, ಈ ಅಲ್ಪ ಕಾಣಿಕೆ ಸ್ವೀಕರಿಸಿರಿ. ಅಷ್ಟೇ ಅಲ್ಲ ಇನ್ನೂ ಎರಡು ದಿನ ಈ ಪಟ್ಟಣದಲ್ಲಿ ನಿಲ್ಲಿರಿ. ಕನಿಷ್ಟ ಸಾವಿರ ರೂಪಾಯಿಗಳನ್ನು ಪಟ್ಟೀ ಮಾಡಿ ನಿಮಗೆ ಕೊಡಿಸುತ್ತೇವೆ' ಎಂದರು.

ಸಾಕ್ಷಾತ್ ಲಕ್ಷ್ಮೀದೇವಿಗೆ ಮೂಗುಬಟ್ಟು ಕೊಡುತ್ತೇನೆಂದು ಯಾರೋ ಆಶೆ ಹಚ್ಚಿದರಂತೆ! ಧನಪತಿಯಾದ ಕುಬೇರನಿಗೆ ಒಂದು ಜೋಡಿ ಧೋತ್ರ ದಾನ ಕೊಡುತ್ತೇನೆಂದು ಭರವಸೆ ಕೊಟ್ಟರಂತೆ!! ಹಾಗಾಯಿತು ವಾರದ ಮಲ್ಲಪ್ಪನವರ ಪರಿಸ್ಥಿತಿ. ಜಗತ್ತಿನ ಆದಿ–ಮಧ್ಯ–ಅಂತ್ಯಗಳನ್ನೇ ಕೈಯಲ್ಲಿ ಹಿಡಿದು ಬೊಗರೆ ಆಡಿಸುವ ಶಿವಯೋಗಿಗೆ ಪಟ್ಟೀ ಮಾಡಿ ಹಣ ಕೊಡಿಸಿ ಕೊಡುವದೇ? ಆ ಮಾತಿಗೆ ಶಿವಯೋಗಿಗಳು ಸಿಟ್ಟಾಗಲಿಲ್ಲ. ಮೌನವಾಗಿಯೆ ನಿಷೇಧಿಸಿದರು. ಅಲ್ಲದೆ—

'ಮಲ್ಲಪ್ಪನವರೇ, ಈಗ ನಮ್ಮ ಪೂಜಾ ಪ್ರಸಾದಕ್ಕೆ ಶಿವ ಏನೂ ಕೊರತೆ ಮಾಡಿಲ್ಲ. ದಯವಿಟ್ಟು ಯಾವದೇ ಪಟ್ಟಿಯ ಹವ್ಯಾಸಕ್ಕೆ ಬೀಳಬೇಡಿರಿ. ಅಲ್ಲದೆ ಈ ನೂರು ರೂಪಾಯಿಯಾದರೂ ನಮಗೇಕೆ? ನಿಮ್ಮಲ್ಲೇ ಇರಲಿ' ಎಂದು ಆ ದಕ್ಷಿಣೆಯನ್ನು ಕೈಯಿಂದ ಕೂಡ ಮುಟ್ಟದೆ ಹೊರಳಿ ಕೊಟ್ಟರು.

ವಾರದ ಮಲ್ಲಪ್ಪನವರು ದಂಗಾಗಿ ಹೋದರು. ಅವರ ಮನೆಗೆ ವರ್ಷಂಪ್ರತಿ ಅನೇಕ ವಿರಕ್ತ ಸ್ವಾಮಿಗಳೂ ಪಟ್ಟದ ಸ್ವಾಮಿಗಳೂ ಒಂದೇ ಸವನೆ ಇರಿವೆಯ ಸಾಲಿನಂತೆ ದಯಮಾಡಿಸುತ್ತಲೇ ಇದ್ದರು. ಅನೇಕರು 'ಎಷ್ಟು ದಕ್ಷಿಣೆ ಕೊಡುತ್ತೀರಿ?' ಎಂದು ಕರಾರು ಮಾಡಿಕೊಂಡೆ ಬಂದವರಿದ್ದರು. 'ನಮಗೆ ಸಾವಿರದಾ ಒಂದು ಕೊಟ್ಟರೆ ಮಾತ್ರ ನಿಮ್ಮಲ್ಲಿ ಪಾದಪೂಜೆಗೆ ಬರುತ್ತೇವೆ. ಇಲ್ಲವಾದರೆ ಇಲ್ಲ'ವೆಂದು ಕರಾರುವಾಕ್ಕಾಗಿ ಬಂದವರು ಇದ್ದರು. ಊಟಕ್ಕೆ ಕುಳಿತರೆ ಗಂಟಲ ವರೆಗೂ ನಿಲುಕುವಷ್ಟು ಸುಖವಾದ ಸುಗ್ರಾಸ ಭೋಜನವನ್ನು ಉಂಡವರಿದ್ದರು. ಒಂದು ದಿನಕ್ಕೆಂದು ಬಂದು ತಿಂಗಳೊ

ಪ್ಪತ್ತು ತಳ ಊರಿ ಲಕ್ಷ್ಮ ಆಗಿ ಮರಳಿದವರೂ ಇದ್ದರು. ಆದರೆ ಇಂಥ ಮಹಾತ್ಯಾಗ ಮೂರ್ತಿಯಾದ ನಿರಾಶೆಯ ನಿರಂಜನ ಜಂಗಮ ಮೂರ್ತಿಯನ್ನು ಅವರು ಕಣ್ಣಾರೆ ಕಂಡದ್ದು ಇದೇ ಮೊದಲ ಸಲ. ಅದರಿಂದ ಬೆಕ್ಕಸಬೆರಗಾಗಿ ಹೋದರು. ಅಲ್ಲದೆ ಶ್ರೀಗಳ ಸ್ವಯಂಪಾಕದ ಕಠೋರ ವಿಧಾನವನ್ನು ಕಂಡು 'ವಿರಕ್ತ ತತ್ವ ನನಗೆ ಇಂದು ತಿಳಿಯಿತು' ಎಂದು ಮಲ್ಲಪ್ಪನವರು ಉದ್ಗಾರ ತೆಗೆದರು. ತಮ್ಮ ಪ್ರಪಂಚ ಶ್ರೀಮಂತಿಕೆಯನ್ನು ಕವಡೆಗೂ ಕೀಳಾಗಿ ಕಂಡ ಈ ಮಹಿಮಾನ್ವಿತನನ್ನು ನೋಡಿದ್ದೇ ತಮ್ಮ ಮಹಾ ಶ್ರೀಮಂತಿಕೆಯೆಂದು ಆ ದಂಪತಿಗಳು ಕೊಂಡಾಡಿದರು.

ಶ್ರೀಗಳ ಯಾತ್ರೆ ಸೊಲ್ಲಾಪುರದಿಂದ ಮುಂಬೈಗೆ ಸಾಗಿತು. ವಾರದ ಮಲ್ಲಪ್ಪನವರು ಮುಂಬೈಯ ಆಗರ್ಭ ಶ್ರೀಮಂತರಿಗೆಲ್ಲ ತಂತಿಕಳಿಸಿ ಶಿವ-ಯೋಗಿಗಳಿಗೆ ಸರ್ವವಿಧದಿಂದ ಸೇವೆಸಲ್ಲಿಸಲು ಸೂಚಿಸಿದರು.

ಆದರೆ ಈ ಸಮಯಕ್ಕಿಂತ ನಾಲ್ಕುದಿನ ಮುಂಚಿತವಾಗಿ ಮುಂಬೈಯಲ್ಲಿ ಅಪೂರ್ವ ಸಂದರ್ಭವೇ ಜರುಗಿಬಿಟ್ಟಿತ್ತು. ವಿಜಯಮಹಾಂತ ಶಿವಯೋಗಿ ಗಳ ವ್ಯಕ್ತಿತ್ವಕ್ಕೆ ಕಳಸವನ್ನೆ ಇಟ್ಟಂತೆ ಅಭೂತಪೂರ್ವ ಮುನ್ಸೂಚನೆ ಅಲ್ಲಿ ತೋರಿಬಿಟ್ಟಿತ್ತು ! ಕಲಕತ್ತೆಯ ಒಬ್ಬ ವಿಶ್ವವಿಖ್ಯಾತ ಜ್ಯೋತಿಷಿ, ಹೈದರಾ ಬಾದಿನ ನಿಜಾಮನು ಅವನಿಗೆ ತನ್ನ ರಾಜಧಾನಿಗೆ ಬರಲು ಆಮಂತ್ರಣ ಕೊಟ್ಟಿ ದ್ದನು. ಆ ಜ್ಯೋತಿಷಿಯು ಕಲಕತ್ತೆಯಿಂದ ಹೈದರಾಬಾದಿಗೆ ಹೋಗುವ-ಮುನ್ನ ಮುಂಬೈಯಲ್ಲಿ ತಂಗಿದ್ದನು. ಆಗ ಮುಂಬೈಯ ಪುರಪ್ರಮುಖರೆಲ್ಲ ಸೇರಿ ಆ ಜ್ಯೋತಿಷಿಗೆ ಒಂದು ಪ್ರಚಂಡ ಸತ್ಕಾರಕೂಟವನ್ನೇ ಏರ್ಪಡಿಸಲು ಸಿದ್ಧರಾದರು. ಆದರೆ ಅತ್ಯವಸರದಿಂದ ಹೈದರಾಬಾದಿಗೆ ಹೊರಟ ಆ ಜ್ಯೋತಿಷಿ ಅವರಿಗೆ ಹೇಳಿದ--

'ನಾನು ಈಗ ಬೇಗನೆ ಹೋಗಬೇಕಾಗಿದೆ. ನನ್ನನ್ನು ನಿಲ್ಲಿಸಬೇಡಿರಿ. ಅಲ್ಲದೆ ನೀವು ಸತ್ಕಾರ ಮಾಡುವದಾದರೆ ನನ್ನಂತ ಚಿಕ್ಕಮನುಷ್ಯನಿಗೇಕೆ ಮಾಡುತ್ತೀರಿ ? ಇನ್ನು ಐದು ದಿನಗಳಿಗೆ ಈ ಪಟ್ಟಣಕ್ಕೆ ಒಬ್ಬ ಮಹಾ ಶಿವಯೋಗಿಯೇ ಬರುವವನಿದ್ದಾನೆ. ಅವನಿಗೆ ಸತ್ಕಾರ ಮಾಡಿರಿ.'

ಮುಂಬೈ ಜನರು ವಿಸ್ಮಿತರಾಗಿ ಹೋದರು. ಅವರಲ್ಲಿ ಶೇಠ-ಸರದಾರ-ಜಮೀನದಾರ-ಖಾಲೋಪತಿ-ಕರೋಡೋಪತಿ ಮಹಾಶಯರೇ ತುಂಬಿದ್ದರು.

ಎಲ್ಲರೂ ಇದನ್ನು ಪರೀಕ್ಷೆ ಮಾಡಿಯೆಬಿಡಬೇಕೆಂದು ನಿಂತರು. ಮೂರುದಿನಗಳು ಜಾರಿದವು. ನಾಲ್ಕನೆಯ ದಿನ ಸಂಜೆ ಅವರಲ್ಲಿ ಅನೇಕರಿಗೆ ಸೊಲ್ಲಾಪುರದಿಂದ ವಾರದ ಮಲ್ಲಪ್ಪನವರಿಂದ ತಂತಿಸಮಾಚಾರ ಬಂದಿತು. "ನಾಳೆ ಸೊಲ್ಲಾಪುರದಿಂದ ರೈಲಿಗೆ ವಿಜಯಮಹಾಂತ ಶಿವಯೋಗಿ ಬರುತ್ತಾರೆ. ಅವರಿಗೆ ಪೂಜಾ-ಪ್ರಸಾದ-ವಸತಿ ವ್ಯವಸ್ಥೆ ಚನ್ನಾಗಿ ಆಗಬೇಕು. ಸ್ಟೇಶನ್ನಿಗೆ ಬರಬೇಕು. ಎಂದು ಆ ತಂತಿ ಆದೇಶ ಇತ್ತು. ಅದನ್ನು ಕಂಡು ಅವರೆಲ್ಲ ಕಲಕತ್ತೆಯ ಜ್ಯೋತಿಷಿಯ ಮಾತು ಸತ್ಯವಾಯಿತೆಂದು ಪರಮಾಶ್ಚರ್ಯಭರಿತರಾದರು. ಐದನೆಯ ದಿನ ಸಂಜೆ ಅವರೆಲ್ಲರೂ ರೈಲಿನ ಆಗಮನ ಸಮಯಕ್ಕೆ ಸರಿಯಾಗಿ ನಿಲ್ದಾಣಕ್ಕೆ ಸ್ವಾಗತಿಸಲು ಬಂದರು. ರೈಲು ಬಂತು. ನಿಂತಿತು. ಜನರೆಲ್ಲ ಇಳಿಯತೊಡಗಿದರು. ಇಳಿದರು. ಕೊನೆಗೆ ಮಹಾಶಿವಯೋಗಿಪುಂಗವನೊಬ್ಬ ಭಸ್ಮಧಾರಿಯಾಗಿ; ಲಿಂಗ-ರುದ್ರಾಕ್ಷಿ ಭೂಷಿತನಾಗಿ, ಸೂರ್ಯವರ್ಣ ಕಪನಿಯಲ್ಲಿ ಆಚ್ಛಾದಿತನಾಗಿ, ಬೆತ್ತಧಾರಿಯಾಗಿ ಕೆಳಗೆ ಇಳಿದ. ಕಲಕತ್ತೆಯ ಜ್ಯೋತಿಷಿ ಹೇಳಿದ್ದಕ್ಕಿಂತಲೂ ಹತ್ತುಪಟ್ಟು ಈ ಶಿವಯೋಗಿ ಸಿದ್ಧಪುರುಷನಾಗಿ, ಜಾಜ್ವಲ್ಯಮಾನನಾಗಿ ಶೋಭಿಸುತ್ತಾನೆಂದು ಅವರು ಸ್ಪಷ್ಟವಾಗಿ ಮನಗಂಡರು. ಎಲ್ಲರೂ ದರ್ಶನಾಶೀರ್ವಾದ ಪಡೆದು ತಮ್ಮ ತಮ್ಮ ಮನೆಗಳಿಗೆ ಆಮಂತ್ರಿಸಿದರು. ಅವರಲ್ಲಿ ನಿರ್ಮಲ ಭಕ್ತನೊಬ್ಬನ ಮನೆಗೆ ಶ್ರೀಗಳು ದಯಮಾಡಿಸಿದರು. ಶಿವಯೋಗಿಗಳ ಸಕಾಲಿಕ ವಿಶ್ರಾಂತಿಯ ನಂತರ ಅವರೆಲ್ಲರೂ ಬಂದು, ಭಕ್ತಿಯಿಂದ ಪೊಡಮಟ್ಟು, ತಾವು ಇಟ್ಟುಕೊಂಡ ಸತ್ಕಾರ ಸಮಾರಂಭಕ್ಕೆ ದಯಮಾಡಿಸಬೇಕೆಂದು ಅರಿಕೆ ಮಾಡಿಕೊಂಡರು. ಆದರೆ ಆ ಪುರಪ್ರಮುಖರೆಲ್ಲರ ಬೇಡಿಕೆಯನ್ನು ಶಿವಯೋಗಿಗಳು ಒಪ್ಪಲಿಲ್ಲ.

ಮುಂಬೈಯಲ್ಲಿ ಎಲ್ಲಿ ನೋಡಿದಲ್ಲೆಲ್ಲ ನಳದ ನೀರು. ಕೇವಲ ಮಜ್ಜನ ಬಾವಿಯ ಮಡಿನೀರಿನಿಂದ ಸ್ನಾನ-ಲಿಂಗಪೂಜೆ-ಪ್ರಸಾದಗಳನ್ನು ಪಾಲಿಸಿದ ಶಿವಯೋಗಿಗಳಿಗೆ ಆ ನೀರು ಹೇಗೆ ತಾನೆ ಸೇವ್ಯ ? ಎಲ್ಲಿಯೂ ಬಾವಿಗಳು ದೊರೆಯಲಿಲ್ಲ. ಶಿವನಿಚ್ಛೆಯೆಂದು ನಿಂತರು. ತ್ರಿಕಾಲ ಸ್ನಾನ ತಪ್ಪಿಹೋಯಿತು ! ಲಿಂಗಪೂಜೆ ನಿಂತಿತು !! ಪ್ರಸಾದ ಸೇವನೆ ಅಸ್ತು ಆಯಿತು !!! ಸಮಗ್ರ ಮೂರು ದಿನಗಳವರೆಗೆ ಸ್ನಾನ-ಪೂಜಾ ಪ್ರಸಾದಗಳಿಲ್ಲದೆ ಸಹನೆ

ಯಿಂದಲೆ ಉಳಿದರು. ಶಿವಯೋಗಿಗಳು ಒಂಪನ್ನುಳಿದರೆ ಮೂರನ್ನೂ ಪರಿತ್ಯಜಿಸಬೇಕೆಂದು ಸಂಕಲ್ಪಿಸಿದ್ದರು.

ಶಿವಯೋಗಿಗಳ ಈ ಕಠೋರ ನಿಯಮ ಪಾಲನೆಯ ರಹಸ್ಯವನ್ನು ಅರಿತು, ನಾಲ್ಕನೆಯ ದಿನ ಮುಂಬೈಯ ಪ್ರಮುಖ ಭಕ್ತರು, ತುಂಬ ಕಳ ವಳದಿಂದ, ಮಜ್ಜನ ಸಿದ್ಧತೆಗೆ ನಿಂತರು. ನಗರದ ವಾಳುಕೇಶ್ವರ ದೇವಸ್ಥಾನದ ಹತ್ತರ ಒರತೆಯ ಬಾವಿಯೊಂದನ್ನು ಆಗಿಸಿದರು. ಅಲ್ಲಿಯೆ ಇವರ ಸ್ನಾನ ಪೂಜಾದಿಗಳು ಸಾಂಗವಾಗಿ ಜರುಗಿದವು.

ಶ್ರೀಗಳು ಸಲಕ್ಷಣಯುಕ್ತವಾದ, ಕುದುರೆಯೊಂದನ್ನು ಖರೀದಿ ಮಾಡಿದರು. ಅದನ್ನು ಇಲಕಲ್ಲಿಗೆ ಮುಟ್ಟಿಸಲು ಇಬ್ಬರು ಭಕ್ತರನ್ನು ನಿಯ ಮಿಸಿದರು. ತಾವು ಯಥಾಪ್ರಕಾರ ಇಲಕಲ್ಲಿಗೆ ಮರುಪ್ರಯಾಣ ಬೆಳೆಸಿದರು.

ಈ ಮಹಾಯಾತ್ರೆಯಲ್ಲಿ— ಸೊಲ್ಲಾಪುರದ ವಾರದ ಮಲ್ಲಪ್ಪನವರು ನೀಡಿದ ದಕ್ಷಿಣೆಯ ತ್ಯಾಗ ಇವರ ನಿರಾಶಾವ್ರತವನ್ನೂ, ಮುಂಬಯಿಯಲ್ಲಿ ಮೂರು ದಿನ ಕೈಕೊಂಡ ಉಪವಾಸ ಇವರ ಆಚಾರವ್ರತವನ್ನೂ ಎತ್ತಿ ತೋರಿಸಿದರೆ, ಕಲಕತ್ತೆಯ ಮಹಾಜ್ಯೋತಿಷಿ ಹೇಳಿದ ದಿವ್ಯ ಮುನ್ಸೂಚನೆ ಇವರ ಮಹಾನ್ ವ್ಯಕ್ತಿತ್ವದ ಧ್ವಜವನ್ನು ಆಕಾಶದೆತ್ತರಕ್ಕೆ ಎತ್ತಿ ಲೋಕಕ್ಕೆ ಪ್ರಕಟಿಸಿತು !

# ತೇರಿನ ತಯ್ಯಾರಿ

ಶಿವಯೋಗಿಗಳು ಕಾರ್ಯಾರ್ಥವಾಗಿ ಕೆಲೂರ ಗ್ರಾಮಕ್ಕೆ ದಯಮಾಡಿಸಿದಾಗ ಒಂದು ಘಟನೆ ಜರುಗಿತು. ಆ ಗ್ರಾಮದ ಸದ್ಭಕ್ತರು ಈ ಮಹಾ ಶಿವಯೋಗಿಯಿಂದ ಕೊನೆಯವರೆಗೂ ನೆನಪುಳಿಯುವಂತಹ ಕಾರ್ಯವನ್ನು ಮಾಡಿಸಿಕೊಳ್ಳಬೇಕೆಂದು ಹಂಬಲಿಸಿ ಒಂದು ಬೇಡಿಕೆಯನ್ನು ಮುಂದಿಟ್ಟರು—

'ಅಪ್ಪಗಳೆ...........ನಮ್ಮೂರಿನ ಮಂಚಯ್ಯ ಸ್ವಾಮಿಗಳ ಜಾಗ್ರತ ಗದ್ದುಗೆಯ ಪ್ರಭಾವ ನಿಮಗೆ ಗೊತ್ತೇ ಇದೆ. ಯೋಗಿಗಳಾದ ನಿಮಗೆ ನಾವೇನು ಹೇಳಬಲ್ಲೆವು ? ಇಂಥ ಶ್ರೇಷ್ಠ ಕರ್ತೃಪೀಠವಿದ್ದರೂ ಜಾತ್ರೆಯ ವೈಭವವಿಲ್ಲ. ತೇರನ್ನು ಮಾಡಿಸುವ ಧಣಿಗಳು ದೊರೆತಿಲ್ಲ. ಈ ಕಾರ್ಯದಲ್ಲಿ ತಾವೇ ಕೈಹಾಕಿ ತೇರಿನ ಪಟ್ಟೀಮಾಡಿ ಕಟ್ಟಿಸಿಕೊಡಬೇಕು ?'

ಇಂಥ ಧಾರ್ಮಿಕ ಸೇವೆಯೆಂದರೆ ವಿಜಯಮಹಾಂತ ಶಿವಯೋಗಿಗಳಿಗೆ ಮೈಯುಬ್ಬುತ್ತಿತ್ತು. ಎಲ್ಲ ಸದ್ಭಕ್ತರನ್ನು ಸೇರಿಸಿಕೊಂಡು ಪಟ್ಟಿಗೆ ತಾವೆ ಸ್ವತಃ ಪಾದಚಾರಿಗಳಾಗಿ ಊರಲ್ಲಿ ನಡೆದರು. ಮೊದಲು ಲಕ್ಷ್ಮಿಪುತ್ರರ ಮನೆಗೇ ಹೋಗಬೇಕಲ್ಲವೆ ? ಇಂದ್ರನ ಅರಮನೆಗೆ ಸುಡುಗಾಡಿನ ಶಂಕರ ನಡೆದಂತೆ ಶಿವಯೋಗಿಗಳು ಕೆಲೂರ ನಾಡಗೌಡರ ಮನೆಗೇ ಮೊದಲು ನಡೆದರು. ಶಿವಯೋಗಿಗಳು ಒಂದು ಮಾತಾಡಿ ಎರಡು ಮಾಡುವವರಲ್ಲ. ಅವರ ವಾಣಿಯೆಂದರೆ ಖಂಡತುಂಡ. ಮೊದಲು ಸಾವಿರ ಕೇಳಿ ಆ ಮೇಲೆ ಐವತ್ತು ಇಸಕೊಳ್ಳುವ ವ್ಯವಹಾರ ಜಾಣಾಕ್ಷತನ ಅವರಿಂದ ದೂರ. ಅವರ ಮಾತು ಯಾವಾಗಲೂ ಒಂದೇ. ನಾಡಗೌಡನಿಗೆ ತಾವು ಬಿಜಯಂಗೈದ ಕಾರ್ಯಾರ್ಥವನ್ನು ಬಿನ್ನವಿಸಿ ಐದುನೂರು ರೂಪಾಯಿಗಳನ್ನು ಕೊಡಲು ಹೇಳಿದರು, ಕಾಸಿಗೆ ಕೈತೊಳೆವ ಸಾವುಕಾರ ಐನೂರು ಎಂದರೆ ಐವತ್ತು ಮೊಳ ಹಾರಿಬಿದ್ದ! ಯಾಸಿಯಿಂದಲೇ ಉತ್ತರಿಸಿದ —

'ಇದೇನು ಊರಿನ ಜಾತ್ರಿ ನಾವೇ ಮಾಡಬೇಕಂತಿರೇನು? ಈ ಊರಲ್ಲಿ ಇನ್ನೂ ದುಡ್ಡಿದ್ದವರು ತುಂಬಿದ್ದಾರೆ. ಅವರಿಗೆ ಕೇಳಿರಿ ಮೊದಲು, ಆ ಮೇಲೆ ನಮ್ಮ ಯೋಗ್ಯತಾನುಸಾರ ಕೊಟ್ಟೇವು. ಅಂಕಿ ಹೇಳಬೇಡಿರಿ'

ಸ್ವಾಮಿಗಳು ಹೇಳಿದರು—

'ನೀನು ಊರಿನ ನಾಡಗೌಡ. ನಿನ್ನಿಂದಲೇ ಪಟ್ಟಿ ಸುರುವಾಗದೆ ಯಾವು ದಾದರೂ ತಟ್ಟಿಯಿಂದ ಸುರುವಾಗಬೇಕೆ ? ಇದು ಧರ್ಮಕಾರ್ಯವಿದೆ. ಶಿವನು ನಿನಗೆ ಕೊಟ್ಟಿದ್ದಾನೆಂದು ನಾವು ಬಾಯ್ಬಿಟ್ಟಿದ್ದೇವೆ. ಸುಮ್ಮನೆ ಕೊಟ್ಟುಬಿಡು ಮಾತು ಬೆಳೆಸಬೇಡ'

ನಾಡಗೌಡ ಈ ಮಾತಿಗೆ ತನ್ನ ನಾಡಗೌಡಿಕೆಯನ್ನು ತೋರಿಸಿಯೇ ಬಿಟ್ಟ. ಕಂಠ ಎತ್ತರಿಸಿ ಖಾರವಾಗಿಯೇ ಹೇಳಿದ—

'ಇದೇನು ನಮ್ಮ ಮೇಲೆಯೇ ಜಬರ್ದಸ್ತಿ ಮಾಡಲಿಕ್ಕೆ ಬಂದಂತೆ ಕಾಣು ತ್ತದೆ ನೀವು. ಈ ವರೆಗೆ ನಮ್ಮ ಹತ್ತಿರ ಪಟ್ಟಿ ಕೇಳಲು ಬಂದವರು ಈ ರೀತಿ ಹೆದರಿಸಿ ಕೇಳಿಲ್ಲ. ನಾವು ಚಲ್ಲಿದಷ್ಟು ತೊಗೊಂಡು ಹೋದರು. ಆದ್ರೂ ಬಂದೀರಿ ಅಂತ ಹೇಳಿ ನೂರು ರೂಪಾಯಿ ಕೊಡತೀನಿ. ಮನಸ್ಸಿದ್ರ ತೊಗೊಳ್ಳ ಬಹುದು' ಎಂದ.

ಶಿವಯೋಗಿಗಳು ಮಾರುತ್ತರ ನೀಡಲಿಲ್ಲ. ಇದು ವಿಷ ಸಮಾನವೆಂದು ತಿಳಿದು ಮೆಲ್ಲನೆ ಎದ್ದುಬಿಟ್ಟರು. ಭಕ್ತರೂ ಅಲ್ಲಿಂದ ಕಾಲುಕಿತ್ತರು. ನಾಡ ಗೌಡ ಅವರನ್ನು ಹೊರಳಿ ಕರೆದರೆ ತನ್ನ ದೊಡ್ಡಸ್ತಿಕೆಗೆ ಅಪಮಾನವೆಂದು ನೆಡವಿನಿಂದಲೆ ಕುಳಿತು.

ಶಿವಯೋಗಿಗಳು ನಾಡಗೌಡನ ಮನೆಯ ಹೊರಬಾಗಿಲಿಗೆ ಬಂದು ಹೊರಳಿ ನೋಡಿದರು. ಆ ಬಾಗಿಲಿನ ಕಮಾನಿನಲ್ಲಿ ಎರಡೂ ಪಕ್ಕಗಳಲ್ಲಿ ಅತ್ಯಂತ ಸುಂದರವಾಗಿ ನಾಜೂಕಾಗಿ ಕೊರೆದು ಮಾಡಿದ ಸುಳುವುಗಳನ್ನು ನೋಡಿ ಸಹಜವಾಗಿ ಉದ್ಗಾರ ತೆಗೆದರು ..

'ಅರೆ ! ಇದು ಲಿಂಗವಂತ ನಾಡಗೌಡನ ಮನೆಯೆಂದು ನಾವು ತಿಳಿದು ಬಂದೆವು. ಈ ಮನೆ ಮಸೀದಿಯಂತಿದೆಯಲ್ಲಾ !'

ಮುಗಿದೇ ಹೋಯಿತು. ಶಿವಯೋಗಿಗಳ ಮಾತು ಸುಳ್ಳಾದೀತೆ ? ಅವರು ತೇರಿನ ಹಣ ಕೂಡಿಸಿ ಭಕ್ತರಿಗೆ ಕೊಟ್ಟು ಅತ್ತ ಚಿತ್ತರಗಿಗೆ ದಯ ಮಾಡಿಸಿಬಿಟ್ಟರು. ಇತ್ತ ಅವರು ಆಡಿದ ವಾಕ್ಯ ವ್ಯಾಕರಣದ ನಿಯಮದಂತೆ ನಡದೇ ಬಿಟ್ಟಿತು. ನಾಡಗೌಡನ ಮಗ ಸತ್ತುಹೋದ. ನಾಡಗೌಡ ಅಪುತ್ರ ಕನಾದ. ಎರಡೇ ತಿಂಗಳಲ್ಲಿ ಮನೆ ಮಸೀದೆಯಂತೆ ರಾವುಹೊಡೆಯಹತ್ತಿತು. ಆತನ ಆಸ್ತಿ ದಾಯಾದಿಗಳ ಕೈಸೇರಿತು.

# ಪರಧರ್ಮೋ ಭಯಾವಹಃ

'ನಂಬಿದ ಹೆಂಡತಿಗೆ ಗಂಡನೊಬ್ಬ ಕಾಣಿರೊ, ನಂಬಬಲ್ಲ ಭಕ್ತರಿಗೆ ದೇವನೊಬ್ಬ ಕಾಣಿರೊ, ಮತ್ತೊಂದಕ್ಕೆರಗಿದರೆ ಕಿವಿಮೂಗ ಕೊಯ್ವ....'—ಎಂಥ ಅಮರವಾಣಿ! 'ಅಪ್ಪನವರ' ಅಮೃತವಾಣಿ!!

'ಅಪ್ಪಗಳ' ಜಂಗಮ ಧರ್ಮವನ್ನು ರೋಮರೋಮದಲ್ಲಿಯೂ ಪ್ರತಿಷ್ಠಾಪಿಸಿಕೊಂಡ ಶಿವಯೋಗಿಗಳು ಒಂದು ಸಲ ಹಿರಿಯಬಾದವಾಡಿಗೆಗೆ ದಯಮಾಡಿಸಿದರು. ಅಲ್ಲಿ ಮೊಹರಂ ಹಬ್ಬದ ಮಹಾ ಸಂಭ್ರಮ ಜರುಗಿತ್ತು. ಅಲಾವಿ ಆಟವು ಭರ್ಜರಿ ಸಾಗಿತ್ತು. ಆದರೆ ಆ ಆಟದಲ್ಲಿ ಭಾಗಿಗಳಾದವರೆಲ್ಲರೂ ಲಿಂಗವಂತರೆ, ಮಠದ ಸದ್ಭಕ್ತರೇ ಆಗಿದ್ದರು. ಸ್ವಾಮಿಗಳು ಈ ಕುಲಮೌಢ್ಯವನ್ನು ಕಂಡು ಕೆಂಡವಾದರು. ಊರಿಗೆ ಅನೇಕರನ್ನು ಕರೆದು—

'ನೀವು ಶಿವಭಕ್ತರಿದ್ದೀರಿ, ಇಷ್ಟಲಿಂಗಧಾರಿಗಳಾಗಿದ್ದೀರಿ. ಇದು ನಿಮಗೆ ಸಲ್ಲದು!' ಎಂದು ಸದ್ಬೋಧೆ ಮಾಡಿದರು, ಆದರೆ ಆ ಜನರು ಬಹು ಕೌಶಲ್ಯದಿಂದಲೆ ಉತ್ತರ ಕೊಟ್ಟರು—

'ಸ್ವಾಮಿಗಳೆ, ತಾವು ಹೇಳುವದೆಲ್ಲಾ ಸರಿ. ಆದರೆ ನಮ್ಮ ಗ್ರಾಮದ ಗೌಡನಾದ ಬಸವಣ್ಣಗೌಡನ ಮಗ ಗುರುವನಗೌಡನೇ ನೇಮದಿಂದ ಅಲಾವಿ ಆಡುತ್ತಾನೆ. ಅದು ಅವನ ಮೊಹರಂ ವ್ರತವೇ ಆಗಿದೆ. ಆತ ಆಡಿದ ಮೇಲೆ ನಾವು ಆಡುವದೇನು ಮಹಾ ? ಮೊದಲು ಅವನನ್ನು ಬಿಡಿಸಿರಿ. ಆ ಮೇಲೆ ನಾವು ಬಿಟ್ಟೇ ಬಿಟ್ಟೇವು ! '

ಆ ಮಾತು ಸರಿಯೆನಿಸಿ ಸ್ವಾಮಿಗಳು ಮೊದಲು ಬಸವಣ್ಣಗೌಡನನ್ನು ಕರೆದು ಪರಿಪರಿಯಾಗಿ ತಿಳಿಹೇಳಿದರು. ವೀರಶೈವ ಧರ್ಮದ ಪಂಚಾಚಾರದ ಪವಿತ್ರ ನೀತಿಯನ್ನು ಬೋಧಿಸಿದರು. ಸ್ವಾಮಿಗಳ ಮಾತಿಗೆ ಬಸವಣ್ಣಗೌಡ ಒಪ್ಪಿ ಅದೇ ಸ್ಥಳಕ್ಕೆ ಮಗ ಗುರುವನಗೌಡನನ್ನು ಕರೆಸಿದ, ಸ್ವಾಮಿಗಳು ಗುರುವನಗೌಡನಿಗೆ ಧರ್ಮ ಸೂಕ್ಷ್ಮವನ್ನು ಅರುಹಿ ಯಥಾರ್ಥ ಜ್ಞಾನವನ್ನು ಬೋಧಿಸಿದರು. ಇನ್ನು ಅಲಾವಿ ಆಡಕೂಡದೆಂದು ಕಟ್ಟಪ್ಪಣೆ ಮಾಡಿದರು. ಆದರೆ ಮಂಗನಿಗೆ ಸೆರೆ ಕುಡಿಸಿ ಮೇಲೆ ಚೇಳು ಕಡಿಸಿದಂತೆ ಚಂಚಲಮತಿಯಾದ ಗುರುವನಗೌಡ ಈ ಮಾತಿಗೆ ಒಡಂಬಡಲಿಲ್ಲ. ಅಲ್ಲದೆ ಮೊಹರಂ ಹಬ್ಬದ

ಮದ್ಯಪಾನ ಹೊಟ್ಟೆಯ ಒಳಗೆ ತನ್ನ ನಿಶಾಸುಂದರಿಯನ್ನು ಬಲವಾಗಿ ಅಪ್ಪಿ ಮಲಗಿತ್ತು! ಆತ ಸೆಡವಿನಿಂದಲೆ ಉತ್ತರಿಸಿ—

'ಸ್ವಾಮಿಗಳೆ.... ಅಲಾವಿ ಆಡುವದು ನನ್ನ ವ್ರತ ಇದೆ. ನೀವು ಲಿಂಗ ಪೂಜೆ ಹೇಗೆ ಮಾಡುತ್ತೀರೊ ಹಾಗೆ ಅದು ನನ್ನ ಲಿಂಗಪೂಜೆಯೆಂದು ತಿಳಿದು ಕೊಳ್ಳಿರಿ. ಅದನ್ನು ಬಿಡುವದು ಸಾಧ್ಯವೇ ಇಲ್ಲ. ಹೋಗಲಿ ನಾನು ಅಲಾವಿ ಆಡಿದರೆ ನಿಮ್ಮ ಗಂಟೇನು ಹೋಲಾಗುತ್ತದೆಯೆ? ನಾನೇನಾದರೂ ಅಲಾವಿ ಆಡಲು ನಿಮ್ಮನ್ನು ಕರೆದಿದ್ದೇನೆಯೆ? ನನ್ನಷ್ಟಕ್ಕೆ ನಾನು ಆಡಿದರೆ ನಿಮಗೇಕೆ ಸಂಕಟ?

ಸ್ವಾಮಿಗಳು ತುಟಿಮಿಸುಗಲಿಲ್ಲ,ಬಸವಣ್ಣಗೌಡ ತಲೆಬಾಗಿಕುಳಿತುಬಿಟ್ಟ. ಗುರುವನಗೌಡ ನಮಸ್ಕಾರ ಸಹ ಮಾಡದೆ ಮತ್ತೆ ಮೊಹರಂ ಮೋಜಿಗೆ ನಡೆದುಬಿಟ್ಟ.

ಬಸವಣ್ಣಗೌಡ ಸ್ವಾಮಿಗಳೆದುರು ಪಶ್ಚಾತ್ತಾಪದಿಂದ ತನ್ನ ಮಗನನ್ನೇ ಬಯ್ದು. 'ಆತ ನನ್ನ ಮಾತು ಕೇಳೋದಿಲ್ಲ ಬುದ್ಧೀ' ಎಂದು ಕಂಬನಿಸುರಿಸಿದ. ಅದಕ್ಕೆ ಸ್ವಾಮಿಗಳು—

'ಹೋಗಲಿಬಿಡು. ನಿನ್ನ ಮಾತನ್ನು ಕೇಳುವದಿಲ್ಲವೆಂದ ಮೇಲೆ ಅವ ನಿನ್ನ ಮಗನಲ್ಲ. ಆತನಿಗೆ ಇನ್ನು ಮೇಲೆ ಯಾರೂ ಉಪದೇಶ ಮಾಡದಂತೆ ಆಗಲಿ' ಎಂದರು.

ಶಿವಯೋಗಿಯ ಮಾತು ಮಂತ್ರವಾಯಿತು. ಮಂತ್ರ ಸೂತ್ರವಾಯಿತು. ಸೂತ್ರ ಸತ್ಯವಾಯಿತು. ಅಂದೇ ಒಂದು ದೊಡ್ಡ ಕಟ್ಟಿಗೆಯ ಕೊರಡು ಗುರುವನಗೌಡನ ಕಾಲಮೇಲೆ ಬಿದ್ದು, ನರಮಂಡಲ ಹರಿದು, ಶೆಟೆಯು ಕೂಡಿ ಮರುದಿನವೇ ಪ್ರಾಣಬಿಟ್ಟ! ಮೊಹರಂ ಡೋಲಿಯೊಂದಿಗೆ ಇವನ ಸಿದಿಗೆಯ ಸವಾರಿಯೂ ಸಾಗಿತು !!

ಆ ಊರ ಜನ ಅಂದಿನಿಂದ ಸತ್ಯ ಸದಾಚಾರಪ್ರತಿಗಳಾದರು. ವೀರಶೈವರ ಪ್ರಾಣದ ಪ್ರಾಣವಾದ-ಸದಾಚಾರ, ಶಿವಾಚಾರ, ಲಿಂಗಾಚಾರ, ಗಣಾಚಾರ, ಭೃತ್ಯಾಚಾರಗಳೆಂಬ ಪಂಚಾಚಾರಗಳು ಅವರ ಉಸಿರಾದವು.

# ಮೊದಲು ಮಳೆ, ಆಮೇಲೆ ಗಣಾರಾಧನೆ

ಒಮ್ಮೆ ಮಳೆರಾಜನ ಕರುಣೆ ಇಲ್ಲದೆ ಕುಷ್ಟಗಿಯ ನಾಡು ಸ್ಮಶಾನದಂತೆ ಬಿಕೋ ಎನ್ನುತ್ತಿದೆ. ನೆಲ ಗಚ್ಚಾಗಿದೆ. ಹೊಲ ಹಂಚಾಗಿದೆ. ಆಕಾಶವೆಲ್ಲ ಬೇಸಿಗೆಯ ಬೇತಾಳವಾಗಿದೆ. ಗಾಳಿಯಂತೂ ಔಷಧಕ್ಕೂ ಇಲ್ಲ, ಅಪ್ಪಿ-ತಪ್ಪಿಯೂ ಜೂರು ಮೋಡ ಆ ನಾಡಿಗೆ ಸುಳಿಯಲಿಲ್ಲ.

ಮಳೆರಾಜನೂ ಒಬ್ಬ ಮಹಾಜಂಗಮನೆ ಅಲ್ಲವೇ? ಆತನ ಕರುಣೆ ತಪ್ಪಿದರೆ ಹೊಟ್ಟೆ ಬೆನ್ನಾಗುತ್ತದೆ. ತಲೆ ಪರಟೆಯಾಗುತ್ತದೆ. ಕಣ್ಣು ಕುಳಿಯಾಗುತ್ತವೆ. ಅಂತೆಯೆ ಕುಷ್ಟಗಿಯ ಸದ್ಭಕ್ತರು ಮಹಾಗಣಾರಾಧನೆಗೆ ಧವಸ ಧಾನ್ಯಗಳನ್ನು ಕೂಡಿಸಹತ್ತಿದರು. ಕಡಲೀಬೇಳೆ–ಬೆಲ್ಲ–ಗೋದಿ–ಅಕ್ಕಿ–ಸಾಂಬಾರ ದೀನಸು–ಹಾಲು–ತುಪ್ಪಗಳನ್ನು ಮಠದಲ್ಲಿ ಸಂಗ್ರಹಿಸಹತ್ತಿದರು. ಅದೇ ಸಮಯಕ್ಕೆ ಶಿವಯೋಗಿಗಳು ಕುಷ್ಟಗಿಯ ತಮ್ಮ ಮಠಕ್ಕೆ ಆಕಸ್ಮಿಕವಾಗಿ ದಯಮಾಡಿಸಿದರು. ತಮ್ಮ ಭಕ್ತಮಂಡಲಿಯೆಲ್ಲ ಮಹಾಗಣಾರಾಧನೆಗೆ ನಿರತರಾದ ಸಂಗತಿ ತಿಳಿದು ಅಡಿಯಿಂದ ಮುಡಿಯ ವರೆಗೆ ಶ್ರೀಗಳು ಕರಗಿಹೋದರು. ಸಂಜೆಯ ಇಳಿಹೊತ್ತಿನಲ್ಲಿ ಭಕ್ತರನ್ನೆಲ್ಲಾ ಬರಮಾಡಿಕೊಂಡು ಹೇಳಿದರು—

'ಮಠದ ಅಂಗಳದಲ್ಲಿ ಕಾಳು–ಕಡಿ–ಕಟ್ಟಿಗೆ–ಸೌದೆ–ಕುಳ್ಳು ಇಡಬ್ಯಾಡ್ರೆಪಾ. ನಿಮ್ಮ ನಿಮ್ಮ ಮನೆಗಳ ದನಕರಗಳನ್ನು ಮನೆಯಲ್ಲೇ ಕಟ್ಟಿರಿ. ಮೇಯಲು ಬಿಡಬೇಡಿರಿ. ಹೊಲಕ್ಕೆ ಯಾರೂ ಮಲಗಲಿಕ್ಕೆ ಹೋಗಬೇಡಿರಿ. ಇಂದು ರಾತ್ರಿ ಮಳೆರಾಜ ಬರುತ್ತಾನೆ' ಎಂದರು.

ಭಕ್ತರಿಗೆಲ್ಲ ಈ ಮಾತು ವಿಚಿತ್ರವೆನಿಸಿತು. ಆಕಾಶದಲ್ಲಿ ತುಂಡುಮೋಡವಿಲ್ಲ. ಮಳೆಯ ಮುನ್ಸೂಚನೆ ಇಲ್ಲ. ತಂಗಾಳಿ ಇಲ್ಲ. ಮಳೆ ಎಂತು ಬಂದೀತೆಂದು ಸಂಶಯಪಟ್ಟರು. ಆದರೂ ಶಿವಯೋಗಿಗಳ ಅಪ್ಪಣೆ ಮೀರುವದು ತಪ್ಪಾದೀತೆಂದು ಅಂಗಳದಲ್ಲಿಯ ವಸ್ತುಗಳನ್ನು ಮಠದ ಒಳಗಡೆಗೆ ತಂದು ಕೂಡಿಸಿದರು.

ರಾತ್ರಿ ಉಂಡುಮಲಗುವ ಸಮಯ. ಎಲ್ಲಿಂದ ಬಂತೊ ಏನೋ ! ಭಾರಿ ಪ್ರಮಾಣದ ಮಳೆ ಬಂದಿತು.

ಮುಂಜಾನೆ ಮಳೆ ನಿಂತಿತು. ಸೃಷ್ಟಿಸುಂದರಿ ವೈಯಾರದಿಂದ ಸೂರ್ಯನ ಎಳೆಗಿರಣಗಳಿಗೆ ಮೈ ಚಾಚಿದಳು. ಹಕ್ಕಿಗಳು ಹಾಡಿದವು.

ಕುಷ್ಟಗಿಯ ಸದ್ಭಕ್ತರು ರೊಯ್ಯನೆ ಮಠಕ್ಕೆ ಓಡಿಬಂದು ಶಿವಯೋಗಿಗಳಿಗೆ ಸಾಷ್ಟಾಂಗ ಹಾಕಿದರು. ಅವರ ಅಮರವಾಣಿಯ ಸತ್ಯಸಂಧತೆಯಲ್ಲಿ ತೇಲಾಡಿದರು. ಈಜಾಡಿದರು. ಮುಳುಗಾಡಿದರು.

ಸ್ವಾಮಿಗಳ ಅಪ್ಪಣೆಯಂತೆ ಆ ದಿವಸ ಗಣಾರಾಧನೆ. ಭಾರಿ ವೈಭವದಿಂದಲೇ ನೆರವೇರಿತು. ಗಣಾರಾಧನೆಯಾದ ಮೇಲೆ ಮಳೆ ಬರುವುದು ವಾಡಿಕೆಯಲ್ಲವೆ ? ಆದರೆ ಶಿವಯೋಗಿಯ ಕೃಪೆಯಿಂದ ಮೊದಲೆ ಮಳೆ ಬಂದು ಆ ಮೇಲೆ ಗಣಾರಾಧನೆ ಜರುಗಿತು !

# ಅತ್ಯಾಶೆ ಗತಿಗೇಡು

ಕೊಡಗಲಿಯ ದೇಸಾಯಿಣಿಯ ಹೆಸರು ರತ್ನಾಬಾಯಿ. ಹೆಸರಿನಂತೆಯೇ ಶ್ರೀಮಂತ ಶಿರೋಮಣಿಯಾಗಿದ್ದಳು. ರತ್ನಾಬಾಯಿ ಸುಶೀಲೆ, ಲಿಂಗಾರ್ಚನಾ ಲೋಲೆ. ತಾನು ತನ್ನ ಮನೆತನದ ಜವಾಬ್ದಾರಿಯುತವಾದ ಏನೇ ಕಾರ್ಯ ಗಳನ್ನು ಮಾಡಲಿ ಶ್ರೀಗಳ ಅಪ್ಪಣೆ ಇಲ್ಲದೆ ಮಾಡುತ್ತಿರಲಿಲ್ಲ.

ಆದರೂ ಹತ್ತರಲ್ಲಿ ಒಂದು ಸೇರಿ ಹನ್ನೊಂದಾದಂತೆ ಒಂದು ವಿಚಿತ್ರ ಆಶೆಗೆ ಮರುಳಾದಳು. ಇದ್ದುದರಲ್ಲಿ ತಿಂದುಂಡು ಸುಖಬಡುವ ಬದಲು ಮಹಾ ಆಶೆಗೆ ಜೋತುಬಿದ್ದಳು. ಇಲಕಲ್ಲಿನಲ್ಲಿ ಒಂದು ಭಾರೀ ಪ್ರಮಾಣದ ಅಂಗಡಿಯನ್ನೇ ಆರಂಭಿಸಿದಳು. ಕೆಡುಗಾಲಕ್ಕೆ ಕೇಡಿನ ಬುದ್ಧಿಯೆಂಬಂತೆ, ಅಂಗಡಿ ಆರಂಭಿಸುವ ಬಗ್ಗೆ ಶಿವಯೋಗಿಗಳ ಮುಂದೆ ಚಕಾರ ಎತ್ತದೆ ಸುರುವು ಮಾಡಿಬಿಟ್ಟಳು. ಸ್ವಾಮಿಗಳು ಕೊಡುಗಲಿಗೆ ದಯಮಾಡಿಸಿದಾಗ ರತ್ನಾಬಾಯಿ ಮನೆಗೆ ಬಂದು, ಅವಳ ಹುಚ್ಚುತನಕ್ಕೆ ನಕ್ಕು ಹೇಳಿದರು— 'ತಾಯಿ, ಈ ಜಂಜಾಟದ ಕೆಲಸ ಯಾಕೆ ಮೇಲೆ ಹಾಕಿಕೊಂಡೆ. ನಿನಗೇನು ಕಡಿಮೆ ಇತ್ತು. ಅದು ನಿನ್ನ ಯೋಗ್ಯತೆಗೆ ತಕ್ಕದ್ದೂ ಅಲ್ಲ. ಪುಣ್ಯವತಿಯಾದ ನಿನಗೆ ಕೊರತೆ ಯಾದರೂ ಏನಿದೆ? ಹುಚ್ಚಳಂತೆ ಮಾಡಬೇಡ, ಆ ಅಂಗಡಿ ಉಸಾಬರಿ ಇನ್ನು ಸಾಕು ಮಾಡು.'

ರತ್ನಾಬಾಯಿಗೆ ಉಸಿರು ಕಟ್ಟಿದಂತಾಯಿತು. ತನ್ನ ವ್ಯವಹಾರ ಕೌಶಲ್ಯ ವನ್ನು ಹೊರತೆಗೆದು ಹೇಳಿದಳು—

'ಅಪ್ಪಾಜಿ, ನೀನೆಲ್ಲ ಹೇಳುವದು ಖರೇ ಇದೆ, ಆದರೆ ತಿಳಿಯದೆ ಈಗ ಅಂಗಡಿ ತೆಗೆದುಬಿಟ್ಟಿದ್ದೇನೆ. ಈಗ ಹೊರಳಿ ಮುಚ್ಚಿದರೆ ಜನರು ಚಪ್ಪಾಳೆ ತಟ್ಟಿ ನಗುವದಿಲ್ಲವೆ? ನಾಲ್ಕು ದಿನಾ ಕಾರಭಾರ ಮಾಡಿ ಐದನೆ ದಿನಾ ಕೆಳಗೆ ಇಳದ್ಲು ಅಂತ ಬುದ್ಧಿಗೇಡಿಗಳು ಹಾರಾಡತಾವೆ. ಇರಲಿ ಬಿಡಲಿ. ನಿಮ್ಮ ಹೆಸರು ಹೇಳಿ ಸಾಗುತ್ತೇನೆ' ಎಂದು ಶಿವಯೋಗಿಯ ಬಾಯನ್ನೇ ಬಡಿದು ಬಿಟ್ಟಳು.

ವಿಜಯ ಮಹಾಂತ ಶಿವಯೋಗಿಗಳು ಹತ್ತು ಆಡಿ ಸೋಲುವವರಲ್ಲ. ಒಂದು ಆಡಿ ಗೆಲ್ಲುವವರು. ಒಂದು ಕಾಲಕ್ಕೆ ಒಂದು ಹೇಳಿ ಮತ್ತೊಂದು

ಕಾಲಕ್ಕೆ ಮತ್ತೊಂದನ್ನು ಸಾಧಿಸುವ ಅನುಕೂಲವಾದಿ ತರ್ಕಪಂಡಿತರು ಅವರಲ್ಲ. ರತ್ನಾಬಾಯಿ ಮಾತಿಗೆ ಮೌನವನ್ನು ಹೇಳಿ ಮತಕ್ಕೆ ವಯುವಾಡಿಸಿ ಬಿಟ್ಟರು.

ವರ್ಷ ಕೂಡಾ ಕಳೆದಿರಲಿಲ್ಲ. ದುಡ್ಡಿನ ವ್ಯವಹಾರ ಕಾರಕೂನರ ಕೈಯಲ್ಲಿ ಮೇಲಾಯಿತು. ಮೇಲೆ ಬಣ್ಣ ಬಣ್ಣ ತೋರಿ ಒಳಗೊಳಗೆ ಬರಿದಾಗ ಹತ್ತಿತು. ಕಾಳು ಹೋಗಿ ತೌಡು ಉಳಿದಂತೆ ಅಂಗಡಿಯೊಂದೆ ಬಟಾಬಯು ಲಾಗಿ ನಿಂತಿತು. ಮತ್ತೇನು ಕೇಳುವದು. ಒಂದು ದೀಪಾವಳಿಗೆ ದೀಪ ಹತ್ತಿ ದರೆ ಇನ್ನೊಂದು ದೀಪಾವಳಿಗೆ ದಿವಾಳಿ ಆಯಿತು ಮೂಲ ಗಂಟು ಕರಗಿ ಹೋಗಿ ಮೂವತ್ತು ಸಾವಿರ ರೂಪಾಯಿ ಸಾಲ ಪಲೆಯು ಮೇಲೆ ಕುಳಿತಿತು. ಈಗ ಮಾತ್ರ ರತ್ನಾಬಾಯಿ ಜನರು ಹಾಸ್ಯ ಮಾಡಿಯಾರು, ಚಪ್ಪಾಳಿ ತಟ್ಟಿ ಕುಣಿದಾರು ಎಂದು ವಿಚಾರಿಸಲಿಲ್ಲ. ತನ್ನ ಮೂರ್ಖತೆಗೆ ತಾನೇ ಬಯ್ದು ಕೊಂಡು ಅಂಗಡಿಗೆ ಹೊರಗೀಲಿ ಹಾಕಿಬಿಟ್ಟಳು. ಹಳ್ಳಿಯ ಜನವೆಂದರೆ ಕೇಳ ಬೇಕೆ? — 'ಶಿವಯೋಗಿಗಳು ಹೇಳಿದರೂ ಕೇಳದೆ ತನ್ನದೆ ನಡೆಸಿ ಗಾಸಿಯಾ ದಳು' ಎಂದು ಸಡಗರದಿಂದಲೆ ಮಾತಾಡಿದರು.

# ಮದ್ದಾನಿ ಮದ್ದಾನಿಯೇ ಆದ !

ಹುನಗುಂದದ ಬಸಪ್ಪನಿಗೆ ಅರವತ್ತು ಮುಟ್ಟಿದರೂ ಸಂತಾನ ಪ್ರಾಪ್ತಿಯಾಗಿರಲಿಲ್ಲ. ಆದರೆ ವೃದ್ಧಾಪ್ಯದಲ್ಲಿ ಆತನಿಗೆ ಆಕಸ್ಮಿಕವಾಗಿ ಒಬ್ಬ ಸುಂದರ ಪುತ್ರರತ್ನ ಜನಿಸಿದನು. ಬಸಪ್ಪನು ಆನಂದಕ್ಕೆ ಊರಿನ ತುಂಬ ಘೇಡೆ ಹಂಚಿದ. ಬಂದವರಿಗೆ ಹೋದವರಿಗೆ ಮೃಷ್ಟಾನ್ನ ಉಣಿಸಿದ. ಮಠಕ್ಕೆ ಬಂದು ಶ್ರೀಗಳ ಚರಣಾರವಿಂದದಲ್ಲಿ ಸಾಷ್ಟಾಂಗ ಹಾಕಿ ಹೇಳಿದ—

'ಬುದ್ಧೀ.........ನನ್ನ ಮಗನಿಗೆ ನಮ್ಮ ಮನೆತನದ ಗುರುಗಳಾದ ಮದ್ದಾನೆಪ್ಪನವರ ಹೆಸರು ಇಡಬೇಕೆಂದು ಮಾಡಿದ್ದೇನೆ. ಅಪ್ಪಣೆಯಾಗಬೇಕು.'

ಈ ಮಾತು ಕೇಳಿ ಸ್ವಾಮಿಗಳು ಒಂದು ನಿಮಿಷ ಆತ್ಮಾವಲೋಕನ ಮಾಡಿಕೊಂಡು, ನಸುನಕ್ಕು ಹೇಳಿದರು—

'ಬಸಪ್ಪ, ಮದ್ದಾನೆಪ್ಪನವರು ದೊಡ್ಡ ಶರಣರು. ಅವರ ಹೆಸರನ್ನು ನಿನ್ನ ಮಗನಿಗಿಟ್ಟು ಅಪಮಾನ ಮಾಡಬೇಡ. ಮದ್ದಾನಿಯೆಂದು ನೀನು ಹೆಸರಿಟ್ಟರೆ ನಿನ್ನ ಮಗ ಮದ್ದಾನಿಯಾಗಿಯೇ ಹೋದಾನು. ಬೇಡಪ್ಪ ಬೇಡ.'

ಬಸಪ್ಪ ಕಂಗೆಟ್ಟುಹೋದ. ಈ ಸ್ವಾಮಿಗಳ ಅಪ್ಪಣೆ ಕೇಳಲು ಬಂದದ್ದೇ ತಪ್ಪಾಯಿತೆಂದು ತಿಳಿದ. ಅಲ್ಲಿಂದ ಮೆಲ್ಲನೆ ಜಾರಿ ಮನೆಗೆ ಬಂದ. ಮಗನಿಗೆ ಮದ್ದಾನಿಯೆಂದೇ ಹೆಸರಿಡಿಸಿಬಿಟ್ಟ.

ಮಗು ಸೇಬು ಹಣ್ಣಿನಂತೆ ಬೆಳೆದು, ಎಂಟು ವರ್ಷದ ಗೋಲಿಗುಂಡಾಯಿತು. ಬಸಪ್ಪ ಒಳ್ಳೇ ಜಮೀನುದಾರ. ಮೇಲೆ ಒಬ್ಬನೇ ಒಬ್ಬ ಮಗ. ಕೇಳಬೇಕೆ ? ಹುನಗುಂದದ ರುದ್ರಪ್ಪನು ತನ್ನ ಐದು ವರ್ಷದ ಮಗಳನ್ನು ಮದ್ದಾನಿಗೆ ಮದುವೆ ಮಾಡಿಕೊಡಲು ಸಿದ್ಧನಾದ. ಬಸಪ್ಪನನ್ನು ಒಪ್ಪಿಸಿದ.

ರುದ್ರಪ್ಪನೂ ಸ್ವಾಮಿಗಳ ಮಠಕ್ಕೆ ಬಂದು ತನ್ನ ಮಗಳನ್ನು ಮದ್ದಾನಿಗೆ ಕೊಡುವ ಪ್ರಸ್ತಾಪತೆಗೆದ. ಅಪ್ಪಣೆಯನ್ನು ಕೋರಿದ. ಸ್ವಾಮಿಗಳ ಉತ್ತರ ಸಿದ್ಧವಾಗಿಯೆ ಇತ್ತು. ನೇರವಾಗಿ ಹೇಳಿದರು—

'ರುದ್ರಪ್ಪಾ, ನಿನ್ನ ವಿಚಾರ ನಮಗೆ ಸರಿಯಾಗಿ ಕಾಣುವದಿಲ್ಲ. ಮುಂದೆ ನಿನ್ನ ಮಗಳ ಬಾಳ್ವೆ ನಡೀತದೆಯೆಂದು ನಮಗೆ ಅನಿಸುವದಿಲ್ಲ. ಆ ಮದ್ದಾನಿ ಮದ್ದಾನಿಯೇ. ನಿನ್ನ ಮಗಳು ಇನ್ನೂ ಚಿಕ್ಕವಳು. ಈಗೇಕೆ ಆ ಹುಚ್ಚು ನಿನಗೆ ? ಬಿಟ್ಟುಬಿಡು. ಶಿವನಿಚ್ಛೆ ಇದ್ದಾಗ ನೋಡಿದರಾದೀತು'

ರುದ್ರಪ್ಪ 'ಆಗಲಿ ಬುದ್ಧಿ'ಯೆಂದು ಅಲ್ಲಿಂದ ಎದ್ದುಬಿಟ್ಟ. —'ಸ್ವಾಮಿಗಳು ಮದ್ದಾನೆಪ್ಪನಿಗೆ ತಮ್ಮ ಕಡೆಯ ಹೆಣ್ಣು ತಪ್ಪಿಸಬೇಕಂತ ಹಿಂಗ ಆಟಾ ಹೂಡ್ಯಾರಲಾ' ಎಂದು ಒಳಗೊಳಗೆ ಲೆಕ್ಕ ಹಾಕಿಕೊಂಡ.

ಮದುವೆ ವೈಭವದಿಂದಲೆ ಜರುಗಿಬಿಟ್ಟಿತು. ಆದರೆ ಮಹರ್ಷಿಯ ಮಾತು ಅದೇನು ಹುಸಿಯಾಗಬಲ್ಲದೆ? ಇನ್ನೂ ಹರೆ ಬಂದಿರಲಿಲ್ಲ, ಮೊಕವಿೂಸಿ ಆಡಿರಲಿಲ್ಲ. ಈ ಮದ್ದಾನಿ ಗಾಂಜಾ ಭಕ್ತನಾದ. ಅಫೂವಿನ ಆಪ್ತನಾದ. ಧೂಮ್ರರಾಣಿಯ ಗೆಳೆಯನಾದ. ಇಸ್ಪೇಟಿನ ಬಂಟನಾದ.

ಮನೆಯಲ್ಲಂತೂ ಹಾಸಿಗೆ ಹಿಡಿದ ರೋಗದ ತಂದೆ, ಇವನದೆ ದರ್ಬಾರು ಸಾಗಿತು. ಇದ್ದದ್ದನ್ನು ಮಾರಿದ. ಸಾಮಾನು ಒತ್ತಿ ಇಟ್ಟ. ದಾಗೀನೆಗಳನ್ನು ಕದ್ದು ಸಾಗಿಸಿದ.

ಹರೆ ತುಂಬುವದಕ್ಕಿಂತ ಮುಂಚಿತವಾಗಿಯೆ ಇಷ್ಟೆಲ್ಲಾ ಪುರಾಣ ಆಗಿ ಹೋಯಿತು. ತಾರುಣ್ಯದಲ್ಲಿ ಎಷ್ಟು ಬಗೆಯ ಅವಿವೇಕಗಳು ನಡೆಯಬೇಕೊ ಅಷ್ಟೆಲ್ಲವನ್ನೂ ಪೂರೈಸಿಬಿಟ್ಟ. ಊರಿಗೆ ಹೊತ್ತುನಿಂತ. ಬಸಪ್ಪನ ಬೆಲೆ ಕಾಸಿಗೆ ಹನ್ನೊಂದಾಯಿತು. ಕನ್ಯೆಕೊಟ್ಟ ರುದ್ರಪ್ಪನ ಕಿಮ್ಮತ್ತು ಚಿಂದಿ ಚಿಕ್ಕಾಡಾಯಿತು.

ಅಂತೂ ಆ ಮದ್ದಾನಿ ಮದ್ದಾನಿಯೆ ಆದ ! ಮನೆಯನ್ನೆ ಬಿಟ್ಟು, ಹಗಲು ರಾತ್ರಿ ಊರೂರು ತಿರುಗುವ ಮಹಾ ಪೋಲಿಯಾದ. ಕೊನೆಗೆ ದೇಶವನ್ನೆ ಬಿಟ್ಟು ಎತ್ತಲೊ ಏನೊ ಹೋಗಿಬಿಟ್ಟ. ಹೋದವನು ಇದ್ದಾನೊ ಸತ್ತನೊ ಪತ್ತೇ ಇಲ್ಲ. ಹೆಸರು ಹೇಳಲಿಕ್ಕೆ ಗತಿಯಿಲ್ಲದಂತೆ ನಾಪತ್ತೆಯಾದ. ಮರಳಿ ಬರಲೇ ಇಲ್ಲ.

ಪಾಪ, ಅದೇ ಆಗ ತಾರುಣ್ಯದ ಹೊಸ್ತಿಲಲ್ಲಿ ಕಾಲಿರಿಸಿದ ರುದ್ರಪ್ಪನ ಮಗಳು, ಕಣ್ಣೀರನ್ನೆ ಹಾಸಿ, ಕಣ್ಣೀರನ್ನೆ ಹೊದ್ದು, ಕಣ್ಣೀರನ್ನೇ ಉಂಡುಟ್ಟು

ಬೆಳೆಯತೊಡಗಿದಳು. ಸಂಸಾರದ ದಾಂಪತ್ಯ ಸುಖ ಒಂದಿನಿಸಾದರೂ ಅವಳ ತುಟಿಯ ಮೇಲೆ ಆಡಲಿಲ್ಲ. ಅವಳ ಗೆಳತಿಯರೆಲ್ಲ ಪತಿ ಗೃಹಕ್ಕೆ ಹೋಗಿ ತುಂಬಿದಕೊಡದಂತೆ ಗರ್ಭಿಣಿಯಾಗಿ ಬಂದರು. ತಂದೆ ಮಾಡಿದ ಅವಿವೇಕಕ್ಕೆ ತಾನು ಭಾಗಿಸಿಯಾಗಿ, ಬಾಳಿನ ಗೋಳನ್ನು ಭುಂಜಿಸುತ್ತ ಕಾಲ ಕಳೆದಳು. ಕೊನೆಯವರೆಗೂ ತೌರುಮನೆಯಲ್ಲೇ ತೂರಿದ ತೌಡಾಗಿ, ಬೀಸಿದ ಹಿಟ್ಟಾಗಿ, ಕೇರಿದ ಕಸವಾಗಿ ಜೀವನ ನೂಕಿದಳು.

# ಮದುವೆಯ ಹುಚ್ಚು ಹತ್ತಿದ ಮುದುಕ

ಮೈಸೂರು ಸೀಮೆಯ ವೀರಪ್ಪ ಅರವತ್ತು ವರ್ಷದ ಸುಂದರ ಮುದುಕ ! ಇನ್ನೂ ತಲೆಯಲ್ಲಿ ಹತ್ತಿಪ್ಪತ್ತು ಕರಿ ಕೂದಲುಗಳು ಉಳ್ಳ ಸರದಾರ!!! ಮನೆಯಲ್ಲಿ ಮಡದಿ ಇದ್ದಾಳೆ. ಲಗ್ನದ ವಯಸ್ಸಿಗೆ ಬಂದ ಇಬ್ಬರು ಮಕ್ಕಳಿದ್ದಾರೆ. ಆದರೂ ಈತನ ಶರೀರದ ಭೋಗದಾಹ ತೀರಲಿಲ್ಲ. ಇನ್ನೊಂದು ಹರೆಯದ ಕನ್ಯೆಯನ್ನು ಮಾಡಿಕೊಂಡು, ಹೊತ್ತು ಸಿಕ್ಕಷ್ಟು ಸುಖಪಟ್ಟು ಬಾಳಬೇಕೆಂಬುದೇ ಇವನ ಜೀವನ ತತ್ವ ! ತನ್ನ ನೆರೆಹೊರೆಯ ಗ್ರಾಮಗಳಲ್ಲಿ, ಪರಿಚಯದ ಸ್ಥಳಗಳಲ್ಲಿ ಕನ್ಯಾರ್ಥಿಯಾಗಿ ಕೇಳಿ ನೋಡಿದ. ಎಲ್ಲರೂ ಅವನಿಗೆ ಥೀ ಥೂ ಹಾಕಿ ಮೋರೆ ಎತ್ತದಂತೆ ಮಾಡಿಬಿಟ್ಟರು. ಇನ್ನೇನು ಮೈಸೂರ ಸೀಮೆಯ ಆಶೆ ಮುಗಿಯಿತು. ಉತ್ತರದ ಬೆಳವಲದ ನಾಡಿನಲ್ಲಿ ಬಡಜನರು ಬಹಳ ಇದ್ದುದರಿಂದ ಮುದಿವಯದ ವರರು, ಅಲ್ಲೇ ತಮ್ಮ ಗಾಳ ಬೀಸಿ ತೆರತೆತ್ತು ಮದುವೆಯಾಗುವ ಸುದ್ದಿ ಹೇಗೊ ಇವನ ಕಿವಿಗೆ ತಲುಪಿತು. ನಾಲಿಗೆ ನೀರೂರಿತು. ತಾರುಣ್ಯ ಕಳೆ ಏರಿತು. ಬೊಕ್ಕಣದಲ್ಲಿ ನೂರು ರೂಪಾಯಿ ಇಟ್ಟುಕೊಂಡು ಕನ್ಯಾ ದಿಗ್ವಿಜಯಕ್ಕಾಗಿ ಸೀಮೋಲ್ಲಂಘನ ಮಾಡಿದ ! ರಾಯಚೂರ ಜಿಲ್ಲೆ ಮುಗಿಯಿತು. ಬಳ್ಳಾರಿ ಜಿಲ್ಲೆ ಮುಗಿಯಿತು. ಇನ್ನು ವಿಜಾಪುರ ಜಿಲ್ಲೆಗೆ ಬಂದ. ಹತ್ತೂ ದಿಕ್ಕಿಗೆ ತಿರುಗಿ ಹಿತ್ತಲಕ್ಕೆ ಹೋದಂತೆ ಇಲಕಲ್ಲಿಗೂ ಬಂದ ಆ ಮುದುಕ ವಿಜಯಮಹಾಂತ ಶಿವಯೋಗಿಗಳನ್ನೇ ಭೆಟ್ಟಿಯಾದ. ಇಲಕಲ್ಲು ಬಡ ನೇಕಾರರ ಊರು. ದುಡ್ಡಿಗೆ ದುಪ್ಪಟ್ಟು ದುಡಿಯುವ ಬಡ ಕುಟುಂಬಗಳು. ಒಂದು ಹೊತ್ತು ಅಂಬಲಿ, ಒಂದು ಹೊತ್ತು ನೀಚು ಉಂಡು ಮಲಗುವ ಮಗ್ಗದ ಮಕ್ಕಳ ಮುಗ್ಗಿದ ಜೀವನ. ಎದ್ದರೆ ಎಳೆಹಾಳು, ಬಿದ್ದರೆ ಜೀವ ಹಾಳು ಎಂಬಂತೆ ಬದುಕಿದ ಎಲುವಿನ ಗೂಡಿನ ತಂದೆ ತಾಯಿಗಳು. ಮದುವೆ ಇಲ್ಲದೆ ಸೊರಗಿ ಸುಕ್ಕಾದ ಕನ್ಯಾಮಣಿಗಳು. ಸರಿ; ಬೇಟೆಯಾಡಿದರೆ ಇಲ್ಲೇ ಆಡಬೇಕೆಂದು ಬಂದ ಆಶೆಗೆ ! ಅತಿಕಾಮವು ನಾಚಿಕೆಯನ್ನು ಗಂಟುಮೂಟೆ ಕಟ್ಟಿ ಒಗೆಯುತ್ತದೆಯಂತೆ. ಇವರು ಶಿವಯೋಗಿಗಳು, ಉಗ್ರಮೂರ್ತಿಗಳು ಎಂಬುದನ್ನೊಂದೂ ಗಮನಿಸದೆಯೇ ಅರಿಕೆ ಮಾಡತೊಡಗಿದ—

'ಸ್ವಾಮಿ, ನಾನು ಮೈಸೂರು ಸೀಮೆಯವ. ಉತ್ತಮ ಕುಲವಂತ. ಹತ್ತು ಕೂರಿಗೆ ಗದ್ದೆ ಇದೆ. ಹತ್ತು ಕೂರಿಗೆ; ಬಂಗಾರ ಬಿತ್ತಿ ಬಂಗಾರ ಬೆಳೆವ ತೋಟ ಇದೆ. ಈ ವರ್ಷ ಇರಲಿಯೆಂದು ಇನ್ನೊಂದು ಹೊಸಮನೆ ಕಟ್ಟಿಸಿ ಇಟ್ಟಿದ್ದೀನಿ. ನನ್ನ ಹತ್ತರ ಹತ್ತು ಸಾವಿರ ಬೆಳ್ಳಿ ರೂಪಾಯಿ ಇದೆ. ಹೆಂಡತಿ, ಇಬ್ಬರು ಮಕ್ಕಳನ್ನು ಬೇರೆಯೇ ಇಟ್ಟಿದ್ದೇನೆ. ಅವರ ಚಿಂತಿ ಇಲ್ಲ. ನೀವು ದೊಡ್ಡ ಸ್ವಾಮಿಗಳು ಅಂತ ಕೇಳಿದೀನಿ. ಬ್ಹಾಳ ಬಲ್ಲವರೂ ಅಂತ ತಿಳಿದೀನಿ. ಹತ್ತೂರು ಸುತ್ತಿದವರೂ ಅಂತ ಮಂದಿ ಹೇಳತಿದ್ರು. ನೋಡಿ ಸ್ವಾಮಿ, ತಮ್ಮ ಮುಂದೆ ಏನು ಮುಚ್ಚಿ ಇಡೋದು ? ನನಗೆ ಇನೊಂದು ಲಗ್ನ ಆಗುವ ವಿಚಾರ ಇದೆ. ಅಷ್ಟೇ. ಹೆಚ್ಚೇನೂ ಇಲ್ಲ. ಧರ್ಮಸಮ್ಮತವಾಗಿ ಲಗ್ನ ಆಗಬೇಕೆಂದು ನಿರ್ಧಾರ ಮಾಡೀನಿ. ನೀವು ಸುರೂಪಾದ ಸುಲಕ್ಷಣ ಸಂಪನ್ನೆಯಾದ ಹದಿನಾರರ ಸುಮಾರಿಗೆ ಕನ್ಯೆ ಇದ್ದರೆ ಕೊಡಿಸಿರಿ. ನಾನು ಧನದಿಂದಲೂ ದೊಡ್ಡವ. ಗುಣದಿಂದಲೂ ದೊಡ್ಡವ. ಯಾತಕ್ಕೂ ಕಡಿಮೆ ಇಲ್ಲ ಸ್ವಾಮಿ. ಬೇಕಾದರೆ ಹುಡುಗಿಗೆ ವಂಕಿ, ಸರಗಿ, ಬಾಜುಬಂದಿ, ಗೆಜ್ಜಿಟೀಕಿ, ಕರ್ಮಣಿ ಟೀಕಿ, ಗುಂಡಿನ ಟೀಕಿ, ಬೇಡಿದ ಆಭರಣ ಇಡೋ ಶಕ್ತಿ ಇದೆ. ಕನ್ಯಾ ಶುಲ್ಕಾನೂ ಕೊಡತೀನಿ, ನೀವು ಅಪ್ಪಣೆ ಮಾಡಿದಂತೆ ಪೀತಾಂಬರ ಕೊಡಸ್ತೀನಿ. ತಮ್ಮ ಅಪ್ಪಣೆ ಆಗಲಿ ಸ್ವಾಮಿ. ನಿಮ್ಮಿಂದ ನಮ್ಮಂತೋರು ಬಾಳೋದು !' ಎಂದು.

ವಿಜಯಮಹಾಂತ ಸ್ವಾಮಿಗಳು ಕೆಂಡ ಕಾರುವ ಕಣ್ಣಿನಿಂದ ಅವನನ್ನು ಒಮ್ಮೆ ನೋಡಿದರು. ಮೊದಲು ಹಸನ್ಮುಖಿಯಾಗಿದ್ದ ಸ್ವಾಮಿಗಳು ಈಗ ವಿಶ್ವವನ್ನೇ ನುಂಗುವಂತೆ ನೋಡುತ್ತಿದ್ದಾರೆ ! ಎಲ್ಲಿ ನನ್ನನ್ನು ಇರಿವೆ ಬಡಿದು ಚಲ್ಲಿದಂತೆ ಚಲ್ಲುವರೋ ಎನ್ನುವಂತೆ ಆತ ನರನಾಡಿಯಲ್ಲಿ ನಡುಗಿ ಹೋದ. ಗಂಭೀರವಾಗಿಯೇ ಸ್ವಾಮಿಗಳು ಹೇಳಿದರು—

'ಲೇ ಸಾವುಕಾರ. ಕೇಳು ಇಲ್ಲಿ ಕೊಡುವ ಕನ್ಯೆಗಳು ಸಾಕಷ್ಟು ಇವೆ, ಆದರೆ ಅವರು ನಿನ್ನ ಹೊಲ, ಗದ್ದೆ, ತೋಟ, ಮನೆ, ಹತ್ತು ಸಾವಿರ ರೂಪಾಯಿ, ಬಂಗಾರ, ವಸ್ತು-ಒಡವೆ ಮಾಡಿಕೊಳ್ಳುವದಿಲ್ಲ. ನಿನ್ನನ್ನೇ ಮಾಡಿಕೊಳ್ಳುತ್ತಾರೆ. ತಿಳಿಯಿತೇ ?'

ತಿಳಿಯಿತು ಸ್ವಾಮೀ ತಿಳಿಯಿತು. ಹಾಗೇ ಆಗಲಿ. ಹಾಗೇ ಆಗಲಿ. ನಾ ಬೇಡವೆಂದೆನೆ ?'

'ಹುಂ. ಅದಕ್ಕೇ ಕೇಳು. ಹೇಳುತ್ತೇವೆ. ನೀನು ಮದುವೆಯಾದರೆ ಮೂರೆ ತಿಂಗಳಲ್ಲಿ ಸಾಯುತ್ತಿ. ಮದುವೆ ಆಗದಿದ್ದರೆ ನಿನಗೆ ಇನ್ನೂ ಹತ್ತು ವರ್ಷ ಆಯುಸ್ಸು ಇದೆ. ಯಾವುದು ಬೇಕು ?'

'ಏನು ಸ್ವಾಮಿ ಹೀಗಂತೀರಲ್ಲಾ ?'

'ಹೌದು. ಉತ್ತರ ಕೊಡು.'

'ಖರೇ ಅಂದ್ರು ಹೇಳ್ತೀರಾ ?'

'ಬೇಕಾದ್ರ ಮದುವಿ ಮಾಡಿಕೊಂಡು ನೋಡು'

'ಅಯ್ಯೋ ಅಯ್ಯೋ ಅಯ್ಯೋ ಸ್ವಾಮಿ, ಸಾಯೋದು ಬೇಡ ಸ್ವಾಮಿ. ಉಳಿಯೋದಿದ್ರ ಮಾಡಿ'

'ನಾವು ಹೆಚ್ಚಿಗೆ ಹೇಳೂದಿಲ್ಲ. ಮೂರೆ ತಿಂಗಳು ಬಾಳಲು ಸಿದ್ಧವಿದ್ದರೆ ಹೇಳು, ಇಂದೇ ಮದುವಿ ಮಾಡುತ್ತೇವೆ'

ಮುದುಕ ಹೇಳದೆ ಕೇಳದೆ ರಪಾಟಿಕಿತ್ತ ! ಸ್ವಾಮಿಗಳ ಮಾತು ವೇದ ವಾಕ್ಯವೆನ್ನಿಸಿತು ಅವನಿಗೆ. ತನ್ನ ಮಡದಿ ಮಕ್ಕಳೊಂದಿಗೆ ಸುಖಸಂಸಾರ ಸಾಗಿಸಿದ. ಅಷ್ಟೆ ಅಲ್ಲದೆ ಐದು ವರ್ಷಗಳ ತರುವಾಯ ಬಂದು ಶಿವಯೋಗಿಗಳ ಪುನರ್ ದರ್ಶನ ಪಡೆದು ಪುನೀತನಾದ. ಆಶ್ಚರ್ಯದ ಸಂಗತಿಯೇನೆಂದರೆ; ಶಿವಯೋಗಿಗಳು ಹೇಳಿದಂತೆ ಮುಂದೆ ಸರಿಯಾಗಿ ಹತ್ತು ವರ್ಷಕ್ಕೆ ಪ್ರಾಣಬಿಟ್ಟ !

# ವಿಜಯ ಮಹಾಂತರಿಗೆ ವಿಷಪ್ರಾಶನ

ರಾಮಗಡ್ಡಿಯು ತುಂಗಭದ್ರಾ ತೀರದಸುರಸುಂದರ ಸುಕ್ಷೇತ್ರ. ನದಿಯಲ್ಲಿ ನೈಸರ್ಗಿಕವಾಗಿ ನಡುಗಡ್ಡೆಯೊಂದು ಮೂಡಿದೆ. ಅದೇ ರಾಮನಗಡ್ಡಿಯೆಂದು ಪುರಾತನ ಪ್ರಸಿದ್ಧವಾಗಿದೆ. ಪ್ರಕೃತಿಮಾತೆಯಮಡಿಲಲ್ಲಿ ಆಧ್ಯಾತ್ಮದ ತೊಟ್ಟಿಲು ತೂಗಿದೆ. ಅಲ್ಲಿಯ ಸ್ವಾಮಿಗಳು ಲಿಂಗೈಕ್ಯರಾದುದರಿಂದ, ರಾಯಚೂರಿನ ಭಕ್ತ ಮಂಡಲಿಗೆ ನೂತನ ವಟುವನ್ನು ಆಯ್ಕೆಮಾಡುವ ಭಾರ ಸಹಜವಾಗಿ ಬಿದ್ದಿತು. ಅವರು ತಮ್ಮ ಭಾರವನ್ನು ಆ ಕಾಲದ ಕರ್ನಾಟಕದ ಉಗ್ರ ತಪಸ್ವಿಗಳಾದ ವಿಜಯ ಮಹಾಂತ ಶಿವಯೋಗಿಗಳಿಗೆ ಬಿಟ್ಟುಕೊಟ್ಟರು.

ಶಿವಯೋಗಿಗಳು ಆ ಕಾಲದ ಅನೇಕ ಮಹನೀಯರಿಗೆ ಅನುಗ್ರಹ ಮಾಡಿದ್ದರು. ಅಧಿಕಾರ ನೀಡಿದ್ದರು. ತುಂಬಾಪುರದ ಚನ್ನಬಸವದೇಶಿಕನೆಂಬ ವಿಭೂತಿ ಪುರುಷ ಹಾಗೂ ಹಿರಿಯ ಮೇಗೇರಿಯ ಸಾಲಿಮಠದ ಪಟ್ಟಾಧ್ಯಕ್ಷರಿಬ್ಬರೂ ಶ್ರೀಗಳಿಂದ ಅನುಗ್ರಹ ಪಡೆದು ಪ್ರಾಸಾದಿಕರಾಗಿದ್ದರು. ಶ್ರೇಷ್ಠ ಅನುಷ್ಠಾನ ಮೂರ್ತಿಗಳಾಗಿ ಬಾಳಿದರು. ನೂರಾರು ಸದ್ಭಕ್ತರು ಶ್ರೀಗಳಿಂದ ಮಹಾಮಂತ್ರೋಪದೇಶದ ಅನುಗ್ರಹ ಸಂಪತ್ತನ್ನು ಹೊಂದಿದ್ದರು. ಹೀಗಾಗಿ ರಾಮಗಡ್ಡಿಮಠದ ನೂತನ ಅಧಿಕಾರಿಯನ್ನು ನಿರ್ಣಯಿಸಿ, ಅಧಿಕಾರ ನೀಡುವ ಹೊಣೆಯು ಸ್ವಾಭಾವಿಕವಾಗಿ ಇವರ ಮೇಲೆಯೆ ಬಿತ್ತು. ರಾಮಗಡ್ಡಿಯಲ್ಲಿ ಏಕಕಾಲಕ್ಕೆ ಇಬ್ಬರು ವಟುಗಳು ಇದ್ದುದರಿಂದ, ಪಟ್ಟಾಧಿಕಾರಕ್ಕಾಗಿ ಭಕ್ತರಲ್ಲಿ ಎರಡು ಪಕ್ಷಗಳಾಗಿ ಮಹಾ ಜಗಳಕ್ಕೆ ಇಟ್ಟುಕೊಂಡಿತ್ತು. ಎರಡು ಬಣಗಳೇ ಆಗುವ ಸ್ಥಿತಿ ಪ್ರಾಪ್ತವಾಯಿತು. ಆಗ ಅಲ್ಲಿಯ ಹಿರಿಯ ಸದ್ಭಕ್ತರು ಒಂದು ಜಾಣತನಮಾಡಿ, ಈ ವಟುಗಳಲ್ಲಿ ಒಬ್ಬನನ್ನು ಆಯ್ಕೆಮಾಡುವ ಅಧಿಕಾರವನ್ನು ಇಲಕಲ್ಲ ವಿಜಯ ಮಹಾಂತ ಶಿವಯೋಗಿಗಳಿಗೆ ಬಿಟ್ಟುಕೊಡುವದು ಯೋಗ್ಯವೆಂದು ಹೇಳಿದರು. ಎಲ್ಲರೂ ಈ ಸೂಚನೆಗೆ ಒಮ್ಮತದಿಂದ ಒಪ್ಪಿದರು.

ಶ್ರೀಗಳು ಇಲಕಲ್ಲದಿಂದ ರಾಮಗಡ್ಡಿಗೆ ದಯಮಾಡಿಸಿದರು. ಅಲ್ಲಿಯ ಸದ್ಭಕ್ತರು ಇಬ್ಬರು ವಟುಗಳನ್ನು ಶಿವಯೋಗಿಯ ಎದುರಿಗೆ ಕುಳ್ಳಿರಿಸಿದರು. ನ್ಯಾಯನಿರ್ಣಯಕ್ಕಾಗಿ ಯಾಚಿಸಿದರು. ವಿಜಯ ಮಹಾಂತ ಶಿವಯೋಗಿಗಳು ಇಬ್ಬರು ವಟುಗಳನ್ನು ನೋಡಿದರು. ಅವರಿಬ್ಬರೂ ಸುಂದರಮೂರ್ತಿಗಳಾ

ಗಿದ್ದಾರೆ. ಕಾವಿಧಾರಿಗಳಾಗಿದ್ದಾರೆ. ಲಿಂಗ-ಭಸ್ಮ-ರುದ್ರಾಕ್ಷಿಗಳಿಂದ ಹೊಳೆಯುತ್ತಿದ್ದಾರೆ. ಸತ್ಪುರುಷರಂತೆ ಕಳಾಪೂರ್ಣರಾಗಿದ್ದಾರೆ. ನಂತರ ಶಿವಯೋಗಿಗಳು ಅವರಿಬ್ಬರ ಮೇಲೆ ತಮ್ಮ ಜ್ಞಾನದೃಷ್ಟಿಯನ್ನು ಹರಿಸಿ ನೋಡಿದರು. ಆಗ ಅವರಲ್ಲಿ ಒಬ್ಬ ಪ್ರಕಾಶದ ಪುಂಜದಂತೆ ಹೊಳೆದು ತೋರಿದ! ಇನ್ನೊಬ್ಬ ನರಲೋಕದ ನರಮಾಂಸಭಕ್ಷಕನಾದ ರಾಕ್ಷಸನಂತೆ ಕರಾಳವಾಗಿ ಪೆಡಂಭೂತವಾಗಿ ಕಂಡ !! ನೇರವಾಗಿ ಶಿವಯೋಗಿಗಳು ಮೊದಲು ದರ್ಶಿಸಿದ ವಟುವನ್ನೇ ಪಟ್ಟಕ್ಕೆ ಆಯ್ಕೆ ಮಾಡಿಬಿಟ್ಟರು. ಎಲ್ಲ ಸದ್ಭಕ್ತರಿಗೆ ತಮ್ಮ ನಿರ್ಣಯವನ್ನು ಅರುಹಿ, ಆ ವಟುವಿಗೆ ಅನುಗ್ರಹ ನೀಡಿ ಮಠದ ಚರಾಧಿಕಾರವನ್ನು ಒಪ್ಪಿಸಿದರು. ಆದರೆ ಇನ್ನೊಬ್ಬ ಧೂರ್ತ ವಟು ತನಗೇ ಆ ಮಠದ ಅಧಿಕಾರ ದೊರೆಯಲೆಂದು ಅನೇಕ ವರ್ಷಗಳಿಂದ ಬೆಕ್ಕಿನ ತಪಸ್ಸು ಮಾಡಿದ್ದ. ಆದರೆ ದಿವ್ಯಜ್ಞಾನಿಗಳಾದ ವಿಜಯಮಹಾಂತಶಿವಯೋಗಿಗಳ ಕೈಯಲ್ಲಿ ಅವನ ನಂಬರು ತಪ್ಪಿಬಿಟ್ಟಿತು! ಆತ ಕಟ್ಟಿಕೊಂಡ ಕಲ್ಪನಾಸಾಮ್ರಾಜ್ಯದ ಕನಸುಗಳೆಲ್ಲ ಕ್ಷಣಾರ್ಧದಲ್ಲಿ ಕುಪ್ಪಳಿಸಿ ಬಿದ್ದಂತಾದವು. ಶಿವಯೋಗಿಗಳು ಅವನನ್ನು ಆಯ್ಕೆಮಾಡದಿದ್ದುದು ಹಾವಿನ ಬಾಲ ತುಳಿದಂತಾಯಿತು. ಆತ ಗುಪ್ತವಾಗಿ ಸ್ವಾಮಿಗಳ ಸೇವೆ ಮಾಡುತ್ತ ಅವರು ಸೇವಿಸುವ ಸಾರಿನಲ್ಲಿ ವಿಷ ಬೆರೆಸಿ ಬಿಟ್ಟ ! ಶಿವಯೋಗಿಗಳ ದಿವ್ಯಜ್ಞಾನಕ್ಕೆ ಅದು ತಕ್ಷಣವೇ ಹೊಳೆದುಬಿಟ್ಟಿತು. ಅಲ್ಲದೆ ಸಾರಿನ ಮೇಲೆ ಹಸಿರಾದ ವರ್ಣವನ್ನು ಕಣ್ಣಾರೆ ಕಂಡರು. ಆದರೆ ಎಡೆ ಬಟ್ಟಲಕ್ಕೆ ಬಂದುದು ಪ್ರಸಾದವಲ್ಲವೇ ? ಪ್ರಸಾದವನ್ನು ಬಿಡಲಿಕ್ಕಾಗುತ್ತದೆಯೇ ? ಶಾಂತರೀತಿಯಿಂದ— 'ಶಿವನೇ ನಿನ್ನ ಇಚ್ಛಾ' ಎಂದು ನುಡಿದು ಸೇವಿಸಿಬಿಟ್ಟರು. ಒಬ್ಬರಿಗೂ ಹೇಳಲಿಲ್ಲ. ತಾವೂ ಮಿಡುಕಲಿಲ್ಲ. ಯಥಾ ಪ್ರಕಾರವಾಗಿ ಇಲಕಲ್ಲಿಗೆ ಮರುಪ್ರಯಾಣ ಕೈಕೊಂಡರು.

ವಿಷಜ್ವಾಲೆ ಮೆಲ್ಲನೆ ತನ್ನ ಕಾರ್ಯವನ್ನು ನಡೆಸಿಬಿಟ್ಟಿತು. ಸ್ವಾಮಿಗಳ ದೇಹ ಬೇವಿನ ಹಣ್ಣು ಬತ್ತಿದಂತೆ ಬತ್ತಿತು. ಮೈಯೆಲ್ಲಾ ಸುಕ್ಕುಗಟ್ಟಿತು. ಕಣ್ಣುಗಳು ಕುಳಿಬಿದ್ದವು. ಗಲ್ಲ ದದ್ದರಿಸಿಹೋದವು. ಕುತ್ತಿಗೆ ಉಬ್ಬಿತು. ಅನ್ನ ಕಟ್ಟಾಯಿತು.

ಇಷ್ಟಾದರೂ ತ್ರಿಕಾಲ ಪೂಜೆ ನಿಲ್ಲಲಿಲ್ಲ. ಶಿವಧ್ಯಾನ ಸರಿಯಲಿಲ್ಲ. ವೈದ್ಯರನ್ನು ಕರೆಯಲಿಲ್ಲ. ಔಷಧೋಪಚಾರ ಪಡೆಯಲಿಲ್ಲ. ಸ್ವಲ್ಪೇ ದಿನಗಳಲ್ಲಿ ಇಲಕಲ್ಲ ಭಕ್ತರಿಗೆ ವಿಷಪ್ರಾಶನದ ಸಂಶಯ ಬಂದೇಬಿಟ್ಟಿತು. ಸ್ವಾಮಿಗಳ ಚಹರೆಯನ್ನು ಪರೀಕ್ಷಿಸಿ ನಡುಗಿಬಿಟ್ಟರು. ಒಂದು ದಿನ ಕೆಲವರು ಹಿರಿಯ ಭಕ್ತರು ಮಠಕ್ಕೆ ಬಂದು ಕೇಳತೊಡಗಿದರು—

'ಬುದ್ಧೀ, ತಾವು ಈ ತಿಂಗಳ ಭಾರಿ ಸೊರಗಿರುವಿರಿ. ಬತ್ತಿ ಬೆಂಡಾ ಗಿದ್ದೀರಿ.'

'ಹೌದು. ಶಿವನಿಚ್ಛೆ.'

'ಹಾಗಲ್ಲ ಬುದ್ಧಿ. ತಾವು ಪ್ರತಿಯೊಂದಕ್ಕೂ ಶಿವನಿಚ್ಛೆಯೆಂದರೆ ಹೇಗೆ? ನಮಗೆ ವಿಷಪ್ರಾಶನದ ಶಂಕೆ ಬರಹತ್ತಿದೆ'

'ಶಂಕೆ ಏಕೆ ಮಾಡುತ್ತೀರಿ ನಿಜವೇ ಇದೆ'

'ಹಾಂ? ಹಾಗಾದರೆ ತಾವು ನಮಗೇಕ ತಿಳಿಸಲಿಲ್ಲ ?'

'ಶಿವನಿಚ್ಛೆ'

'ಬುದ್ಧೀ; ದಯವಿಟ್ಟು ತಾವು ನಿಮ್ಮ ಮಕ್ಕಳಾದ ನಮ್ಮನ್ನು ಅನಾಥ ರನ್ನಾಗಿ ಮಾಡಬೇಡಿರಿ. ಇಲ್ಲಿ ಉತ್ತಮ ವಿಷವೈದ್ಯರಿದ್ದಾರೆ. ಅವರಿಂದ ಔಷಧ ತರಿಸಿಕೊಡುತ್ತೇವೆ ಸೇವಿಸಿರಿ. ಅವರು ರಕ್ತಗತವಾದ ವಿಷವನ್ನು ಹೊರತೆಗೆಯುತ್ತಾರೆ.'

ಸ್ವಾಮಿಗಳು ನಕ್ಕು ಹೇಳಿದರು—

'ಹುಚ್ಚಪ್ಪನವರೇ; ಅದು ವಿಷವಾದರೂ ಪ್ರಸಾದವಲ್ಲವೇ ? ಲಿಂಗ ಪ್ರಸಾದವೆಂದ ಮೇಲೆ ಅದು ಅಮೃತವೇ ಆಯಿತು. ಅಮೃತಕ್ಕೆ ಔಷಧವೇ? ಅಲ್ಲದೇ ಪ್ರಸಾದ ಸೇವಿಸಿ ಔಷಧ ಕುಡಿದರೆ ಆ ಪ್ರಸಾದಕ್ಕೆ ಅವಮಾನ ವಲ್ಲವೇ ?'

'ಹಾಗಾದರೆ ಮುಂದೇನು ಮಾಡಬೇಕೆಂದಿರುವಿರಿ ?'

'ಏಕೆ ಅಂಜುವಿರಿ ? ಲಿಂಗಪ್ರಸಾದವನ್ನು ಸೇವಿಸಿದ್ದೇನೆ. ಪ್ರಸಾದ ವೆಂದಾದರೂ ವಿಷವಾದೀತೆ ? ಏನೂ ಅಂಜಿಕೆಯಿಲ್ಲ. ನಿಶ್ಚಿಂತರಾಗಿರಿ'

ವಿಷದ ಅವಧಿ ಎರಡು ತಿಂಗಳಲ್ಲವೇ ? ಮೂರನೆಯ ತಿಂಗಳಲ್ಲಿ ವಿಷ ಸೇವಿಸಿದವ ಸಾಯಲೇಬೇಕು. ಆದರೆ ಇಲ್ಲಿ ಪರಿಣಾಮ ತದ್ವಿರುದ್ಧವಾಯಿತು. ವಿಷದ ಅವಧಿ ತೀರಿದ ಮೇಲೆ ಸ್ವಾಮಿಗಳು ಮೊದಲಿನಂತೆ ಚೈತನ್ಯಮಯರಾಗಿ ಕಂಗೊಳಿಸಿದರು. ಅತ್ತ ವಿಷಹಾಕಿದ ಧೂರ್ತ ವಟು ಕೇವಲ ರುಚಿಯಾದ ಮಾವಿನ ಹಣ್ಣೊಂದನ್ನೇ ಸೇವಿಸಿ ಫಕ್ಕನೆ ಸೆಟೆದುಹೋದ !

"ನೀನೊಲಿದರೆ ವಿಷವೆಲ್ಲ ಅಮೃತವಹುದಯ್ಯ" ಎಂಬ "ಅಪ್ಪನವರ" ಅಮರ ಸಿದ್ಧಾಂತವನ್ನು ಶಿವಯೋಗಿಗಳು ಪ್ರಾಯೋಗಿಕವಾಗಿ ಕಂಡುಕೊಂಡರು. ಲೋಕಕ್ಕೆ ಅದರ ಗುಣಮಟ್ಟವನ್ನು ತೋರಿಸಿದರು.

# ವೈರಾಗ್ಯದ ಮಲ್ಲಣಾರ್ಯರಿಗೆ ದಿವ್ಯೋಪದೇಶ

ಜ್ಯೋತಿಯ ಬಳಿ ಜ್ಯೋತಿ ಬರುವದು ಯುಕ್ತವಲ್ಲವೆ? ಪರಂಜ್ಯೋತಿ ಸ್ವರೂಪವಾದ ವಿಜಯ ಮಹಾಂತ ಶಿವಯೋಗಿಗಳು ಒಂದು ದಿನ ಸಂಜೆ ಮಠದಲ್ಲಿ ಲಿಂಗಪೂಜಾ ತಲ್ಲೀನರಾಗಿದ್ದಾರೆ. ಬಾಗಿಲುಕೋಟೆಯ ವೈರಾಗ್ಯದ ಗಣಿಯಂತಿದ್ದ ವೈರಾಗ್ಯದ ಮಲ್ಲಣಾರ್ಯರು ಇಲಕಲ್ಲಿನ ಮಠದತ್ತ ಚಿತ್ತ ವಿಟ್ಟು ದಯಮಾಡಿಸುತ್ತಿದ್ದುದು ಲಿಂಗಮಧ್ಯದಲ್ಲೇ ಶಿವಯೋಗಿಗಳಿಗೆ ಗೋಚರಿಸಿತು. ಪೂಜಾ ವಿಧಾನವನ್ನು ಪೂರೈಸಿ ನಿರ್ವಿಕಲ್ಪನ ಬರವನ್ನು ನಿರೀಕ್ಷಿಸುತ್ತ ಕುಳಿತರು.

ವೈರಾಗ್ಯದ ಮಲ್ಲಣಾರ್ಯರು ಗ್ರಾಮದಲ್ಲಿ ಏಕರಾತ್ರಿ, ಪಟ್ಟಣದಲ್ಲಿ ಪಂಚರಾತ್ರಿ ವಾಸಮಾಡುತ್ತ, ಪ್ರತಿದಿನ ಐದು ಮನೆಗಳಲ್ಲಿ ಭಿಕ್ಷೆ ಎತ್ತಿ ಪ್ರಸಾದ ಸೇವಿಸುತ್ತ, ಕರ್ನಾಟಕದ ಮೂಲೆಮೂಲೆಗಳಲ್ಲಿ ಸಂಚರಿಸಿ, ಭಕ್ತಿ-ಜ್ಞಾನ-ವೈರಾಗ್ಯ ಪ್ರಸಾದವನ್ನು ಉಣಿಸಿ, ಆ ದಿನ ಇಲಕಲ್ಲಿಗೆ ದಯಮಾಡಿಸಿದರು. ವಿಜಯ-ಮಹಾಂತ ಶಿವಯೋಗಿಗಳು ಅವರನ್ನು ಆದರದಿಂದ ಬರಮಾಡಿಕೊಂಡರು. ಅವರ ಯೋಗ ಕ್ಷೇಮಗಳನ್ನು ವಿಚಾರಿಸುತ್ತ—

'ಮಲ್ಲಯ್ಯ, ಈಗ ನೀನು ಎಲ್ಲಿಂದ ಬಂದೆ?'

ಎಂದು ಪ್ರಶ್ನಿಸಿದರು. ಮಲ್ಲಣಾರ್ಯರು ಹೇಳಿದರು—

'ಹುನಗುಂದದಿಂದ ಬಂದೆ ಬುದ್ಧಿ'

'ಛೀ, ಸುಳ್ಳು ಹೇಳಿದಿ.'

'ಇಲ್ಲ ಬುದ್ಧಿ. ಹುನಗುಂದದಿಂದ ಬಂದೆ.'

'ಹಾಂ....ಮತ್ತೂ ಸುಳ್ಳು ಹೇಳುತ್ತಿ. ನೀ ಸರಿಯಾಗಿ ಹೇಳುತ್ತೀಯೊ ಅಥವಾ ನೀ ಎಲ್ಲಿಂದ ಬಂದೆಯೆಂಬುದನ್ನು ನಾವು ಹೇಳಬೇಕೊ?'

'ಹೀಗೇಕೆ ಕೇಳುತ್ತೀರಿ ಬುದ್ಧಿ. ಈಗ ತಾನೆ ಹುನಗುಂದದಿಂದ ಬಂದೆ.'

'ಮತ್ತೂ ಅದೇ ಸುಳ್ಳು ಸಾಧಿಸುತ್ತಿ. ನೀ ಮಲ್ಲಿಕಾರ್ಜುನನಿದ್ದು ಹುನಗುಂದದಿಂದ ಹೇಗೆ ಬರುತ್ತೀ? ಶ್ರೀಶೈಲದಿಂದ ಬಂದೆನೆಂದು ಹೇಳು.'

ಮಲ್ಲಣಾರ್ಯರು ತಬ್ಬಿಬ್ಬಾದರು. ವಿನಯದಿಂದ ಪೊಡಮಟ್ಟು ಹೇಳಿದರು—

'ಬುದ್ಧೀ ನಾನು ಸೂಡರಿನಂತೆ ಚಿಕ್ಕವ. ಬಹಳ ವರ್ಣನೆ ಮಾಡಿಬಿಟ್ಟಿರಿ. ನಾನೆಲ್ಲಿ ಮಲ್ಲಿಕಾರ್ಜುನನೆಲ್ಲಿ?'

ಇಷ್ಟು ವಿಶಾಲವಾಗಿತ್ತು ವಿಜಯ ಮಹಾಂತ ಶಿವಯೋಗಿಗಳ ದರ್ಶನ ಶಕ್ತಿ. ಅವರು ಶರಣರನ್ನು ಶಿವಸ್ವರೂಪವಾಗಿ ಕಾಣುತ್ತಿದ್ದುದೆ ಇದಕ್ಕೆ ಕಾರಣ.

ಎಂಥವರೆ ಬಂದರೂ ವಿಜಯ ಮಹಾಂತ ಶಿವಯೋಗಿಗಳು ಅವರ ಅಂತರಂಗಕ್ಕೆ ದುರ್ಬೀನು ಹಚ್ಚಿ ನೋಡದೆ ಬಿಡುವವರಲ್ಲ. ಅವರೊಬ್ಬರು ಆಧ್ಯಾತ್ಮ ಮಾರ್ಗದ ವಿಜ್ಞಾನಿಗಳಂತಿದ್ದರು. ಮಲ್ಲಣಾರ್ಯರ ಮೇಲೆ ಸೂಕ್ಷ್ಮದೃಷ್ಟಿಯನ್ನು ಹರಿಸಿದರು. ಮಲ್ಲಣಾರ್ಯರು ವೈರಾಗ್ಯಪೂರ್ಣರಾದರೂ ಎಲ್ಲೋ ಅಂತರಂಗದ ಆಗಸದಲ್ಲಿ ಸ್ವಲ್ಪ ಅಹಂಕಾರದ ಗಂಗೆದೊಗಲು ಉಳಿದಿದೆಯೆಂಬುದನ್ನು ದಿವ್ಯ ಜ್ಞಾನದಿಂದ ಕಂಡುಕೊಂಡರು: ಅದನ್ನು ಈಗಲೆ ಕಳಚಿಬಿಡಬೇಕೆಂದು ಮಲ್ಲಣಾರ್ಯರಿಗೆ ಅಹಂಕಾರ ನಿರಸನೋಪದೇಶವನ್ನು ಗಾಢವಾಗಿ ಗೂಢವಾಗಿ ಹೇಳಿದರು. ಸಾತ್ವಿಕ ಅಹಂಕಾರದ ಸೂಕ್ಷ್ಮ ಪದರುಗಳನ್ನು ಬಿಡಿಸಿ ಬಿಡಿಸಿ ತೋರಿಸಿದರು. ಆ ಪಾರದರ್ಶಕ ಪ್ರಜ್ಞಾ ಚಕ್ಷುವಿನ ವಿಚಕ್ಷಣ ದಿವ್ಯೋಪದೇಶದಲ್ಲಿ ವೈರಾಗ್ಯದ ಮಲ್ಲಣಾರ್ಯರ ಸೂಕ್ಷ್ಮ ರೂಪದ ಸಾತ್ವಿಕ ಅಹಂಕಾರ, ಹೊಲದಲ್ಲಿಯ ಕೊನೆಯ ಕರಿಕೆಯ ಜೊರು ಕಿತ್ತು ಹೋಗುವಂತೆ ಹೋಯಿತು. ಮಹಾಶಿವಯೋಗಿಗಳ ದರ್ಶನಾಭಿಷೇಕದಿಂದ ಅವರು ಈಗನಿಜವಾಗಿಯೂ ವೈರಾಗ್ಯದ ಮಲ್ಲಣಾರ್ಯರಾದರು. ರುದ್ರಾಭಿಷೇಕದ ಲಿಂಗವಾದರು.

# ಚಿತ್ತರಗೀಶನ ನಾಮದ ಬಲ

ಶಿರೂರಿನ ಸಮೀಪಕ್ಕೆ ಇರುವ ಕಲ್ಬಂಡೆಗಳ ಗುಡ್ಡ ಇಮಾರತಿ ತೊಲೆಗಳಿಗೆ ಪ್ರಸಿದ್ಧ. ಚಿತ್ತರಗಿ ಮಠದ ಪುನರುಜ್ಜೀವನ ಕಾರ್ಯ ಭರದಿಂದ ಸಾಗಿದಾಗ ಕಲ್ಲ ತೊಲೆಗಳಿಗಾಗಿ ಶ್ರೀಗಳು ಕಲ್ಬಂಡೆ ಬೆಟ್ಟಕ್ಕೆ ನಡೆದರು. ಕಲ್ಬಂಡೆಗಳ ಕೊಳ್ಳದಲ್ಲಿರುವ ಒಂದು ಪುಟ್ಟ ವರತೆಯಲ್ಲಿ ಆ ದಿನ ಶಿವಯೋಗಿಗಳು ಸ್ನಾನ ಪೂಜಾದಿಗಳನ್ನು ತೀರಿಸಿಕೊಂಡರು. ಶಿವಯೋಗಿಗಳ ಪಾದಸ್ಪರ್ಶವೆಂದರೆ ಸಾಮಾನ್ಯವೆ ? ಈ ವರತೆ ಚಿಲುಮೆಯಾಗಿ ಪುಟಿಯತೊಡಗಿತು. ಮೊದಲು ಮಲೀನವಾಗಿರುತ್ತಿದ್ದ ಅದರ ನೀರು ತೆಂಗಿನಹಾಲಿನಂತೆ ತಿಳಿಯಾಗಿ ಆಸ್ವಾದನೆಗೆ ಅತಿರುಚಿಯಾಯಿತು. ಪ್ರತಿ ಬೇಸಿಗೆಗೂ ಬತ್ತುವ ಆ ವರತೆ, ಮುಂದೆ ಎಂದಿಗೂ ಇಂಗಲಿಲ್ಲವೆಂದು ಆ ಊರಿನವರೆ ಕೊಂಡಾಡುತ್ತಾರೆ. ಮಾತ್ರವಲ್ಲ ಮುಂದೊಂದು ಸಲ ಬಿದ್ದ ಭೀಕರ ಬರಗಾಲದಲ್ಲಿ ಶಿರೂರಿನ ಜನರಿಗೆ ಆ ಚಿಲುಮೆಯ ನೀರೇ ಪಂಚಪ್ರಾಣವಾಯಿತು. ಇಲ್ಲವಾದರೆ ಅವರು ನೀರಿಗಾಗಿ ಗುಳೇ ಎದ್ದು ಎಲ್ಲಿಗೋ ಹೋಗಬೇಕಾಗಿತ್ತು.

ಅಲ್ಲಿಂದ ಮರಳಿ ಬರುವಾಗ ಒಂದು ದೊಡ್ಡ ಗಾತ್ರದ ಕಲ್ಲಿನ ತೊಲೆಯನ್ನು ಬಂಡಿಗೆ ಹೇರಬೇಕಾದ ಪ್ರಸಂಗ ಒದಗಿತು. ಕಲ್ಲುಗಳನ್ನು ಹೇರಿಸಲು ಗುತ್ತಿಗೆ ಹಿಡಿದ ಅಲ್ಲಿಯ ಉಪ್ಪಾರರು 'ಇದೇನು ಮಹಾ !' ಎಂದು ಎಡಸೊಕ್ಕಿನಿಂದಲೆ ಬಂದರು. "ಒಂದು ಕೈಯಲ್ಲಿ ಇದನ್ನು ಎತ್ತಿ ಹಾಕೇನು" ಎಂದು ಕೆಲವರು ಹಮ್ಮಿನಿಂದ ನುಡಿದರು. ಆದರೆ ಅವರೆಲ್ಲ ಕೂಡಿ ಪ್ರಯತ್ನಿಸಿದರೂ ಆ ಕಲ್ಲತೊಲೆ ಕದಲಲಿಲ್ಲ.

ನಂತರ ಸ್ವಾಮಿಗಳು ಅವರನ್ನೆಲ್ಲ ಸರಿಸಿದರು. ಅದನ್ನು ಮುಟ್ಟಬೇಡವೆಂದರು. ಚಿತ್ತರಗಿಯ ಬಂಡಿಯವರನ್ನು ಕರೆದು— 'ಈಗ ನಿಮ್ಮ ಸರದಿ, ನೀವು ಎತ್ತಿರಿ' ಎಂದರು. ಚಿತ್ತರಗಿಯವರು ಈ ಮಾತಿಗೆ ಒಪ್ಪದೆ ಹೇಳಿದರು–

'ಬುದ್ಧಿ....ನಮಗೆ ಕಲ್ಲೆತ್ತಿ ಪರಿಪಾಟ ಇಲ್ಲ. ಅದು ನಮಗೆ ಹೇಗೆ ಸಾಧ್ಯ ಆದೀತು ? ಅಲ್ಲದೆ ಅವರು ಇಪ್ಪತ್ತು ಜನ ಉಪ್ಪಾರರು ತಿಣಿಕಿ ಹೋದರು. ಆಗಲಿಲ್ಲ. ನಾವು ಹನ್ನೆರಡೇ ಜನ ಇದ್ದೇವೆ. ಇದು ಹೇಗೆ ಸಾಧ್ಯ ಬುದ್ಧೀ....'

ಸ್ವಾಮಿಗಳು ಹೇಳಿದರು—

'ಹುಂ, ಸುಮ್ಮನೆ ಎತ್ತಿರೋ. ಇಲ್ಲದ್ದನ್ನು ಆಡಬೇಡಿರಿ. ಎತ್ತಿರೆಂದರೆ ಆತು; ಎತ್ತಿಬಿಡಬೇಕು' ಎಂದು ತಮ್ಮ ಹಸ್ತವನ್ನು ಆ ಕಲ್ಲಿನ ಮೇಲೆ ಆಡಿಸಿದರು.'

ಚಿತ್ತರಗಿ ಬಂಡಿಯವರು ತಮ್ಮ ಕೈಗಳನ್ನು ಕಲ್ಲಬಂಡೆಯ ಬುಡಕ್ಕೆ ಸೇರಿಸಿ, ಒಮ್ಮೆಲೆ ಒಕ್ಕೊರಲಿನಿಂದ—

'ಚಿತ್ತರಗೀಶಾ....ಜೈಜೈ....ಮಾಂತೇಶಾ....ಸೈ ಸೈ....,ಚಿತ್ತರಗೀಶಾ.... ಜೈ ಜೈ....ಮಾಂತೇಶಾ....ಸೈಸೈ....'

—ಎನ್ನುತ್ತ ಆ ಕಲ್ಲತೊಲೆಯನ್ನು ಸರಾಗವಾಗಿ ಎತ್ತಿಹಾಕಿಬಿಟ್ಟರು ! ಅದು ಆ ಸಮಯದಲ್ಲಿ ಅವರಿಗೆ ಕಟ್ಟಿಗೆಗೂ ಹಗುರಾಗಿ ಅನಿಸಿತಂತೆ !!

ಇದಕ್ಕೇ ಯೋಗಬಲವೆನ್ನುವದು. ಬಲಗಳಲ್ಲಿ ಅನೇಕ ಬಲಗಳು. ಎಲ್ಲವೂ ಐಹಿಕ-ಪುರೋಭಿಮುಖಿಗಳು, ಆದರೆ ಯೋಗಬಲ ಮಾತ್ರ ಇವು ಗಳಿಗಿಂತ ಕೋಟಿಪಟ್ಟು ಮಿಗಿಲು. ಈ ಯೋಗಬಲವೆ ಆ ಕಲ್ಲತೊಲೆಯನ್ನು ಕಟ್ಟಿಗೆಯ ಬೆಂಡಿನಂತೆ ಹಗುರಗೊಳಿಸಿತು. ಈ ಮಾತು ಸುಳ್ಳೇ? ಸುಳ್ಳೆಂದವರ ಮೂಗು ಕೊಯ್ಯದೆ ಬಿಡುವದಿಲ್ಲ ವಿಜಯ ಮಹಾಂತೇಶ !

# ಆ ಗಿಡ ನಿನ್ನದಲ್ಲ

ಶಿವಯೋಗಿಗಳು ಒಂದು ಸಲ ಗೊರಬಾಳಿಗೆ ದಯಮಾಡಿಸಿದ್ದಾರೆ. ದಾರಿಯಲ್ಲಿ ಒಂದು ಹೊಲದ ನಡುವೆ ಬಹುದೊಡ್ಡ ಮಾವಿನ ಮರವನ್ನು ಕಂಡು ಅದರ ಒಡೆಯನನ್ನು ಬರಮಾಡಿಕೊಂಡರು. ಆತ ಬಂದು ಸಾಷ್ಟಾಂಗ ಪೆರಗಲು ಸ್ವಾಮಿಗಳು ತಮ್ಮ ಬಯಕೆಯನ್ನು ಮುಂದಿಟ್ಟರು—

'ನಮ್ಮ ಮಠದ ಛಪ್ಪರಕ್ಕೆ ಕಟ್ಟಿಗೆ ತೊಲೆಗಳು ಬೇಕಾಗಿವೆ. ನಿನ್ನ ಹೊಲದ ಮಾವಿನಗಿಡವನ್ನು ಕೊಟ್ಟುಬಿಡು. ಅದನ್ನೇ ಕೊರಿಸಿ ಉಪಯೋಗಿಸುತ್ತೇವೆ. ಉಳಿದ ಕಟ್ಟಿಗೆ ದಾಸೋಹಕ್ಕೆ ಸಲ್ಲುತ್ತದೆ.'

ಆದರೆ ಆ ಹೊಲದ ಒಡೆಯ ಮಹಾನಿಪುಣ. ಹತ್ತಾರು ಕೋರ್ಟಿನ ಕೆಲಸಗಳಲ್ಲಿ ಓಡಾಡಿ ಜವಾಬುಕೊಟ್ಟಂತೆ ಆತ ಚುರುಕುಬುದ್ಧಿಯವನಾಗಿದ್ದ. ತಕ್ಷಣವೆ ಯಾರಾದರೂ ತಲೆದೂಗಬಲ್ಲಂತ ಮಾರ್ಮಿಕ ಉತ್ತರವನ್ನೇ ಬಿಗಿದುಬಿಟ್ಟ—

'ಬುದ್ಧೀ, ತಮ್ಮಂಥವರು ಬಾಯಿ ಹಾಕಿ ಕೇಳಿದ್ದೀರಿ. ಅಂದಮೇಲೆ ಅದು ನನ್ನ ಮಹಾಭಾಗ್ಯ. ಆ ಗಿಡ ನನ್ನದಿದ್ದರೆ ಈಗಲೇ ಕೊಟ್ಟುಬಿಡುತ್ತಿದ್ದೆ. ಆದರೆ ಅದು ಸರಕಾರದವರದ್ದಿದೆ. ಬೇಕಾದರ ಮಾಮಲೇದಾರರಿಗೆ ಕೇಳಿರಿ.'

ಮಾತು ಮುಗಿದೆಬಿಟ್ಟಿತು. ಶಿವಯೋಗಿಗಳು ಹೇಳಿದರು.

'ಹಾಗಾದರೆ ಬೇಡಪ್ಪಾ. ಅದು ನಮಗೆ ಸಲ್ಲದು. ನಿನ್ನದಿದ್ದರೆ ನೀನು ಸಂತಸದಿಂದ ಕೊಡುತ್ತಿದ್ದೆ. ಆದರೆ ಅದು ನಿನ್ನದಲ್ಲವೇ ಅಲ್ಲ'

ಶಿವಯೋಗಿಗಳ ಮಾತು ಸರಳವಾದರೂ ಅರ್ಥ ಆಳವಾಗಿರುತ್ತಿತ್ತು. ಒಂದು ವಾರ ಕೂಡ ಗತಿಸಿರಲಿಲ್ಲ. ಆ ಗಿಡ ಗಳಗಳನೆ ಒಣಗಿಹೋಯಿತು. ಬಿರುಗಾಳಿಗೆ ಮುರಿದು ಬಿದ್ದಿತು. ಹೊಲದ ಮಾಲಿಕ ಈಗ ವಕವಕನೆ ಎದೆ ಬಾಯಿ ಬಿಡಹತ್ತಿದ. ವೃತ್ತಾಂತ ತಿಳಿದು ಜನ ಕೊಳ್ಳೆಂದು ನಗಹತ್ತಿದರು. ಈಗ ಮಾತ್ರ ಮಠಕ್ಕೆ ಓಡಿಬಂದು ಸಾಷ್ಟಾಂಗ ಹಾಕಿ ಹೇಳಿದ—

'ಬುದ್ಧಿ. ತಾವು ಗಿಡ ಕೇಳಿದಿರಿ. ಮಂದಬುದ್ಧಿಯಾದ ನಾನು ಕೊಡಲಿಲ್ಲ. ನನ್ನ ಪಾಪದ ಫಲವಾಗಿ ಅದು ಒಣಗಿಬಿಟ್ಟಿತು. ನನ್ನನ್ನು ಕ್ಷಮಿಸಿರಿ. ಮಹಾಪರಾಧವಾಯಿತು.'

ಸ್ವಾಮಿಗಳು ಹೇಳಿದರು—

'ನೀನೇಗೆ ದುಃಖಿಸುತ್ತಿಯೋ? ಅದು ನಿನ್ನ ಗಿಡವೆ ಅಲ್ಲವಲ್ಲ! ಅದು ಸರಕಾರದ್ದು. ಅವರೇ ಬೇಕಾದರೆ ಅಳಲಿ'

ಸ್ವಾಮಿಗಳ ಮಾತು ಕೇಳಿ ಅಲ್ಲಿ ಕೂಡಿದ್ದ ಭಕ್ತ ಜನ ಬಾಯಲ್ಲೇ ಹಲ್ಲು ಗಟ್ಟಿಯಾಗಿ ಹಿಡಿದು ನಕ್ಕುಬಿಟ್ಟರು. ಆತ ಬೆಣ್ಣೆ ನುಂಗಿದ ಬೆಕ್ಕಿನಂತೆ ಮೆಲ್ಲನೆ ಕಾಲುಕಿತ್ತ.

# ರಾಮಪ್ಪ ದೇಸಾಯಿಗೆ ಅನುಗ್ರಹ

ರಾಮಪ್ಪ ದೇಸಾಯಿ ತನ್ನ ದೇಸಗತಿಯ ಕಾರ್ಯಬಾಹುಲ್ಯದಲ್ಲಿ ಚಿತ್ತರಗಿಯ ಪೀಠವನ್ನು ಮರೆಯಲಿಲ್ಲ. ಒಂದರ್ಥದಲ್ಲಿ ಆತ ಚಿತ್ತರಗಿಯ ಪೀಠವನ್ನು ಕಾಪಾಡಿದ. ಇನ್ನೊಂದರ್ಥದಲ್ಲಿ ಚಿತ್ತರಗಿಯ ಪೀಠವು ಅವನನ್ನು ಕಾಪಾಡಿತು. ಒಂದು ರಾಜಪೀಠ, ಇನ್ನೊಂದು ನಿರಂಜನ ಪೀಠ. ಈ ನಿರಂಜನ ಪೀಠದ ಆಡಿಯಾಳಾಗಿ ಆ ರಾಜಪೀಠವು ತನ್ನ ಗುಣೋನ್ನತಿಯನ್ನು ಸಾಧಿಸಿತು.

ಹೀಗಿರುವಾಗ ರಾಮಪ್ಪ ದೇಸಾಯಿಯ ದೇಸಗತಿಯ ದಾಯಾದಿಗರ ಕೈ ಸೇರುವಂಥ ಗಂಭೀರ ಭೀಕರ ಸ್ಥಿತಿ ಬಂದಿತು. ಅವನಿಗೆ ಮಕ್ಕಳಿಲ್ಲದುದ ರಿಂದ ದತ್ತಕ ಸಂಬಂಧವನ್ನು ಹೊಂದಿದ್ದ. ಇದು ಸಹನೆಯಾಗದ ದಾಯಾದಿ ಗರು ನ್ಯಾಯ ಹೂಡಿದರು. ದೇಸಗತಿಯ ನ್ಯಾಯವೆಂದರೆ ಸಾಮಾನ್ಯವೆ? ಆಗಿನ ಅಗ್ಗಳತೆಯ ಕಾಲದಲ್ಲಿ ಪ್ರತಿಯೊಬ್ಬರೂ ಐವತ್ತು ಸಾವಿರ ರೂಪಾಯಿ ಸೂರೆ ಮಾಡಿದರಂತೆ! ಆದರೆ ಕೊನೆಗೂ ರಾಮಪ್ಪನ ಕೇಸು ಮೇಲಿನ ಕೋರ್ಟಿ ನಲ್ಲಿ ಉರುಳಿಬಿತ್ತು!! ಕೋಟ್ಯವಧಿ ರೂಪಾಯಿಗಳ ಪ್ರಚಂಡ ದೇಸಗತಿ ಆಸ್ತಿ ಕೈಬಿಡುವ ಪ್ರಸಂಗ ಬಂದಿತು. ರಾಮಪ್ಪ ತುಂಬ ನಿರಾಶನಾಗಿ ಶಿವಯೋಗಿಗಳ ಹತ್ತರ ಬಂದ. ತನ್ನ ಮನದ ಆಳಲನ್ನು ತೋಡಿಕೊಂಡ. ಶಿವಯೋಗಿಗಳನ್ನು ಚಿತ್ತರಗಿ ಪೀಠಕ್ಕೆ ತಂದ ಧಣಿಯು ಈಗ ಶಿವಯೋಗಿಗಳ ಪಾದದ ಮೇಲೆ ಬಿದ್ದು ಆಳತೊಡಗಿದ, ಆಕ್ರಂದಿಸತೊಡಗಿದ. ವಿಜಯ ಮಹಾಂತ ಶಿವಯೋಗಿ ಗಳು ಅವನಿಗೆ ಈ ದಾವೆಯನ್ನು ಇಲ್ಲಿಗೇ ಬಿಡದೆ ಮುಂದುವರಿಸಲು ಅಪ್ಪಣೆ ನೀಡಿದರು. ಅವರ ಸೂಚನೆಯಂತೆ ರಾಮಪ್ಪ ಕೊನೆಯ ಬಾರಿಯ ಪ್ರಯತ್ನ ವೆಂದು ನಿರಾಶೆಯಿಂದಲೆ ನ್ಯಾಯವನ್ನು ಇಂಗ್ಲಂಡ ಪ್ರಿವ್ಹಿ ಕೌನ್ಸಿಲ್ಲಿಗೆ ಒಯ್ದ. ಆದರ ಲಕ್ಷಣಗಳನ್ನು ಕಂಡರೆ ನ್ಯಾಯ ಸಂಪೂರ್ಣ ಕೈಬಿಟ್ಟಂತೆಯೆ ಆಗಿಬಿಟ್ಟಿತು. ಎಲ್ಲರೂ 'ರಾಮಪ್ಪನವರ ದೇಸಗತಿ ಹೋಯಿತು' ಎಂದೆ ನಂಬಿಬಿಟ್ಟರು. ಸ್ವತಃ ರಾಮಪ್ಪ ದೇಸಾಯಿಯೂ ನಿರ್ವಿಣ್ಣನಾದ. ತನಗಾದ ಅವಮಾನದ ಸಂಕಟವನ್ನು ತಾಳಲಾರದೆ ಮತ್ತೆ ಶಿವಯೋಗಿಗಳ ಬಳಿಗೆ ಬಂದು— 'ಬುದ್ಧಿ, ಕೇಸು ಕೈಬಿಟ್ಟಂತಾಗಿದೆ. ಆಶೆ ಬಿಟ್ಟಿದ್ದೇನೆ' ಎಂದ. ಅದಕ್ಕೆ ಶ್ರೀಗಳು—

'ಕೇಸು ನಿನ್ನಂತೆ ಆಗಿದೆಯಲ್ಲಪ್ಪಾ ರಾಮಪ್ಪಾ.'

ಎಂದರು. ಶಿವಯೋಗಿಗಳು ಆ ಕೇಸನ್ನು ತಿಳಿದುಕೊಳ್ಳಲಿಕ್ಕೆ ಇಂಗ್ಲಂಡಕ್ಕೆ ಹೋಗಿದ್ದರೆ? ಅವರ ಜ್ಞಾನಶಕ್ತಿ ಅಷ್ಟೊಂದು ಸೂಕ್ಷ್ಮವಾಗಿತ್ತು. ಸಮರ್ಥ ವಾಗಿತ್ತು. ಅವರ ವಾಣಿಯಂತೆ ಇಂಗ್ಲಂಡದ ಪ್ರಿವ್ಹಿ ಕೌನ್ಸಿಲ್ಲಿನಲ್ಲಿ ನ್ಯಾಯ ರಾಮಪ್ಪ ದೇಸಾಯಿಯಂತೆಯೇ ಆಗಿಬಂದಿತು.

ರಾಮಪ್ಪ ದೊರೆ ಉತ್ಕಟ ಹರ್ಷಭರಿತನಾಗಿ ಶಿವಯೋಗಿಗಳಿಗೆ ಪ್ರಣಾ ಮಗಳನ್ನು ಸಲ್ಲಿಸಲು ಚಿತ್ತರಗಿ ಮಠಕ್ಕೆ ಬಂದ—'ಬುದ್ಧೀ ನಿಮ್ಮ ಅನುಗ್ರಹ ದಿಂದ ನಾನು ಬದುಕಿದೆ' ಎಂದ. ಅದಕ್ಕೆ ಶ್ರೀಗಳು—'ನನ್ನ ಅನುಗ್ರಹ ಎಲ್ಲಿಂದ ಬಂತೋ ರಾಮಪ್ಪಾ. ಅದು ಶಿವನ ಅನುಗ್ರಹ'ವೆಂದು ಹೇಳಿದರು. ರಾಮಪ್ಪ ದೇಸಾಯಿ ಒಂದು ದೊಡ್ಡ ಬೆಳ್ಳಿ ತಾಟಿನ ತುಂಬ ಸಾವಿರಾರು ರಾಣಿ ರೂಪಾ ಯಿಗಳನ್ನು ತುಂಬಿ ಶಿವಯೋಗಿಗಳ ಪಾದಕ್ಕೆ ಅರ್ಪಿಸಿದ. ಅದನ್ನು ಕಂಡು ಶಿವಯೋಗಿಗಳು ನಕ್ಕರು. ಅವರ ಪಕ್ಕದಲ್ಲೇ ಒಬ್ಬ ಬಡ ಜಂಗಮ ಕುಳಿತಿದ್ದ. ಶಿವಯೋಗಿಗಳು ತಾಟಿಗೆ ಕೈಹಾಕಿ ಒಂದು ಮುಷ್ಟಿಗೆ ಬರುವಷ್ಟು ರೂಪಾಯಿ ಗಳನ್ನು ತೆಗೆದುಕೊಂಡರು. ಎಣಿಸಲಾಗಿ ಹನ್ನೊಂದು ರೂಪಾಯಿಗಳಿದ್ದವು. ಆ ಬಡ ಜಂಗಮನನ್ನು ಕರೆದು—'ನಿನ್ನ ನಸೀಬ ಇಷ್ಟs ಐತಿ ತೊಗೊ' ಎಂದು ಅವನ ಉಡಿಯಲ್ಲಿ ಹಾಕಿದರು. ಉಳಿದ ಹಣವನ್ನು ರಾಮಪ್ಪನಿಗೆ ವಾಪಸು ಕೊಟ್ಟರು, ಅವರ ಆತ್ಮದ ಉಸಿರು ಅಷ್ಟೊಂದು ನಿರ್ಮಲವಾಗಿತ್ತು! ನಿರಾಶಾವಾದ ಅವನ ರಕ್ತದ ರಕ್ತವಾಗಿತ್ತು!! ಲಕ್ಷಕ್ಕೊಬ್ಬ ಶರಣ, ಕೋಟಿ ಗೊಬ್ಬ ಶಿವಯೋಗಿ ಎಂಬ ಮಾತು ಸುಳ್ಳೇಕೆ?

# ಕಂಠಿಯುವರಿಗೆ ಭವಿಷ್ಯವಾಣಿ

ಕಂಠಿ ರುದ್ರಪ್ಪನವರು ಇಲಕಲ್ಲ ಮಠದ ಜೊಚ್ಚಲು ಮಗನಂತೆ ಬೆಳೆದು ಬಂದ ನಿಷ್ಠಾವಂತ ಭಕ್ತರು. ಶಿವಯೋಗಿಗಳಲ್ಲಿ ಅವರಿಗೆ ಅಪಾರ ಭಕ್ತಿ. ವಿಪುಲ ವಿಶ್ವಾಸ. ಶಿವಯೋಗಿಗಳಾದರೂ ಮಠದ ಯಾವುದೆ ಕಾರ್ಯಮಾಡು ವಾಗ ನಾಲ್ಕಾರು ಜನ ಭಕ್ತರ ಕಿವಿಯ ಮೇಲೆ ಇಟ್ಟೇ ಮಾಡುತ್ತಿದ್ದರು. ಅಂಥ ಸದ್ಭಕ್ತರಲ್ಲಿ ರುದ್ರಪ್ಪನವರೂ ಒಬ್ಬ ಪ್ರಮುಖರಾಗಿರುತ್ತಿದ್ದರು. ತಮಗೆ ಸರಿ ಎನಿಸಿದಂತೆ ಶಿವಯೋಗಿಗಳಿಗೆ ವ್ಯಾವಹಾರಿಕ ವಿಷಯುಗಳಲ್ಲಿ ಸಲಹೆ ಸೂಚನೆ—ಸೇವೆ-ಸಹಾಯುಗಳನ್ನು ಸಲ್ಲಿಸುತ್ತಿದ್ದರು.

ರುದ್ರಪ್ಪನವರು ಪ್ರತಿ ದಿನ ಮುಂಜಾನೆ ಸ್ನಾನ—ಲಿಂಗಪೂಜೆ ತೀರಿಸಿ ಕೊಂಡು ಮಠಕ್ಕೆ ಬಂದು ಶಿವಯೋಗಿಗಳ ಪಾದದರ್ಶನ ಪಡೆದೇ ಮುಂದಿನ ತಮ್ಮ ಕಾರ್ಯಕ್ಕೆ ಅಣಿಯಾಗುತ್ತಿದ್ದರು. ಈ ನಿಯುಮವನ್ನು ಎಂದಿಗೂ ತಪ್ಪಿಸುತ್ತಿರಲಿಲ್ಲ. ಒಂದು ವಿಶೇಷವೆಂದರೆ ಈ ರೀತಿ ಮಠಕ್ಕೆ ದರ್ಶನಕ್ಕೆಂದು ಹೋಗುವಾಗ, ತಮ್ಮ ನಾಲ್ಕು ವರ್ಷದ ಮಗ ಶಿವಲಿಂಗನನ್ನು ಮರೆಯದೆ ಕರೆದೊಯ್ಯುತ್ತಿದ್ದರು. ಬಾಲಕ ಶಿವಲಿಂಗ ಕಂಡವರ ಕಣ್ಮಣಿಯಾಗಿದ್ದ. ಎಲ್ಲರೂ ಅವನನ್ನು ಕೈಯಲ್ಲಿ ಎತ್ತಿಕೊಂಡು ತಿರುಗಾಡುವವರೆ !!

ಶಿವಯೋಗಿಗಳಿಗೆ ಮಕ್ಕಳೆಂದರೆ ಎಲ್ಲಿಲ್ಲದ ಪ್ರೇಮ. ಪರಮಾತ್ಮನ ಪವಿತ್ರವಾದ ಸ್ವರೂಪವನ್ನು ಅವರು ಆಕಳುಗಳಲ್ಲಿ, ಬಡವರಲ್ಲಿ, ಹೆಣ್ಣುಮಕ್ಕ ಳಲ್ಲಿ, ಪುಟ್ಟಕೂಸುಗಳಲ್ಲಿ ಕಾಣುತ್ತಿದ್ದರು. ಅವರೊಂದಿಗೆ ಬೇಕು ಬೇಡೆಂಬಂತೆ ಆಡುತ್ತಿದ್ದರು. ಹೀಗಾಗಿ ಶಿವಲಿಂಗ ಪ್ರತಿದಿನವೂ ಅವರ ಮುಂಜಾನೆಯ ಮಿತ್ರನಾದ. ಪ್ರಾತಃಕಾಲದ ಲಿಂಗಪೂಜಾನಂತರ ಅವನೊಂದಿಗೆ ಕೆಲವು ಕ್ಷಣ ವಿನೋದದಲ್ಲಿ ಕಳೆಯುವದು ವಾಡಿಕೆಯೆ ಆಯಿತು. ಆ ಎಳೆ ಬಾಲಕನಲ್ಲೂ ಶಿವಯೋಗಿಗಳಲ್ಲಿ ಅಪಾರ ಆಕರ್ಷಣೆ, ಭಕ್ತಿ, ಆನಂದಗಳು ಕಂಡುಬಂದವು. ಅವರ ವಾತ್ಸಲ್ಯದಲ್ಲಿ ಆತ ಸರಿಗೆ ಸರಿಯಾಗಿ ಬೆರೆತುಕೊಂಡ.

ಹೀಗಿರುವಾಗ ಒಂದು ಸನ್ನಿವೇಶ ವಿಚಿತ್ರವೇ ಆಯಿತು. ರುದ್ರಪ್ಪನವರು ಒಂದು ದಿನ ಮಗನನ್ನು ಕರೆದುಕೊಂಡು ಮಠಕ್ಕೆ ಬಂದರು. ಶಿವಯೋಗಿ ಗಳೊಂದಿಗೆ ಮಠದ ಹೊರಜಗುಲಿಯ ಮೇಲೆ ಏನೋ ಚರ್ಚಿಸುತ್ತ ನಿಂತರು.

ಅಷ್ಟರಲ್ಲಿ ಈ ಬಾಲಕನಿಗೆ ಏನು ತಿಳಿಯಿತೊ ಏನೊ ಶಿವಯೋಗಿಗಳ ಕೋಣೆಯನ್ನು ಹೊಕ್ಕುಬಿಟ್ಟ. ಅದು ಅವರ ಗಮನಕ್ಕೆ ಬರಲೇ ಇಲ್ಲ.

ಒಂದೆರಡು ಕ್ಷಣ ಗತಿಸಿದ ಮೇಲೆ ರುದ್ರಪ್ಪನವರೊಂದಿಗೆ ಶಿವಯೋಗಿಗಳು ತಮ್ಮ ಕೊಣೆಗೆ ಬಂದರು. ಆಗ ಅಲ್ಲಿ ನೋಡುತ್ತಾರೆ; ಸ್ವಸ್ಥವಾಗಿ ಶಿವಯೋಗಿಗಳು ಪವಡಿಸುವ ಗದ್ದುಗೆಯನ್ನೇ ಏರಿ ಸ್ವಸ್ಥವಾಗಿ ಕುಳಿತುಬಿಟ್ಟಿದ್ದಾನೆ. ಮಗನ ಈ ಉದ್ಧಟತನವನ್ನು ಕಂಡು ರುದ್ರಪ್ಪನವನು ಬೆಂಕಿಯಂತೆ ಸಿಡಿದು ಹೊಡೆದು ಹೋದರು. ಆದರೆ ಶಿವಯೋಗಿಗಳು ಅವರನ್ನು ತಕ್ಷಣವೆ ತಡೆದು ಹೇಳಿದರು—

'ಅವನು ಮುಂದೆ ಗಾದಿಮೇಲೆ ಕೂಡ್ರುವವ ಅದಾನಪಾ. ಅದಕ್ಕs ಕೂತಾನು.'

ಶಿವಯೋಗಿಗಳ ಅಮರವಾಣಿ ಅಕ್ಷರಶಃ ಆ ಬಾಲಕನ ಜೀವನದಲ್ಲಿ ನಿಜವಾಯಿತು. ಆತನೆ ಮುಂದೆ ಪದವೀಧರನಾಗಿ ಕಾಯಿದೆ ಶಾಸ್ತ್ರದಲ್ಲಿ ಪಾರಂಗತನಾದ. ಮುಂಬೈ ರಾಜ್ಯದ ವಿಧಾನ ಸಭೆಯಲ್ಲಿ ಉಪಸಭಾಪತಿಯಾದ. ಮುಂದೆ ಮೈಸೂರ ರಾಜ್ಯದ ವಿಧಾನ ಸಭೆಗೆ ಚುನಾಯಿತನಾಗಿ ಹೋದ. ಅಲ್ಲಿ ಸಭಾಪತಿಯಾಗಿ, ಶಿಕ್ಷಣ ಮಂತ್ರಿಯಾಗಿ, ಕಾಯದೆ ಮಂತ್ರಿಯಾಗಿ ಅಲ್ಲದೆ ಕೆಲ ಕಾಲ ಮೈಸೂರ ಸರಕಾರದ ಮುಖ್ಯಮಂತ್ರಿಯಾಗಿ ಬಾಳಿದ! ಬೆಳಗಿದ!! ಕೀರ್ತಿಶಾಲಿಯಾದ!!! ಜೀವನದ ಕೊನೆಯ ಹಂತದಲ್ಲಿ ಬಸವಣ್ಣನವರ ಅಷ್ಟಶತಮಾನೋತ್ಸವವು ನಾಡಿನಲ್ಲೆಲ್ಲ ವಿಜೃಂಭಣೆಯಿಂದ ನೆರವೇರಲು ಕಾರಣೀಭೂತನಾದ. ಅದರ ಪ್ರಧಾನ ಶಕ್ತಿಯಾದ.

ವಿಜಯ ಮಹಾಂತ ಶಿವಯೋಗಿಗಳ ದರ್ಶನವಾಣಿ ಸಾಮಾನ್ಯವೆ? ಅವರ ವಾಣಿಯ ಮೇಲೆ ಲೋಕದ ಭವಿಷ್ಯವೇ ಆಡುತ್ತಿತ್ತು! ಅಷ್ಟೇ ಏಕೆ ಭವಿಷ್ಯವೆ ಅವರ ವಾಣಿಯಂತೆ ರೂಪಿತವಾಗುತ್ತಿತ್ತು!!

# ಮಾತೆಯ ಮಮತೆಯ ಕೂಗು

ಸಾವಿರ ಕೂಗುಗಳ ಆಳದಲ್ಲಿ ಒಂದು ನಿರಾಳವಿದೆ. ಆ ನಿರಾಳದಲ್ಲಿ ಒಂದು ಮಹಾಸಾಗರವಿದೆ. ಆ ಸಾಗರದ ಆಚೆಗೆ ಇನ್ನೊಂದು ಸಾಗರವಿದೆ. ಅಲ್ಲೊಂದು ಮಂಜಿನ ಮಹಾಪುಂಜವಿದೆ. ಆ ಮಂಜಿನ ವಾರಾಶಿಯಲ್ಲಿ ಹಿಮ ಗಡ್ಡೆಯೊಂದು ತೇಲುತ್ತಿದೆ. ಆ ಹಿಮಗಡ್ಡೆಯಲ್ಲೊಂದು ಶೀತಲ ಗವಿ ಇದೆ. ಅಲ್ಲಿ ಬೇಕಿ ಬಿದ್ದ ಹೃದಯದ ಒಂದು ಹೆಣ್ಣು ಜೀವಿ ! ರೋದಿಸುತ್ತಿದ್ದಾಳೆ–ಹಲುಬುತ್ತಿದ್ದಾಳೆ–ಹಂಬಲಿಸುತ್ತಿದ್ದಾಳೆ–ಒಮ್ಮೊಮ್ಮೆ ಆನಂದಿಸುತ್ತಿದ್ದಾಳೆ–ಇನ್ನೊಮ್ಮೆ ಆಕ್ರಂದಿಸುತ್ತಿದ್ದಾಳೆ !! ಅವಳ ಕರುಳ ಮಾಲೆಯ ಹೂವು ಹರಿದು ಹೋಗಿದೆ !!!

ಬಹು ದೂರ....ದೂರ....ದೂರ....ದೂರ........! ಆ ಕೂಗು ಶಿವ ಯೋಗಿಗೆ ನಿಲುಕದು, ಕೇಳದು. ಆ ಕೂಗು ತನ್ನ ಪ್ರೇಮದ ಪಂಜರದಲ್ಲಿ ತಾನೆ ಬಿದ್ದು ಒರಲುತ್ತಿದೆ ! ಕೊರಗುತ್ತಿದೆ ! ಸಾಯುತ್ತಿದೆ !!!

ಅವಳಾರು ಗೊತ್ತೆ ? ಆ ಮುಗ್ಧ ಜೀವಿ ಯಾರು ಗೊತ್ತೆ ? ಆ ಕರುಳ ಬಳ್ಳಿಯ ಹೆಂಗರುಳು ಯಾರು ಗೊತ್ತೆ ? ಆ ಕಣ್ಣೀರ ವನದ ವಾತ್ಸಲ್ಯದ ವನದೇವಿ ಯಾರು ಗೊತ್ತೆ?

ಸಸಿವಾಳದ ಮಹಾತಾಯಿ ! ಮಹಾಯೋಗಿಯನ್ನು ಹೆತ್ತ ಮಹಾ ಮಾತೆ !! ಗೌರಮ್ಮ !!!

ಪೂರ್ವಾಶ್ರಮ ನಿರಸನ ವ್ರತಧಾರಿಯಾದ ಮಳಿಯಪ್ಪಾರ್ಯ ತನ್ನ ಹಿಂದಿನ ಸಾಂಸಾರಿಕ ಸಂಬಂಧಗಳನ್ನೆಲ್ಲ ಅಲ್ಲೇ ಒಗೆದು ಬಂದಿದ್ದ. ಆದರೆ ಆತ ಕೈಬಿಟ್ಟರೂ ಕೈಬಿಡದಂತೆ ತಾಯಿಯ ಆ ದಿವ್ಯ ಕರುಣಾಮೂರ್ತಿ ಎದುರಿನಲ್ಲೆ ನಿಂತಂತಾಗುತ್ತಿತ್ತು. ಅವಳು ಹಾಲುಣಿಸಿದಂತಾಗುತ್ತಿತ್ತು. ಎಣ್ಣೆ ಹಚ್ಚಿ ಎರೆ ದಂತಾಗುತ್ತಿತ್ತು. ಮೊಸರನ್ನ ಉಣಿಸಿ ಮಲಗಿಸಿದಂತಾಗುತ್ತಿತ್ತು. 'ನನ್ನ ಮರೆತೆಯಾ ಮಳಿ?' ಎಂದು ಹೇಳಿದಂತಾಗುತ್ತಿತ್ತು. 'ಮಳಿ. ನಾನು ನಿನ್ನನ್ನು ಬಿಟ್ಟು ಹೇಗೆ ಇರಲಿ' ಎಂದು ಕಣ್ಣೀರು ಸುರಿಸಿದಂತಾಗುತ್ತಿತ್ತು. 'ನಾನು

ಸಾಯುತ್ತೇನೆ ಮಳಿ, ನಾನು ಸಾಯುತ್ತೇನೆ' ಎಂದು ಸೆರಗು ಮುಚ್ಚಿ ರೋದಿಸಿದಂತಾಗುತ್ತಿತ್ತು.

ಮುಂದೆ ಮಳೆಯಪ್ಪಾರ್ಯ ಚಿತ್ತರಗಿ ಪೀಠದ ಜ್ಞಾನಜ್ಯೋತಿಯಾದಾಗ ಆ ವಾತ್ಸಲ್ಯದ ಕೂಗು ದೂರ ದೂರ ದೂರ ಸರಿದು ಮರೆಯಾಯಿತು! ಮರೆತುಹೋಯಿತು !!

ಆದರೆ ತಾಯಿ ಗೌರಮ್ಮ ಮರೆಯಲೆಂತು ಸಾಧ್ಯ? ಮಗ ಚಿತ್ತರಗಿ ಪೀಠ ಏರಿದಾಗ ವೀರಯ್ಯನವರು ಗೌರಮ್ಮನೊಂದಿಗೆ ಆ ಮಹಾಸಮಾರಂಭದಲ್ಲಿ ಗುಪ್ತವಾಗಿಯೆ ಭಾಗವಹಿಸಿದ್ದರು. ನಂತರ ಒಂದೆರಡು ಸಲ ಚಿತ್ತರಗಿಗೆ ಬಂದು ಶಿವಯೋಗಿಗಳ ದರ್ಶನ ಪಡೆದರು. ಆದರೆ ಆತ ಶಿವಯೋಗಿ! ಇವರು ಶಿವಯೋಗಿಯನ್ನು ಲೋಕಕ್ಕೆ ದಾನವಿತ್ತ ಹೆತ್ತಮ್ಮಗಳು !!

ವಿಜಯ ಮಹಾಂತ ಶಿವಯೋಗಿಗಳು ತಮ್ಮ ಪೂರ್ವಾಶ್ರಮದ ಈ ದೇವತೆಗಳನ್ನು ಕಣ್ಣಿನಿಂದ ನೋಡಿದರೂ ಆತ್ಮೀಯತೆಗೆ ಬಲಿಬೀಳಲಿಲ್ಲ. ಆಗಲೆ ಅವರು ಯಾವುದಕ್ಕೂ ಸೊಪ್ಪು ಹಾಕದಂತೆ ಆತ್ಮಲೋಕದ ವೈರಾಗ್ಯದ ಕೆಂಡದಲ್ಲಿ ಲೀನವಾಗಿ ಹೋಗಿದ್ದರು. ಈ ವಾತ್ಸಲ್ಯದ ಮುಪ್ಪಿನ ಹಕ್ಕಿಗಳು ದೂರದಿಂದಲೇ ಶಿವಯೋಗಿಯ ಸಿರಿಯನ್ನು ಕಂಡು ಸಂತುಷ್ಟಿಯ ಕಣ್ಣೀರನ್ನು ಕರೆದು ಮೆಲ್ಲನೆ ಜಾರಿಹೋಗಿದ್ದವು. ಆತ ಮಳೆಯಪ್ಪಾರ್ಯನಿರುವ ವರೆಗೆ ಮಗನಿದ್ದ. ಈಗ ಮಗನಲ್ಲ!! ಮಗನೆಂದು ಕರೆದರೆ ಅದೇ ಘನಘೋರ ಮಹಾಪಾಪವಲ್ಲವೆ ?

ಕಾಲಚಕ್ರ ಉರುಳಿತು. ಗೌರಮ್ಮ ಒಂದು ದಿನ ತುಂಬಿದ ಮುತ್ತೈದೆಯಾಗಿ—'ಮಳೀ....ಮಳೀ....ಮಳೀ....ಮಳೀ....' ಎಂದು ಒರಲುತ್ತ ತನ್ನ ಅಂತ್ಯಯಾತ್ರೆಗೆ ಸಿದ್ಧಳಾದಳು. ವೀರಯ್ಯನವರು ತಮ್ಮ ಕೊನೆಯ ಕರುಣಾ ತೀರ್ಥವನ್ನು ಆ ದೇವಿಯ ಬಾಯಲ್ಲಿ ಹಾಕಿದರು. ಗೌರಮ್ಮ ಕೊನೆಯುಸಿರು ಬಿಡುವ ಒಂದೆರಡು ಕ್ಷಣ ಮೊದಲು ಅತಿಯಾದ ವೇದನೆಯಿಂದ ಪತಿಗೆ ಕೇಳಿದಳು—

'ನನ್ನ ಮಳಿ ಬರಲಿಲ್ಲವೆ?'

'ಇಲ್ಲ.'

'ಯಾಕೆ ಬರಲಿಲ್ಲ?'

'.....................'

'ಹೇಳಿರಿ. ಯಾಕೆ ಬರಲಿಲ್ಲ? ನನ್ನ ಮೇಲೆ ಸಿಟ್ಟಾದನೆ?'

'ಇಲ್ಲ.'

'ನನ್ನ ಮರೆತನೆ?'

'.................'

'ಹುಂ. ಹೌದು. ಆತ ಮರೆತ.... ನನ್ನ ಮಳಿ ನನ್ನ ಮರೆತ.... ನನ್ನ ಮರೆತ....ನನ್ನ ಮರೆತ....'

ವೀರಯ್ಯನವರು ಆ ಮಹಾತಾಯಿಯ ತಲೆಯನ್ನು ಮೃದುವಾಗಿ ನೇವರಿಸುತ್ತ ಹೇಳಿದರು —

'ನಿನ್ನ ಮಳಿ ಮಹಾಯೋಗಿಯಾಗಿದ್ದಾನೆ. ಸತ್ಪುರುಷನಾಗಿದ್ದಾನೆ. ಶಿವನಾಗಿದ್ದಾನೆ.'

'ಹೌದ?'

'ಹೌದು.'

'ನನ್ನ ಮಗ ಯೋಗಿಯಾಗಿದ್ದಾನೆಯೆ?'

'ಹೌದು ಯೋಗಿಯಾಗಿದ್ದಾನೆ.'

'ನನ್ನ ಮಳಿ ಸತ್ಪುರುಷನಾಗಿದ್ದಾನೆಯೆ?'

'ಹೌದು. ಸತ್ಪುರುಷನಾಗಿದ್ದಾನೆ.'

'ನನ್ನ ಕಂದ ಶಿವಯೋಗಿಯಾಗಿದ್ದಾನೆಯೇ?'

'ಹೌದು. ಮಹಾಶಿವಯೋಗಿಯಾಗಿದ್ದಾನೆ.'

'ಕಲ್ಬೆಟ್ಟದ ಶಿವಯೋಗಿಗಳಿಗಿಂತಲೂ ದೊಡ್ಡ ಶಿವಯೋಗಿಯೆ?'

'ಅವರಿಗಿಂತಲೂ ದೊಡ್ಡವನಾಗಿದ್ದಾನೆ. ಅವನು ಹೇಳಿದಂತೆ ಆಗಿಬಿಡುತ್ತದೆ. ನುಡಿದಂತೆ ನಡೆಯುತ್ತದೆ.'

'ಹೌದೆ?'

'ಹೌದು.'

'ಈಗ ಅವನಿಗೆ ಹಾಲು ಯಾರು ಕುಡಿಸುತ್ತಾರೆ?'

'ಸಾಕ್ಷಾತ್ ಶಿವನೆ ಕುಡಿಸುತ್ತಾನೆ.'

'ಯಾರು ಎರೆಯುತ್ತಾರೆ?'

'ಶಿವನೆ ಎರೆಯುತ್ತಾನೆ.'

'ಯಾರು ಉಣಿಸುತ್ತಾರೆ?'

'ಶಿವನೆ ಉಣಿಸುತ್ತಾನೆ.'

'ಹೌದೆ? ಹಾಗಾದರೆ ನಾನು ಅವನನ್ನು ನೋಡುವದಿಲ್ಲವೇ?'

'ಯಾಕೆ ಇಲ್ಲ? ಅವಶ್ಯವಾಗಿ ನೋಡುತ್ತ ಶಿವನ ಹತ್ತಿರ ಆನಂದದಿಂದ ಹೋಗು. ಶಿವನೊಂದಿಗೆ ಅವನೂ ಇದ್ದಾನೆ. ಅಲ್ಲಿ ನಿನ್ನನ್ನು ಮಾತಾಡಿಸುತ್ತಾನೆ. ಕರೆಯುತ್ತಾನೆ. ಆಡುತ್ತಾನೆ. ಹಾಡುತ್ತಾನೆ. ಅಲ್ಲಿ ಹೋಗು. ಶಿವನ ಜೊತೆಗೆ ಅವನು ಶಿವಯೋಗಿಯಾಗಿದ್ದಾನೆ. ಶಿವನೇ ಅವನಾಗಿದ್ದಾನೆ.'

'ಹೌದೆ?........ ಹಾಗಾದರೆ ನಾನು ಬರುತ್ತೇನೆ. ನನ್ನ ಮಳಿಯ ಭೆಟ್ಟಿಗೆ ಹೋಗುತ್ತೇನೆ........ಮಳೀ........ಮಳೀ........ಮಳೀ......ಬಂದೆ.... ಬಂದೆ........ನಿನ್ನ ಹತ್ತರ ಬಂದೆ....! ನನ್ನ ದಾರಿ ಬಹಳ ನೋಡಿದೆಯಾ....? ನನ್ನ ಕರೆದು ಅತ್ತೆಯಾ.... ಅಳಬೇಡ ಮಳಿ........ ಅಳಬೇಡ.... ನಾನೂ ನಿನ್ನ ಲೋಕಕ್ಕೇ ಬಂದೆ........ನಿನ್ನ ಲೋಕಕ್ಕೆ........!'

ಮಹಾತಾಯಿಯ ಪ್ರಾಣಪಕ್ಷಿ ಶಿವಲೋಕಕ್ಕೆ ಹಾರಿಹೋಯಿತು! ಶಿವನೊಂದಿಗೆ ಒಂದಾಯಿತು!! 'ಮಳಿ'ಯೊಂದಿಗೆ ಒಂದಾಯಿತು!!!

ವಿಜಯ ಮಹಾಂತ ಶಿವಯೋಗಿಗಳಿಗೆ ಯಾರೋ ಭಕ್ತರು ಬಂದು, ಅವರ ಪೂರ್ವಾಶ್ರಮದ ಗೌರಮ್ಮ ಲಿಂಗೈಕ್ಯವಾದ ಸುದ್ದಿ ತಿಳಿಸಿದರು. ಅದಕ್ಕೆ ಅವರು 'ಶಿವನ ಇಚ್ಛೆ' ಎಂದಿಷ್ಟೇ ನುಡಿದು ಸುಮ್ಮನಾಗಿಬಿಟ್ಟರು. ತಮ್ಮ ನಿತ್ಯ ಕಾಯಕದಲ್ಲಿ ನಿರತರಾಗಿಬಿಟ್ಟರು. ಈ ಮಾತಿಗೆ ಏನೊಂದೂ ಗಮನ ನೀಡಲಿಲ್ಲ. ಆ ದಿನ ಸಂಜೆ ಅವರು ಎಂದಿನಂತೆ ಆಕಳ ಹಾಲು ಸೇವಿಸಲಿಲ್ಲ. ಅಷ್ಟೇ !

## ಶಿವಯೋಗ ಮಂದಿರದ ಸ್ಥಾಪನೆ

ಕ್ರಿಸ್ತಾಬ್ದ ೧೯೦೮. ಅಖಿಲ ಭಾರತ ವೀರಶೈವ ಮಹಾಸಭೆಯ ನಾಲ್ಕನೆಯ ಅಧಿವೇಶನವು ಬಾಗಿಲಕೋಟೆಯಲ್ಲಿ ಭಾರೀ ವಿಜೃಂಭಣೆಯಿಂದ ನೆರವೇರಿದೆ. ಶ್ರೀಮಂತ ಲಖಮಗೌಡ ಬಸವಪ್ರಭು ಸರದೇಸಾಯಿ ವಂಟಮುರಿ ಅವರು ಅಧ್ಯಕ್ಷತೆ ವಹಿಸಿದ್ದಾರೆ. ನಾಡಿನ ಅಸಂಖ್ಯಾತ ಜನರು ಕಿಕ್ಕಿರಿದು ಕೂಡಿದ್ದಾರೆ. ಅಧಿವೇಶನದ ಮಂಟಪವೇ ಒಂದು ಪುಟ್ಟ ಪಟ್ಟಣದಂತೆ ವಿಶಾಲವಾಗಿದೆ. ನುರಿತ ಮಂಟಪ ಶಿಲ್ಪದ ಕಲಾಕಾರರು ವರ್ಣರಂಜಿತವಾದ ದೃಶ್ಯಗಳಿಂದ ಅದನ್ನು ಭರ್ಜರಿಯಾಗಿ ಸಜ್ಜುಗೊಳಿಸಿದ್ದಾರೆ. ಅನೇಕ ಹರಗುರು ಚರಜಂಗಮ ಪೀಠಾಚಾರ್ಯರಿಗೆ, ಪ್ರೋಜ್ವಲ ತಪೋಬಲದ ಶಿವಯೋಗಿಗಳಿಗೆ ಪ್ರಬುದ್ಧ ಸ್ವಾಮಿಗಳಿಗೆ, ಸಿದ್ಧ ಸಾಧಕರಿಗೆ ಅದೊಂದು ಮುಕ್ತಿಯ ಮಂಟಪವಾಗಿದೆ.

ಈ ಅಧಿವೇಶನವು ಒಂದು ವಿಶಿಷ್ಟವಾದ ಉದ್ದೇಶಕ್ಕಾಗಿಯೇ ಸೇರಿತ್ತು. ಅದೆಂದರೆ ಆ ಕಾಲದಲ್ಲಿ ಮಠಮಾನ್ಯಗಳಿಗಿದ್ದ ವಟುಗಳ ಕೊರತೆ. ಭವ್ಯ ಪರಂ

ಪರೆಯುಳ್ಳ ಅನೇಕ ಮಠಗಳ ಗದ್ದುಗೆಯನ್ನು ಯಾರೋ ಯಾರೋ ಏರಿ ಬಿಡುತ್ತಿದ್ದರು. ತತ್ವ ತಿಳಿಯದೆ, ಆಚರಣೆ ಅರ್ಥವಾಗದೆ ಕಾವಿಧಾರಿಗಳಾದ ಮಾತ್ರಕ್ಕೆ ಸ್ವಾಮಿಗಳೆಂದು ಹೇಳಿಕೊಳ್ಳುವವರು ಅನೇಕ ಪೀಠಗಳ ದುರ್ದೆಶೆಗೆ ಕಾರಣರಾದರು. ಅವರ ನಡೆ-ನುಡಿಯಿಂದ ಸಾಮಾನ್ಯ ಜನತೆ ಬೇಸರಪಡುವಂ ತಾಯಿತು ಸಂಸಾರಿಕರು ನಾಚುವಂತಾಯಿತು. ಅನೇಕರಲ್ಲಂತೂ ವಿರಕ್ತತತ್ವದ ಅರ್ಥವೆ ಮರೆತು ಹೋಯಿತು. ತಮ್ಮ ಮಠಮಾನ್ಯಗಳಲ್ಲಿ ಪೂರ್ವಾಶ್ರಮದ ಅಣ್ಣ-ತಮ್ಮ-ಅಕ್ಕ-ತಂಗಿ-ತಾಯಿ-ಬಂಧು-ಬಳಗಗಳನ್ನು ಸೇರಿಸಿಕೊಂಡು, ಧಾರ್ಮಿಕ ವಿತ್ತವನ್ನು ಸ್ವಾರ್ಥಕ್ಕೆ ಪೋಲು ಮಾಡತೊಡಗಿದರು. ಇದನ್ನರಿತ ಕರ್ಮಯೋಗಿಗಳೂ ವ್ಯವಹಾರ ಕುಶಲಿಗಳೂ ಅನುಷ್ಠಾನ ಪಟುಗಳೂ ದಿವ್ಯ ಜ್ಞಾನಿಗಳೂ ಆದ ಹಾನಗಲ್ಲ ಕುಮಾರ ಸ್ವಾಮಿಗಳು ಶಿವಯೋಗ ಮಂದಿರ ವೆಂಬ ಸಂಸ್ಥೆಯನ್ನು ಸ್ಥಾಪಿಸುವ ಉದ್ದೇಶವನ್ನು ಈ ಅಧಿವೇಶನದಲ್ಲಿ ಪ್ರಬಲವಾಗಿ ಮಂಡಿಸಿದರು. ಅವರ ಕಳಕಳಿಯ ಕರೆಗೆ ನಾಡು ಓಗೊಟ್ಟಿತು. ಪರಿಷತ್ತು ಸೈಗೊಟ್ಟಿತು.

ಮಹಾಸಭೆಯ ಮರುದಿನವೆ ಸೊಲ್ಲಾಪುರದ ಶ್ರೀಮಂತ ರಾವಬಹಾದ್ದೂರ ವಾರದ ಅಪ್ಪಾ ಸಾಹೇಬರ ಅಧ್ಯಕ್ಷತೆಯಲ್ಲಿ ಆಲೋಚನಾ ಸಭೆಯು ಕೂಡಿತು. ಈ ಸಭೆಯ ಪ್ರಮುಖ ಉದ್ದೇಶ ಶಿವಯೋಗಮಂದಿರವನ್ನು ಆರಂಭಿಸುವದಾಗಿತ್ತು. ಇದೊಂದು ಅತ್ಯಂತ ಮಹತ್ವದ ವಿಷಯ. ಪ್ರಾಣಕ್ಕೂ ಪ್ರಾಣವಾದ, ಉಸಿರಿಗೂ ಉಸಿರಾದ ಮೂಲಭೂತ ಸಮಸ್ಯೆ. ಸಮಾಜದ ಎಲ್ಲ ಜವಾಬ್ದಾರೀ ಪ್ರತಿಷ್ಠಿತರನ್ನು ಇದಕ್ಕೆ ಆಮಂತ್ರಿಸಲಾಗಿತ್ತು. ಸರ್ವಮಠಗಳ ಸ್ವಾಮಿಗಳೂ ದಕ್ಷತೆಯಿಂದ ಸೇರಿದ್ದರು. ಎಲ್ಲರೂ ಒಬ್ಬರ ನ್ನೊಬ್ಬರು ಗಂಭೀರವಾಗಿ ನೋಡುತ್ತ ಸಮಗ್ರ ಸಮಾಜದ ಅಡಿಗಲ್ಲನ್ನೇ ನಿರ್ಣಯಿಸುವ ಮಹತ್ವದ ಚರ್ಚೆಯನ್ನು ಆರಂಭಿಸಿದರು.

ಶಿವಯೋಗ ಮಂದಿರವನ್ನು ಸ್ಥಾಪಿಸಬೇಕೆಂದು ನಿರ್ಣಯ ತೆಗೆದು ಕೊಂಡ ಮಾತ್ರಕ್ಕೆ ಮುಗಿಯಿತೆ ? ಅದನ್ನು ಎಲ್ಲಿ ಸ್ಥಾಪಿಸಬೇಕು. ಹೇಗೆ ಸ್ಥಾಪಿಸಬೇಕು ಎಂಬ ಸಮಸ್ಯೆ ಊಹಿಸಿದಷ್ಟು ಸರಳವಿರಲಿಲ್ಲ. ಕಾರ್ಯಕ್ಕೆ ನಿಂತಾಗಲೆ ಅದರ ಕಾಠಿಣ್ಯ ಅರ್ಥವಾದದ್ದು. ಆಲೋಚನಾ ಸಭೆಯಲ್ಲಿ ಅನೇಕರು ಅನೇಕ ಬಗೆಯ ಸ್ಥಾನಗಳನ್ನು ಹೇಳಿದರು. ಆಗ ಅಧ್ಯಕ್ಷರಾದ

ವಾರದ ಅಪ್ಪಾಸಾಹೇಬರು ದಿವ್ಯ ಸೂಚನೆಯೊಂದನ್ನೇ ಮುಂದಿಟ್ಟು ಹೇಳಿದರು—

'ಪೂಜ್ಯರೆ, ನಾವು ಶಿವಯೋಗ ಮಂದಿರವನ್ನು ಸ್ಥಾಪಿಸಬೇಕಾಗಿದೆಯಲ್ಲವೆ? ಆದರೆ ಶಿವಯೋಗ ಮಂದಿರವನ್ನು ಸ್ಥಾಪಿಸಲು ಹಾಗೂ ಶಿವಯೋಗ ಸಾಧನೆಗೆ ಯೋಗ್ಯವಾದ ಸ್ಥಾನವನ್ನು ಗುರುತಿಸಲು ಒಬ್ಬ ಶಿವಯೋಗಿಯೆ ಬೇಕಾಗುತ್ತಾನೆಂದು ನನ್ನ ನಮ್ರ ತಿಳುವಳಿಕೆ. ಈ ಮಾತು ನಿಮಗೆ ಒಪ್ಪಿಗೆಯೆ?'

ಎಲ್ಲರೂ ಏಕಕಂಠದಿಂದ ಹೇಳಿದರು—

'ಒಪ್ಪಿಗೆ, ಯಜಮಾನರೆ ಒಪ್ಪಿಗೆ. ಶಿವಮಂದಿರಕ್ಕೆ ಶಿವಯೋಗಿಯೇ ಬೇಕು. ನಮ್ಮಂಥ ಅಜ್ಞರ ಕೆಲಸ ಅದು ಹೇಗಾದೀತು?'

ಈ ಮಾತಿನಿಂದ ಎಲ್ಲರ ಮತಿಗಳು ಚುರುಕಾದವು. ಶಿವಯೋಗಮಂದಿರ ಸ್ಥಾಪನೆಯ ಮೊದಲು, ಅದನ್ನು ತಮ್ಮ ದಿವ್ಯಜ್ಞಾನದಿಂದ ಕಂಡುಕೊಳ್ಳಬಲ್ಲ ಶಿವಯೋಗಿ ಯಾರೆಂಬುದನ್ನು ನಿರ್ಣಯಿಸಬೇಕಾಗಿ ಬಂದಿತು. ಈ ಪ್ರಶ್ನೆ ಸುಲಭವಾಗಿ ಹೋಯಿತು. ಕಾರಣ ಆ ಕಾಲದ ಕರ್ನಾಟಕದಲ್ಲಿ ಪ್ರಚಂಡ ತಪೋಬಲವುಳ್ಳ, ಪ್ರಕಾಂಡ ಪ್ರಭಾವವುಳ್ಳ, ಅತ್ಯುಗ್ರ ಅನುಷ್ಠಾನ ಮೂರ್ತಿಗಳಾದ ಮಹಾಶಿವಯೋಗಿಗಳು ಯಾರಿದ್ದಾರೆಂದು ಯಾರೂ ತಲೆ ಕೆಡಿಸಿಕೊಳ್ಳಬೇಕಾಗಿರಲಿಲ್ಲ. ಇಲಕಲ್ಲಿನ ವಿಜಯ ಮಹಾಂತ ಶಿವಯೋಗಿಗಳ ಹೆಸರು ಎಲ್ಲರ ಬಾಯಲ್ಲೂ, ಗೆಲುವಿನ ಬಾವುಟ ಹಾರಾಡಿದಂತೆ, ಹಾರಾಡಿಬಿಟ್ಟಿತು ಅನೇಕರು ಹೇಳಿಯೇಬಿಟ್ಟರು—

'ಹೌದು. ಹೌದು. ಅವರೇ ಅವರೇ ಯೋಗ್ಯರು, ಅವರಿಲ್ಲದಿದ್ದರೆ ಈ ಸಮಸ್ಯೆ ಬಿಡಿಸುವದು ಶಿವನಿಗೂ ಸಾಧ್ಯವಿಲ್ಲ. ಅವರು ಅನುಗ್ರಹಿಸಿ ತೋರಿದ ಜಾಗೆಯಲ್ಲೆ ಮಂದಿರ ಆರಂಭವಾಗಲಿ.'

ನಿರ್ಣಯ ಕ್ಷಣಾರ್ಧದಲ್ಲೇ ಪಾಸಾಯಿತು. ಅತ್ಯಂತ ನಿರ್ಜನವಾದ ಸ್ಥಾನವೊಂದರಲ್ಲಿ, ಅರಣ್ಯ ಮಧ್ಯದಲ್ಲಿ, ಪರ್ವತಾರೋಹಿಗಳ ಪಕ್ಕದಲ್ಲಿ, ನದಿಯ ದಡದಲ್ಲಿ, ಗೋಪಾಲನೆಗೆ ಯೋಗ್ಯವಾದ ಹುಲ್ಲು ಮರದಿಯ ಸಾಮಿಪ್ಯದಲ್ಲಿ, ರೈಲು ಸಂಪರ್ಕಕ್ಕೆ ಸ್ವಲ್ಪ ನಿಕಟ ಸ್ಥಾನವನ್ನು, ಪ್ರಸನ್ನ ಹವೆಯಾಡುವ ಪರಿಸರದಲ್ಲಿ ಶಿವಯೋಗ ಮಂದಿರ ಸ್ಥಾನವನ್ನು ಆಯ್ಕೆ ಮಾಡುವ ಗುರುತನ ಹೊಣೆಗಾರಿಕೆಯನ್ನು ಇಲಕಲ್ಲಿನ ಶ್ರೀ ವಿಜಯ ಮಹಾಂತ ಶಿವ

ಯೋಗಿಗಳಿಗೆ ಬಿಟ್ಟುಕೊಡಲಾಯಿತು. ಮಹಾ ಸಮಸ್ಯೆಯೊಂದನ್ನು ಮಹಾ ಶಿವಯೋಗಿವರೇಣ್ಯರ ಪಾದಕ್ಕೆ ಸಮರ್ಪಿಸಲಾಯಿತು.

ಈ ಮಾತಿನಿಂದ ಪೂಜ್ಯ ಹಾನಗಲ್ಲ ಶಿವಯೋಗಿಗಳು ಹಿರಿಹಿರಿ ಹಿಗ್ಗಿದರು. ಎಷ್ಟೆಂದರೂ ಅವರು ಕಳಕಳಿಯ ಸಮಾಜ ಸುಧಾರಕರಲ್ಲವೆ?

—'ಹುಂ.... ಇನ್ನು ತಡವೇಕೆ? ಕುಮಾರ ಸ್ವಾಮಿಗಳೆ; ವಿಜಯ ಮಹಾಂತ ಶಿವಯೋಗಿಗಳನ್ನು ಈ ಕಾರ್ಯಕ್ಕೆ ಒಡಂಬಡಿಸಿ ಕರೆದೊಯ್ಯುವದು ನಿಮ್ಮ ಕೆಲಸ. ಇನ್ನು ನೀವಾಯಿತು ನಿಮ್ಮ ಕರ್ತವ್ಯವಾಯಿತು.'

ಎಂದು ಕಾರ್ಯಕಾರಿ ಮಂಡಲಿಯವರು ಹಾನಗಲ್ಲ ಕುಮಾರಸ್ವಾಮಿಗಳಿಗೆ ಹೇಳಿದರು. ಅಲ್ಲದೆ ಸ್ಥಳದ ಆಯ್ಕೆಗೆ ಹಾಗೂ ಮಂದಿರ ಸ್ಥಾಪನೆಗೆ ದೇಣಿಗೆ ಮೂಲದಿಂದ ಸಂಗ್ರಹಿತವಾದ ಹದಿನಾಲ್ಕು ಸಾವಿರ ರೂಪಾಯಿಗಳನ್ನು ಬಳಸಲು ಅವರಿಗೆ ಅನುಮತಿ ನೀಡಲಾಯಿತು. ಹಾನಗಲ್ಲ ಶ್ರೀಗಳು ಪೂಜ್ಯ ವಿಜಯ ಮಹಾಂತ ತಪೋಧನರು ಕರುಣಿಸಿದ ಸ್ಥಾನದಲ್ಲಿ ಶಿವಯೋಗ ಮಂದಿರ ಆರಂಭಿಸುವದಾಗಿ ತುಂಬಿದ ಸಭೆಯಲ್ಲಿ ವಚನ ನೀಡಿ, ಅಲ್ಲಿ ನೆರೆದ ಹರಗುರುಚರ ಮೂರ್ತಿಗಳಿಗೆ ಸಾಷ್ಟಾಂಗ ಹಾಕಿದರು!

ಇನ್ನು ಕುಮಾರ ಸ್ವಾಮಿಗಳು ತಡಮಾಡಿಯಾರೆ? ಪರಿಷತ್ತಿನ ಕಾರ್ಯಕಲಾಪಗಳು ಮುಗಿದ ಕೂಡಲೇ ನೇರವಾಗಿ ಇಲಕಲ್ಲಿಗೆ ಹೋಗಿ. ಪೂಜ್ಯ ವಿಜಯ ಮಹಾಂತ ಶಿವಯೋಗಿಗಳನ್ನು ಕಂಡು, ವೀರಶೈವ ಮಹಾಸಭೆಯ ನಿರ್ಣಯವನ್ನು ಅವರಿಗೆ ತಿಳಿಸಿದರು, ಶಿವಯೋಗಿಗಳು 'ಇದು ಶಿವನ ಇಚ್ಛೆ. ನಮ್ಮಿಂದ ನೆರವೇರಬೇಕಾಗಿದೆ. ಆಗಲಿ' ಎಂದು ಒಡಂಬಟ್ಟರು. ಶಿವಯೋಗ ಮಂದಿರದ ಸ್ಥಳವನ್ನು ತಮ್ಮ ಯೋಗ ದೃಷ್ಟಿಯಿಂದ ಕಂಡುಕೊಳ್ಳಲು ಹುನಗುಂದ ಮಾರ್ಗವಾಗಿ ಪ್ರಯಾಣ ಹೊರಟರು. ಅವರ ಜೊತೆಗೆ ಹಾನಗಲ್ಲ ಶ್ರೀಗಳು, ಡೆಪ್ಯುಟಿ ಡಿಸ್ಟ್ರಿಕ್ಟ ಕಲೆಕ್ಟರ ಕಿತ್ತೂರ ರೇವಣಸಿದ್ದಪ್ಪನವರು ಗುಳೇದಗುಡ್ಡದ ಜಿರ್ಲಿ ಮುರಿಗೆಪ್ಪನವರು, ಹುಬ್ಬಳ್ಳಿ-ಧಾರವಾಡ–ಗದಗ-ಬಾಗಿಲುಕೋಟೆಯ ಸುಮಾರು ಮೂವತ್ತು ಜನ ಪ್ರಮುಖ ಭಕ್ತರೂ ನಡೆದರು.

ಪ್ರಯಾಣಕ್ಕೆ ಹೊರಡುವ ಮುನ್ನ ಶಿವಯೋಗಿಗಳು ಗೋಶಾಲೆಗೆ ತಾವೇ ಹೋಗಿ ತಮ್ಮ ಅಕ್ಕರೆಯ ತಾಯಿಯಾದ ಮಾಂತಮ್ಮನನ್ನು ಬಿಚ್ಚಿ

ದರು. ಅವಳ ಕೋಮಲವಾದ ಗಂಗೆದೊಗಲನ್ನು ನೇವರಿಸುತ್ತಾ– 'ಏನಪ್ಪಾ, ಶಿವಯೋಗ ಮಂದಿರ ಸ್ಥಾಪನೆ ಆಗಬೇಕಾಗಿದೆ. ನೀನೂ ಬರುತ್ತೀಯಾ?' ಎಂದು ಕೇಳಿದರು. ಪಾಂತಮ್ಮ ಕೊರಳ ಗೆಜ್ಜೆಯನ್ನು 'ಝಿಲ್ ಝಿಲ್' ಎಂದು ಉತ್ಸಾಹದಿಂದ ಅಲುಗಿಸಿದಳು. ತಾಯಿ ಮಗ ಇಬ್ಬರೂ ಪ್ರಯಾಣ ನಡೆದರು. ಪಾಂತಮ್ಮ ದಿನಕ್ಕಿಂತಲೂ ಇಂದು ಹರ್ಷಭರಿತಳಾಗಿ ತೋರಿದಳು. ಅವಳ ನಡುಗೆಯಲ್ಲಿ ಉತ್ಸಾಹದ ತಾಳ, ಗತಿಯಲ್ಲಿ ಸ್ವಚ್ಛಂದ ಬಂಧ ಪ್ರಕಟ ವಾದವು. ಮಹಾಶಿವಯೋಗಿಯ ಮಹಾಕಾರ್ಯಕ್ಕೆ ನಡೆದ ಮಹಾಮಾತೆ ಅವಳು ಕಂಗೊಳಿಸಿದಳು.

ಶಿವಯೋಗಿಗಳು ಧವಲವರ್ಣದ ಪಟ್ಟದ ಕುದುರೆಯನ್ನು ಏರಿದ್ದಾರೆ. ಅವರ ಸುತ್ತ ನಾಲ್ಕೈದು ಜನ ಪರಿಚಾರಕರು ನಡೆದಿದ್ದಾರೆ. ಕುದುರೆಗೆ ಪ್ರೇಮದ ಬೆಂಗಾವಲನ್ನು ಬಿಗಿದಂತೆ ಪಾಂತಮ್ಮ ಬರುತ್ತಿದ್ದಾಳೆ. ಹಿಂದೆ ಒಂದು ಬಂಡಿಯಲ್ಲಿ ಹಾನಗಲ್ಲ ಶ್ರೀಗಳು ಮಂಡಿಸಿದ್ದಾರೆ. ಅದರ ಹಿಂದೆ ಏಳೆಂಟು ಬಂಡಿಗಳಲ್ಲಿ ಉಳಿದ ಪ್ರಮುಖರು–ಪರಿಚಾರಕರು ಆಸೀನರಾಗಿ ದ್ದಾರೆ. ಶಿವಪೂಜೆ–ಆಹಾರ–ವಿಶ್ರಾಂತಿಗಳ ಸಾಮಾನು ಸರಂಜಾಮುಗಳನ್ನು ಅವುಗಳಲ್ಲಿ ಅಣಿಗೊಳಿಸಲಾಗಿದೆ. ವಿಜಯ ಮಹಾಂತ ಶಿವಯೋಗಿಗಳು ಮಲಪ್ರಭಾ ನದಿಯ ದಡವನ್ನು ತಲುಪಿ, ನದಿಗುಂಟ ಪ್ರಯಾಣ ಹೊರಟರು. ಮೊದಲು ಅವರು ತಲುಪಿದ್ದು ಇತಿಹಾಸ–ಪ್ರಸಿದ್ಧವಾದ ಐಹೊಳೆ ಕ್ಷೇತ್ರ. ಚಾಲುಕ್ಯಶಿಲ್ಪ ವೈಭವದ ಗಣಿಯಾಗಿ, ಶಿಲೆಯ ಸಾಕಾರವಾದ ಸೌಂದರ್ಯ ಪ್ರಜ್ಞೆಯಾಗಿ ಆಸ್ಥಾನ ಶೋಭಿಸುತ್ತಿದೆ. ಅನೇಕ ಸುಂದರ ಮಂದಿರಗಳ ನೆಲೆ ಯಾಗಿದೆ. ಆಗಲೆ ಮಧ್ಯಾಹ್ನದ ಪೂಜಾ ಸಮಯವಾಗಿತ್ತು. ಎಲ್ಲರೂ ನದಿ ಯಲ್ಲಿ ಸ್ನಾನ ಮಾಡಿ, ಪೂಜೆ ಪ್ರಸಾದ ಸೇವಿಸಿದರು.

ಕಿತ್ತೂರ ಸಾಹೇಬರು 'ಐಹೊಳೆ' ಯ ನಿಸರ್ಗರಮಣೀಯ ವನಶ್ರೀ ಹಾಗೂ ಶಿಲ್ಪಶ್ರೀಗಳಿಗೆ ಮರುಳಾಗಿ ಮಹಾಂತ ಸ್ವಾಮಿಗಳಿಗೆ ಹೇಳಿದರು—

'ಬುದ್ಧೀ ಇದು ಬಹು ಪುರಾತನವಾದ ಕ್ಷೇತ್ರ. ಇಲ್ಲಿ ಅನೇಕ ದೇವಾಲ ಯಗಳಿವೆ. ಜಗತ್ತಿನ ಪ್ರವಾಸಿಗಳೆಲ್ಲ ಇಲ್ಲಿ ಬರುತ್ತಾರೆ. ಅಲ್ಲದೆ ಪಕ್ಕದಲ್ಲಿ ಮಲಪ್ರಭಾ ನದಿ ಸೌಂದರ್ಯಶಾಲಿನಿಯಾಗಿ ಪ್ರವಹಿಸಿದ್ದಾಳೆ. ಇದೆ ಸ್ಥಾನ ದಲ್ಲೆ ಶಿವಯೋಗ ಮಂದಿರ ಸ್ಥಾಪಿಸಲು ತಮ್ಮ ಅಪ್ಪಣೆಯಾಗಬೇಕು.'

ಸಾಹೇಬರ ಮಾತು ತುಂಬ ಸಮಂಜಸವಾದದ್ದೆಂದು ಉಳಿದ ಎಲ್ಲ ಸಭ್ಯ ಗೃಹಸ್ಥರಿಗೂ ಅನ್ನಿಸಿತು, ಅವರೆಲ್ಲರೂ ದನಿಗೂಡಿಸಿ—

'ಹೌದು ಬುದ್ಧಿ. ಸಾಹೇಬರು ಹೇಳಿದ ವಿಷಯ ನಮಗೂ ಸಮಂಜಸವೆನಿಸುತ್ತದೆ. ಅಲ್ಲದೆ ಇಲ್ಲಿ ಅನೇಕ ಗುಡಿಗಳ ಸಮುದಾಯವೆ ಇರುವದರಿಂದ ಶಿವಯೋಗ ಮಂದಿರ ಸ್ಥಾಪಿಸಲಿಕ್ಕೆ ನಾವು ಮಂದಿರ ಕಟ್ಟಡಕ್ಕಾಗಿ ಖರ್ಚು ಮಾಡಲಿರುವ ಲಕ್ಷಾಂತರ ರೂಪಾಯಿಗಳ ಉಳಿತಾಯವೂ ಆಗುತ್ತದೆ, ತಾವು ಕೃಪೆ ಮಾಡಬೇಕು.'

ವೃದ್ಧ ತಪಸ್ವಿಗಳಾದ ವಿಜಯ ಮಹಾಂತ ಸ್ವಾಮಿಗಳು ಉತ್ತರಿಸಿದರು—

'ನೀವು ಹೇಳುವ ಮಾತು ಸರಿ ಇದ್ದಿರಬಹುದು, ಆದರೆ ಇಲ್ಲಿಯ ಎಲ್ಲ ದೇವಸ್ಥಾನಗಳೂ ಸಾರ್ವಜನಿಕರಿಗಾಗಿ ಮುಕ್ತವಾಗಿವೆ. ಅನೇಕ ದೇಶದ ನಾನಾ ನಮೂನೆಯ ಜನ ಇಲ್ಲಿ ಬಂದು ಹೋಗುವ ಪರಿಪಾಠವಿದೆ. ಇದು ಏಕಾಂತ ವಾಸಕ್ಕೆ ಯೋಗ್ಯವಾದ ಸ್ಥಳವಲ್ಲ.'

— ಎಂದು ಮುಂದೆ ಸಾಗಿಬಿಟ್ಟರು. ಉಳಿದವರೆಲ್ಲ ನಿರುತ್ಸಾಹಗೊಂಡರು. ಆದರೆ ಶಿವಯೋಗಿಗಳ ಮಾತು ಮೀರುವಂತಿಲ್ಲ.

ಪ್ರಯಾಣ ಮುಂದೆ ಸಾಗಿತು. ಮಾಂತಮ್ಮ ಅಚ್ಚಹಸುರ ಶೈಲಶ್ರೀಯಲ್ಲಿ ನಿಚ್ಚಳದ ವನಶ್ರೀ ಬಂದಂತೆ ನಡೆದು ಬರುತ್ತಿದ್ದಾಳೆ. ಅವಳ ಬಾಯಾರಿಕೆಗೆ ಹಾಲುಹೊಳೆ ಇದೆ. ಹಸಿವೆಗೆ ಪ್ರಕೃತಿಯು ಪ್ರಸನ್ನವಾಗಿ ನಿಂತಿದೆ. ಮಲಪ್ರಭಾ ನದಿಯ ಇನ್ನೊಂದು ದಂಡೆಗೆ ಎಲ್ಲರೂ ನಡೆದರು. ಮಧ್ಯದಲ್ಲಿ ಅರಣ್ಯದಲ್ಲಿಯೆ ಒಂದು ರಾತ್ರಿ ವಾಸ. ನದಿ ತೀರದಲ್ಲಿ ಸ್ನಾನ ಪೂಜಾದಿಗಳನ್ನು ಪೂರೈಸಿದರು. ಮರುದಿವಸ 'ಪಟ್ಟದಕಲ್ಲಿ' ಗೆ ಬಂದು ಸೇರಿದರು. ಉಳಿದ ಸಭ್ಯಗೃಹಸ್ಥರಿಗೆ ಐಹೊಳೆಗಿಂತ ಪಟ್ಟದಕಲ್ಲು ಶಿವಯೋಗಮಂದಿರಕ್ಕೆ ತುಂಬ ಯುಕ್ತವೆಂದು ಅನ್ನಿಸಿತು. ಅವರೆಲ್ಲರೂ ತಮ್ಮ ತಮ್ಮಲ್ಲೇ ಮಾತಾಡಿಕೊಂಡು ಸ್ವಾಮಿಗಳಿಗೆ ಕೇಳಿಕೊಂಡರು—

'ಬುದ್ಧೀ, ಈ ದೇವಾಲಯಗಳ ಸ್ಥಾನವು ಮತ್ತಷ್ಟು ರಮ್ಯವಾಗಿದೆ. ಇಕೊ ಈ ಕಲ್ಲಿನ ಮಂಟಪ ಎಷ್ಟು ಸುಂದರವಾಗಿದೆ ನೋಡಿರಿ. ಇದು ವಟುಗಳ ಅಧ್ಯಯನಕ್ಕೆ ಏಕಾಂತ ಸ್ಥಳವೆ ಆಗಿದೆ, ಅಲ್ಲಿ ತಮ್ಮ ಅಪ್ಪಣೆಯಾದರೆ ಬಹಳ ಚನ್ನಾಗುತ್ತದೆ.'

ವಿಜಯ ಮಹಾಂತ ಸ್ವಾಮಿಗಳು ಭಕ್ತರು ತೋರಿಸಿದ ಕಲ್ಲಿನ ಮಂಟಪದ ಒಂದು ಮೂಲೆಯನ್ನು ಹೊರಳಿ ಅವರಿಗೇ ತೋರಿಸುತ್ತ ಹೇಳಿದರು—

'ಇಕೋ ನಿಮ್ಮ ಕಲ್ಲಿನ ಮಂಟಪ ಎಷ್ಟು ಚಂದಾಗಿದೆ ನೋಡಿರಿ. ಈ ಮೂಲೆಯಲ್ಲಿ ನಾಗಪ್ಪನು ಹೇಗೆ ಕುಳಿತಿದ್ದಾನೆ ನೋಡಿರಿ, ಕಾಣುವದಿಲ್ಲವೆ?'

ಅಲ್ಲಿ ಒಂದು ಭಾರೀ ಗಾತ್ರದ ಸರ್ಪವು ಬುಸುಗುಟ್ಟುತ್ತಲೆ ಹೆಡೆ ಎತ್ತಿ ನಿಂತಿತ್ತು. ಎಲ್ಲರೂ ಆಶ್ಚರ್ಯದಿಂದ ತಬ್ಬಿಬ್ಬಾದರು. ಈ ಶಿವಯೋಗಿಯನ್ನು ತಡವಿದರೆ ಯಾವ ಸಮಯದಲ್ಲಿ ಏನು ಮಾಡುತ್ತಾನೊ ಮಾರಾಯ ಎಂದು ಮನದಲ್ಲೇ ವಿಲಿವಿಲಿ ಒದ್ದಾಡಿದರು. ಅಂತೂ ಶಿವಯೋಗಿಗಳು ಪಟ್ಟದ ಕಲ್ಲನ್ನೂ ನಾಪಾಸುಮಾಡಿಬಿಟ್ಟರು!

ಮತ್ತೆ ಪ್ರಯಾಣ ಮುಂದಕ್ಕೆ ಸಾಗಿತು. ಆಗ ವಿಜಯ ಮಹಾಂತ ಶ್ರೀಗಳು—

'ನಾವು ಬಿಸಿಲು ಇಳಿಸಿಕೊಂಡು ಚಕ್ಕಡಿಯ ಮೇಲೆ ಬರುತ್ತೇವೆ. ನೀವು ಮುಂದಕ್ಕೆ ಎಲ್ಲರೂ ನಡೆಯಿರಿ.'

ಎಂದು ಎಲ್ಲರನ್ನೂ ಸಮೀಪದ ಮಹಾಕೂಟಕ್ಕೆ ಕಳಿಸಿದರು. ಅವರು ಮಹಾಕೂಟ ತಲುಪಿ, ಮಧ್ಯಾಹ್ನದ ಸ್ನಾನ ಪೂಜಾದಿಗಳನ್ನು ತೀರಿಸಿ, ಪ್ರಸಾದ ಸೇವಿಸಿ ವಿಶ್ರಾಂತಿಗೆಂದು ಮಲಗಿದರು. ದೀರ್ಘ ಪ್ರಯಾಣದಿಂದ ಎಲ್ಲರಿಗೂ ಗಾಢ ನಿದ್ರೆಯೇ ಹತ್ತಿತು.

ಇತ್ತ ಬಿಸಿಲು ಇಳಿಸಿಕೊಂಡು ಬರುತ್ತೇವೆಂದು ಹೇಳಿದ ವಿಜಯ ಮಹಾಂತ ಸ್ವಾಮಿಗಳು ವಿಶ್ರಾಂತಿ ಪಡೆಯದೆ, ಮಧ್ಯಾಹ್ನ ನಾಲ್ಕು ಗಂಟೆಯ ಸುಮಾರಕ್ಕೆ ತಮ್ಮ ಕುದುರೆಯ ಮೇಲೆ ಕುಳಿತು, ಮಾಂತಮ್ಮನನ್ನು ಒಡಗೂಡಿಕೊಂಡು, ಕೆಲವು ಪರಿಚಾರಿಕರೊಂದಿಗೆ ಮಲಾಪಹಾರಿ ನದಿಯ ಗುಂಟ ಮುಂದಕ್ಕೆ ನಡದೇ ಬಿಟ್ಟರು. ಅವರ ಹಿಂದೆಯೆ ಬರುತ್ತಿದ್ದ ಮಾಂತಮ್ಮನನ್ನು ಕರೆಯುತ್ತ— 'ಮಾಂತಮ್ಮ ಸುಮ್ಮನೆ ನಡೆದುಬಿಟ್ಟೆಯಲ್ಲಾ! ನಾವು ಶಿವಯೋಗಮಂದಿರ ಸ್ಥಾಪನೆ ಮಾಡಬೇಕಾಗಿದೆ. ನಮಗೆ ಈ ಅರಣ್ಯದಲ್ಲಿ ದಾರಿ ತೋರಿಸುವೆಯಾ?' ಎಂದರು. ಅವಳು ತನ್ನ ಸಹಜಗತಿಯನ್ನು ಅಶ್ವಗತಿಗೆ ಏರಿಸಿ, ಉಲ್ಲಾಸಕಾರಿಣಿಯಾಗಿ ಮುಂದೆ ಸಾಗಿದಳು. ಶಿವಯೋಗಿಗಳು ತಮ್ಮ ಕುದುರೆಯನ್ನು ಅತ್ತಲೇ ಸಾಗಿಸಿದರು. ಅವರು ಮುಂದೆ ಮುಂದೆ ನಡೆ

ದಂತೆ ಭಾರೀ ಗುಡ್ಡ ಅರಣ್ಯ! ಹೆಜ್ಜೆ ಇಡಲು ಬಾರದಷ್ಟು ಡಬಗಳ್ಳಿ !! ಆದರೂ ಶಿವಯೋಗಿಗಳು ಹೇಗೋ ಹೇಗೋ ಸಾಗಿ 'ನೆಲವಿಗಿ' ಎಂಬ ಸಣ್ಣ ಹಳ್ಳಿಯ ಸಮೀಪಕ್ಕೆ ಬಂದರು. ಅಲ್ಲಿ ಒಬ್ಬ ಮುಪ್ಪಿನ ಮುದುಕನು ಹೊಲದಲ್ಲಿ ಕೆಲಸ ಮಾಡುತ್ತಿದ್ದುದನ್ನು ಕಂಡು ಕರೆದು ಕೇಳಿದರು—

'ಏನಪಾ. ನೀನು ಯಾರು?'

ಆತ ವಂದಿಸಿ ಹೇಳಿದ—

'ಸ್ವಾಮೀ ನಾನು ನೆಲವಿಗೀ ಗ್ರಾಮದವನು.'

ಶ್ರೀಗಳು ಹಾಗೆಯೇ ಮಾತು ಮುಂದುವರಿಸಿದರು—

'ನಿನ್ನ ಹೆಸರೇನು?'

'ಫಕೀರಪ್ಪ.'

'ಏನಪಾ ಫಕೀರಪ್ಪಾ. ನಾವು ಶಿವಯೋಗ ಮಂದಿರವನ್ನು ಸ್ಥಾಪಿಸಬೇಕೆಂದು ಮಾಡಿದ್ದೇವೆ. ಅದಕ್ಕೆ ಸರಿಯಾದ ಸ್ಥಾನವು ಈ ಅರಣ್ಯದಲ್ಲಿ ಎಲ್ಲಿದೆ?'

'ಸ್ವಾಮೀ. ಶಿವಯೋಗಮಂದಿರವೆಂದರೆ ಏನು?'

'ಶಿವಯೋಗಮಂದಿರವೆಂದರೆ ಶಿವಪೂಜೆ ಮಾಡುವ ಸ್ಥಾನವು. ಅಲ್ಲಿ ಸ್ವಲ್ಪ ಪತ್ರಿಗಿಡಗಳ ಗುಂಪು ಇರಬೇಕು. ನದಿ ದಡ ಇರಬೇಕು. ಸಮೀಪದಲ್ಲಿ ಜನವಸತಿ ಇರಬಾರದು.'

'ಪತ್ರಿಗಿಡಗಳೇ ಬುದ್ಧಿ? ಇಕೊ! ಈ ದಿಡಿಗಿನ (ದಭೆದಭೆಯ) ಹೊಳೆಯ ದಂಡೆಯ ಮೇಲೆ ದೊಡ್ಡ ಪತ್ರಿ ವನವೇ ಇದೆ. ಆದರೆ ಅಲ್ಲಿ ಡಬಗಳ್ಳಿ ಸುತ್ತಲೂ ಮೈಲುಗಟ್ಟಲೆ ತುಂಬಿಕೊಂಡಿವೆ ಸ್ವಾಮಿ. ಸಮೀಪದಲ್ಲಿ ಯಾವ ಹಳ್ಳಿಯ ಸೆರವೂ ಇಲ್ಲ. ಅಲ್ಲದೆ ಕಳ್ಳರು ಹಗಲಿನಲ್ಲೆ ಜನರನ್ನು ಸುಲಿದು ಒಡೆದು ಚೆಲ್ಲುತ್ತಾರೆ. ಅಂಥಾ ಜಾಗಾದಾಗ ಪೂಜಾ ಹೇಗೆ ಮಾಡುತ್ತೀರಿ?'

'ಫಕೀರಪ್ಪಾ. ಕಳ್ಳರು ಸುಲಿಯುವದು ದುಡ್ಡಿದ್ದವರನ್ನು. ನಾವು ಸನ್ಯಾಸಿಗಳು. ನಮ್ಮನ್ನು ತಡವಿ ಮೈಗೆ ಬೂದಿ ಬಡಕೊಂಡು ಹೋದಾರು. ಪತ್ರಿವನದ ಆ ಸ್ಥಾನವನ್ನು ತೋರಿಸು ನಡೆ?'

—ಎಂದು ಅಪ್ಪಣೆ ಕೊಡಿಸಿದರು. ಮುದಕನು ದಾರಿ ತೋರಿಸಿದತ್ತ

ಶ್ರೀಗಳು ಆ ಭಯಂಕರವಾದ ಡಬಗಳ್ಳಿಯ ಘೋರಾಣ್ಯದಲ್ಲಿ ಹೊಕ್ಕರು. ಬಹು ಪ್ರಯಾಸದಿಂದ, ಮುಳ್ಳಿನ ಚಾಚುಗಳನ್ನು ಕಡಿಯುತ್ತ ಮುಂದೆ ಹೋಗಬೇಕಾಯಿತು. ಸುತ್ತಲೂ ಜೀರ್‌ಜಿಟ್ಟೆನ್ನುವ ಅರಣ್ಯ. ಮಸಣದಂತೆ ಬಿಕೋ ಎನ್ನುತ್ತಿತ್ತು. ಅಳ್ಳೆದೆಯುಪರಿದ್ದರೆ ಹಗಲಿನಲ್ಲೇ ಎದೆಯೊಡೆದು ಸತ್ತಾರು! ಸ್ವಾಮಿಗಳ ಜೊತೆಗೆ ನಡೆದ ಪರಿಚಾರಕರ ಪರಿಸ್ಥಿತಿಯಂತೂ ಹೇಳ ತೀರದು. ಮೈತುಂಬ ಡಬಗಳ್ಳಿ ಮುಳ್ಳುಗಳ ಪ್ರಸಾದ ಅವರಿಗೆ ಬೇಕಾದಷ್ಟು ಸಲ ಸಿಕ್ಕಿತು. ಕೆಲದೂರ ಹೋಗುವಷ್ಟರಲ್ಲೆ ಮೈದುಂಬಿ ಬೆಳೆದಿದ್ದ. ಬಿಲ್ವ ವೃಕ್ಷಗಳ ಗುಂಪನ್ನು ಡಬಗಳ್ಳಿಗಳ ಭಯಂಕರ ಕೊತ್ತಳದ ಮಧ್ಯದಲ್ಲಿ ಶ್ರೀಗಳು ನೋಡಿದರು. ಪ್ರಚಂಡ ರಾಕ್ಷಸರ ಕೈಯಲ್ಲಿ ಸಿಕ್ಕ ದೇವಲೋಕದ ಸುರಸುಂದರ ತರುಣಿಯರಂತೆ ಆ ಬಿಲ್ವಮರಗಳು ಮೈತುಂಬ ಚಿಗುರಿ ನಿಂತಿದ್ದವು. ಮುದುಕ ಫಕೀರಪ್ಪನು ಬಿದರುಮಳೆಯ ಜಿಡುಪಿನಲ್ಲಿ ಸೀಳುದಾರಿಯೊಂದನ್ನು ಮಾಡಿ, ಡಬಗಳ್ಳಿಯನ್ನು ಸರಿಸಿ ಸ್ವಾಮಿಗಳನ್ನು ಕರೆತಂದನು. ವಿಜಯ ಮಹಾಂತ ಶಿವಯೋಗಿಗಳು ಆ ರಮ್ಯ ಸ್ಥಾನವನ್ನು ನೋಡಿ 'ಶಿವಶಿವಾ' ಎಂದು ಉದ್ಗಾರ ತೆಗೆಯುತ್ತಲೇ ಸಾಗಿದರು. ಬಿಲ್ವವೃಕ್ಷಗಳ ಬುಡದಲ್ಲಿ ಹಾಳು ಬೀಳಾದ ಪುರಾತನ ದೇವಾಲಯವೊಂದಕ್ಕೆ ಆ ಮುದುಕನು ಶ್ರೀಗಳನ್ನು ಕರೆ ತಂದನು. ಅಲ್ಲಿ ದೇವಾಲಯ ಇತ್ತು.

ಸ್ವಾಮಿಗಳು ಕೇಳಿದರು—

'ಫಕ್ಕೀರಪ್ಪಾ ಇದು ಯಾವ ದೇವಸ್ಥಾನ?'

'ಬುದ್ಧೀ, ಇದು ಕೊಟ್ಟೂರು ಬಸವೇಶ್ವರ ದೇವಸ್ಥಾನವು. ನಾವೆಲ್ಲ ಹಳ್ಳಿಗರು ಶ್ರಾವಣ ಸೋಮವಾರದಲ್ಲಿ ಇಲ್ಲಿಗೆ ಬಂದು ಎಡೆ ಕಾಯಿ ಕರ್ಪೂರ ಸಲ್ಲಿಸಿ ಹೋಗುತ್ತೇವೆ.'

ಶ್ರೀಗಳು ಅಮಿತೋತ್ಸವದಿಂದ ಹೇಳಿದರು—

'ಓಹೋ ಕೊಟ್ಟೂರು ಬಸವೇಶ್ವರನೇ? ಹಾಗಾದರೆ ಕೊಟ್ಟರೂ ಬಸವ! ಕೊಡದಿದ್ದರೂ ಬಸವ!!'

—ಎನ್ನುತ್ತ ಕುದುರೆಯಿಂದ ಟಣ್ಣನೇ ಹಾರಿದರು. 'ಮಾಂತಮ್ಮಾ.... ಮಾಂತಮ್ಮಾ....' ಎಂದು ಕೂಗುತ್ತ ಸುತ್ತಲೂ ನೋಡಿದರು. ಆಗ 'ಅಂಬಾ........' ಎಂಬ ಆವಳ ಮಾರುತ್ತರ ಬಂದೇಬಿಟ್ಟಿತು. ನೋಡುತ್ತಾರೆ;

ಪಕ್ಕದ ಪತ್ರಿವನದ ಬುಡದಲ್ಲಿ ಎಲ್ಲರಿಗಿಂತ ಮುಂಚಿತವಾಗಿಯೇ ಬಂದು, ಸಗಣಿ ಹಾಕಿ, ಗೋಮೂತ್ರ ಸುರುಹಿ ಮಲಗಿಬಿಟ್ಟಿದ್ದಾಳೆ ಮಹಾತಾಯಿ ? 'ಇದುವೆ ಶಿವಯೋಗ ಮಂದಿರಕ್ಕೆ ಪುಣ್ಯಸ್ಥಾನ' ಎಂದು ತೋರಿಸಲು ಕೈಲಾಸದಿಂದ ಬಂದ ಪಾರ್ವತಿ ದೇವಿಯಂತೆ ಕಂಗೊಳಿಸುತ್ತಿದ್ದಾಳೆ !! ಶಿವಯೋಗಿಗಳು ಆನಂದಭರಿತರಾದರು. ವೈರಾಗ್ಯ ಮೂರ್ತಿಗಳು ಶಿವಯೋಗ ಸಾಧನೆ ಮಾಡ ಲಿಕ್ಕೆ ಇದೇ ಯೋಗ್ಯ ಸ್ಥಳವೆಂದು ತೀರ್ಮಾನಿಸಿಯೆ ಬಿಟ್ಟರು. ತಮ್ಮ ಶಿಷ್ಯರಿಗೆ ತಕ್ಷಣವೇ ಹಾನಗಲ್ಲ ಶ್ರೀಗಳನ್ನೂ ಉಳಿದ ಸಭ್ಯಗೃಹಸ್ಥರನ್ನೂ ಕರೆದುಕೊಂಡು ಬರಬೇಕೆಂದು ಅಪ್ಪಣೆ ಕೊಟ್ಟು ಮಹಾಕೂಟಕ್ಕೆ ಓಡಿಸಿದರು.

ಇತ್ತ ಮಹಾಕೂಟಕ್ಕೆ ಆಗಮಿಸಿ ಪೂಜೆ–ಪ್ರಸಾದ–ವಿಶ್ರಾಂತಿಯನ್ನು ತೀರಿಸಿದ ಹಾನಗಲ್ಲ ಶ್ರೀಗಳು, ಸಾಹೇಬರು ಮೊದಲಾದವರು ವಿಜಯ ಮಹಾಂತ ಶಿವಯೋಗಿಗಳು ಬರುವ ದಾರಿಯನ್ನೇ ನೋಡುತ್ತ ಕುಳಿತಿದ್ದಾರೆ! ಮಹಾಕೂಟವು ವೇದಕಾಲಿನ ಪ್ರಸಿದ್ಧ ದೇವಸ್ಥಾನ. ಪರ್ವತ ಶ್ರೇಣಿಯಿಂದ ಸುತ್ತುವರಿದ ನಿಸರ್ಗ ರಮಣೀಯ ಕ್ಷೇತ್ರ. ಅದ್ದರಿಂದ ಮಹಾಕೂಟದಲ್ಲೇ ಶಿವಯೋಗ ಮಂದಿರವನ್ನು ಸ್ಥಾಪಿಸಬೇಕೆಂದೂ ಅದಕ್ಕೆ ಮಹಾಂತ ಶಿವ ಯೋಗಿಗಳ ಅಪ್ಪಣೆ ಪಡೆದುಕೊಳ್ಳಬೇಕೆಂದೂ ಅವರೆಲ್ಲ ಹಂಚಿಕೆ ಹಾಕಿಕೊಂಡು ಕುಳಿತಿದ್ದಾರೆ. ಅದೇ ಸ್ಥಾನ ಒಪ್ಪಿಗೆಯಾಗಿಬಿಟ್ಟಿದೆ. ಆದರೆ ಸಂಜೆಯಾದರೂ ಶಿವಯೋಗಿಗಳು ಬರಲೇ ಇಲ್ಲ. ಇದೇಕೆ ಹೀಗೆ ಎಂದು ಅವರು ಚಿಂತಿಸುವ ಹೊತ್ತಿನಲ್ಲೇ ವಿಜಯ ಮಹಾಂತ ಶ್ರೀಗಳ ಸೇವಕರು ಓಡಿಬಂದು– 'ಶಿವ ಯೋಗಿಗಳು ತಮ್ಮನ್ನೆಲ್ಲ ಕರೆಯುತ್ತಿದ್ದಾರೆ' ಎಂದು ಹೇಳಿದಾಗ ಎಲ್ಲರೂ ನಿರಾಶರಾಗಿಬಿಟ್ಟರು. ಮಹಾಕೂಟವು ತಮ್ಮ ಕೈಬಿಟ್ಟಿತೆಂದು ಹತಾಶರಾಗಿ ಹೋದರು. ಆದರೂ ಬೇರೆ ಗತಿ ಇಲ್ಲದೆ ಡಬಗಳ್ಳಿಯ ಗವಿಯಲ್ಲಿ ಹೇಗೊ ಹೇಗೊ ಹೊಕ್ಕು ಸಾಗಿದರು. ಮುಂದೆ ಈ ಡಬಗಳ್ಳಿಯ ಘೋರಾರಣ್ಯದ ಮಧ್ಯದಲ್ಲಿ ಒಂದು ಪತ್ರಿ ಗಿಡದ ಬುಡಕ್ಕೆ ಶಾಂತಚಿತ್ತರಾಗಿ ಕುಳಿತ ಶಿವಯೋಗಿ ಗಳನ್ನು ಕಂಡು ಹೌಹಾರಿ ಹೋದರು. ಅವರಾರೂ ತುಟಿ ಪಿಟಿಕ್ಕೆನ್ನಲಿಲ್ಲ. ಮಹಾಂತ ಶಿವಯೋಗಿಗಳೆ ಹೇಳಿದರು–

'ಇಕೋ ಈ ಅರಣ್ಯ ಹೇಗಿದೆ ನೋಡಿರಿ. ಇದೇ ಸ್ಥಾನವೆ ಶಿವಯೋಗ

ಮಂದಿರಕ್ಕೆ ಯೋಗ್ಯವಾದದ್ದು. ಇಲ್ಲಿ ಪಕ್ಕದಲ್ಲೆ ನದಿ ಇದೆ. ಬೇಕಾದಷ್ಟು ಬಿಲ್ವವೃಕ್ಷಗಳಿವೆ. ಹೇರಳವಾಗಿ ಲತಾಮಂಟಪಗಳೂ ಇವೆ.'

ಉಳಿದವರು 'ಹುಂ' ಎಂದೂ ಅನ್ನಲಿಲ್ಲ. 'ಹಾಂ' ಎಂದೂ ಉಸುರಲಿಲ್ಲ. ಕಟೆದ ಬೊಂಬೆಗಳಂತೆ ಸೆಟೆದು ನಿಂತರು. 'ವೀರಶೈವ ಮಹಾಸಭೆಯವರು ಯಾಕಾದರೂ ಈ ಮಹಾಸ್ವಾಮಿಯನ್ನು ನಿಯಮಿಸಿದರಪಾ' ಎಂದು ಕೆಲವರು ಕಂಠದಲ್ಲೆ ಗೊಣಗಿಕೊಂಡಿರಲು ಸಾಕು! ಕಿತ್ತೂರ ಸಾಹೇಬರು ಹಾನಗಲ್ಲ ಶ್ರೀಗಳನ್ನು ಪಕ್ಕಕ್ಕೆ ಕರೆದು ಹೇಳಿದರು—

ಏನ್ರಿ ಸ್ವಾಮಿ, ಮನೋಹರವಾಗಿ ವೈಭವಪೂರ್ಣವಾಗಿ ಕಟ್ಟಲ್ಪಟ್ಟ ಪುರಾತನ ದೇವಾಲಯಗಳಿದ್ದ, ವಿಶಾಲ ನದಿ ದಡಗಳನ್ನು ಬಿಟ್ಟು; ಇಂಥ ಮುಳ್ಳಿನ ಕೊಂಪೆಯಲ್ಲಿ. ನಿರ್ಜನವಾದ ಈ ಹಾಳು ಘೋರಾರಣ್ಯದಲ್ಲಿ ಶಿವಯೋಗಮಂದಿರವನ್ನು ಸ್ಥಾಪಿಸಿದರೆ ಏನಂದಾರು?

ಇಬ್ಬರೂ ಗುಟ್ಟಿನಿಂದ ಮಾತಾಡುತ್ತಿರುವದು ಮಹಾಂತ ಶಿವಯೋಗಿಗಳಿಗೆ ತಿಳಿಯದೆ ಇದ್ದೀತೆ? ಅವರಿಗೆ ಕೂಗಿ ಹೇಳಿದರು—

'ಏನಪ್ಪಾ ನೀವಿಬ್ಬರೂ ಅಲ್ಲಿ ಮಾತಾಡುವದು? ನೀವು ಕದ್ದು ಮಾತಾಡುವದೆಲ್ಲ ನಮಗೆ ತಿಳಿಯುತ್ತದೆ' ಎಂದರು. ಆ ಮೇಲೆ ಹಾನಗಲ್ಲ ಶ್ರೀಗಳನ್ನು ಕುರಿತು ಹೇಳಿದರು—

'ನೀವು ಸಹ ಈ ಸಾಹೇಬರ ಜೋಲಿಯನ್ನೇ ಹಿಡಿಯುತ್ತಿರಲ್ಲವೆ? ನಮ್ಮ ಮನಸ್ಸಿಗೆ ಮಾತ್ರ ಇದೇ ಸ್ಥಾನವೆ ಒಪ್ಪಿಗೆ ಆಗಿದೆ. ನಿಮಗೆ ಬೇಕಾಗಿದ್ದರೆ ಮಾಡಿಕೊಳ್ಳಿರಿ. ಬೇಡಾಗಿದ್ದರೆ ಬಿಡಿರಿ. ನಾವು ನಿಮ್ಮ ಗ್ರಾಮಕ್ಕೆ ಹೊರಡುತ್ತೇವೆ.

—ಎಂದರು. ಈಗ ಹಾನಗಲ್ಲ ಕುಮಾರಸ್ವಾಮಿಗಳು ಥಕ್ಕನೆ ತಮ್ಮ ಅಭಿಪ್ರಾಯ ಕಿತ್ತೂರ ಸಾಹೇಬರಿಗೆ ಹೇಳಿದರು—

'ಸಾಹೇಬರೆ. ಬಾಗಿಲುಕೋಟೆಯ ಪರಿಷತ್ತಿನಲ್ಲಿ ಇಲಕಲ್ಲ ಮಹಾಂತ ಸ್ವಾಮಿಗಳು ತೋರಿಸಿದ ಸ್ಥಾನದಲ್ಲೆ ಶಿವಯೋಗ ಮಂದಿರವನ್ನು ಸ್ಥಾಪಿಸುತ್ತೇವೆಂದು ನಾವು ಬಂದಿದ್ದೇವೆ. ಕಾರಣ ಅವರು ತೋರಿಸಿದ ಇದೇ ಸ್ಥಾನದಲ್ಲಿಯೆ ನಾವು ಎಂಥ ಕಂಟಕ ಬಂದರೂ ಒಂದು ಹುಲ್ಲು ಗುಡಿಸಲನ್ನು ಹಾಕಿಕೊಂಡು ನಾವೊಬ್ಬರೆ ಅನುಷ್ಠಾನವನ್ನು ಮಾಡುತ್ತ ಇರುತ್ತೇವೆ. ನೀವೆಲ್ಲರೂ

ಒಪ್ಪದಿದ್ದರೆ, ಈ ಮೊದಲೆ ಶಿವಯೋಗ ಮಂದಿರದ ಸ್ಥಾಪನೆಗಾಗಿ ಹದಿನಾಲ್ಕು ಸಾವಿರ ರೂಪಾಯಿಗಳ ವರ್ಗಣಿ ಕೂಡಿಸಿದ್ದಾಗಿದೆ. ಆ ಎಲ್ಲ ಹಣ ವನ್ನು ನಿಮ್ಮ ವಶಕ್ಕೆ ಕೊಡುತ್ತೇವೆ. ನೀವು ಬೇಕಾದ ರಮ್ಯಸ್ಥಾನದಲ್ಲಿ ಮತ್ತೊಂದು ಶಿವಯೋಗ ಮಂದಿರವನ್ನು ಸ್ಥಾಪಿಸಬಹುದು' ಎಂದು ದೃಢ ನಿಶ್ಚಯದಿಂದ ನುಡಿದುಬಿಟ್ಟರು. ಕೂಡಲೆ ಸಾಹೇಬರು ಸಹಿತವಾಗಿ ಎಲ್ಲರೂ ಮತ್ತೊಂದು ಮಾತು ಆಡದೆ, ಶ್ರೀಗಳು ಕರುಣಿಸಿದ ಇದೇ ಸ್ಥಾನವೇ ಇರ ಲೆಂದು ಶಿವಯೋಗಿಗಳಿಗೆ ಸಾಷ್ಟಾಂಗ ಹಾಕಿಬಿಟ್ಟರು. ಆಗಲೆ ಕರ್ಪೂರವನ್ನು ಹಚ್ಚಿ ಕೊಟ್ಟೂರ ಬಸವೇಶ್ವರ ಗದ್ದುಗೆಗೆ ಮಂಗಳಾರತಿಯನ್ನು ಭಕ್ತಿಪೂರ್ವ ಕವಾಗಿ ಮಾಡಿದರು.

ನಂತರ ವಿಜಯಮಹಾಂತಸ್ವಾಮಿಗಳು --

'ನಾವು ಇನ್ನು ಇಲಕಲ್ಲಿಗೆ ಹೋಗುತ್ತೇವೆ. ಇನ್ನೂ ಏಳೆಂಟು ದಿವಸ ಗಳಲ್ಲೇ ಬರುವ ರಥಸಪ್ತಮಿಯ ದಿನವೆ ಈ ಜಾಗೆಗೆ ಲಿಂಗಮುದ್ರೆಯನ್ನು ಸ್ಥಾಪಿಸಲು ಬರುತ್ತೇವೆ. ಅಲ್ಲಿಯ ವರೆಗೆ ನೀವೆಲ್ಲಾ ಇದ್ದು, ಈ ಜಮೀನು ಯಾರದೆಂಬುದನ್ನು ಪತ್ತೆ ಹಚ್ಚಿ ಖರೀದಿಮಾಡಿಸಿರಿ' ಎಂದರು.

ಅವರಲ್ಲಿ ಒಬ್ಬ ಸದ್ಗೃಹಸ್ಥನು ಮೆಲ್ಲನೆ ಧ್ವನಿಯೆತ್ತಿ—

'ಮಹಾಸ್ವಾಮಿ. ಈ ಜಮೀನು ಯಾರದೋ ಏನೊ? ಅವರು ಇದನ್ನು ನಮಗೆ ಖರೀದಿ ಕೊಡಲು ಒಪ್ಪದಿದ್ದರೆ?' ಎಂದು ಕೇಳಿದನು. ಅದಕ್ಕೆ ಸ್ವಾಮಿಗಳು—

'ಛೇ ಹುಚ್ಚಪ್ಪಾ, ಇದು ಶಿವನ ಕಾರ್ಯವಿದೆ. ಶಂಕೆ ಮಾಡಬಾರದು. ಎಲ್ಲವೂ ಜಯವಾಗುವದು, ಕಾರ್ಯ ಮಾಡುವದು ನಿಮ್ಮ ಕೆಲಸ.'

—ಎಂದು ಹೇಳಿ ತಮ್ಮ ಅಶ್ವಾರೋಹಣಮಾಡಿ, ಮಾಂತಮ್ಮನನ್ನೂ ಸೇವಕನನ್ನೂ ಒಡಗೂಡಿಕೊಂಡು, ಹುನಗುಂದ ಮಾರ್ಗವಾಗಿ ಹೊರಟೇ ಬಿಟ್ಟರು.

ಉಳಿದವರು ಮಹಾಕೂಟದಿಂದ ತಮ್ಮ ಸಾಮಾನು ಸರಂಜಾಮು ತರಿಸಿ ದರು. ಅಲ್ಲಿ ಸುತ್ತಲೂ ಬೆಳೆದ ಹೊನ್ನವರಿ ಗಿಡಗಂಟಿಗಳನ್ನೂ ಡಬಗಳ್ಳಿ ಗಳನ್ನೂ ಕಿರುಜಾಲಿಯನ್ನೂ ಕಡಿದು ತಮ್ಮ ವಸತಿಯ ಮಟ್ಟಿಗೆ ಜಾಗೆ ಮಾಡಿಕೊಂಡರು.

ಅಲ್ಪ ಕಾಲದಲ್ಲಿ ಪೂಜಾ ಪ್ರಸಾದಗಳನ್ನು ತೀರಿಸಿದರು. ಈಗ ತಡ ಮಾಡುವಂತಿಲ್ಲ. ಶಿವಾರ್ಚನೆಯನ್ನು ತೀರಿಸಿದ ಹಾನಗಲ್ಲ ಶ್ರೀಗಳೊಂದಿಗೆ ಕಿತ್ತೂರ ಸಾಹೇಬರು, ಗುಳೇದಗುಡ್ಡದ ಜಿರ್ಲಿ ಮುರಿಗೆಪ್ಪನವರು ಹಾಗೂ ಇತರರು ಪಕ್ಕದ ನೆಲವಿಗೆ ಗ್ರಾಮಕ್ಕೆ ಹೋಗಿ, ಆ ಪತ್ರಿವನವಿದ್ದ ಹೊಲದ ಮಾಲಿಕನನ್ನು ಪತ್ತೆ ಹಚ್ಚಿದರು. ಅವನು ಖರೀದಿ ಕೊಡಲು ಒಪ್ಪುತ್ತಾನೊ ಇಲ್ಲವೊ ಎಂಬ ಸಂದೇಹ ಇನ್ನೂ ಅನೇಕರಿಗೆ ಬಾಧಿಸುತ್ತಲೆ ಇತ್ತು. ಹಾನಗಲ್ಲ ಶ್ರೀಗಳು ಭೂಮಿಯ ಒಡೆಯನನ್ನು ಕೇಳಲಾಗಿ ಅವನು—

'ಬುದ್ಧಿ....ತಮ್ಮ ಪಾದ ಇತ್ತ ದಯಮಾಡಿಸಿದ್ದೇ ಹೆಚ್ಚಿಂದು ನನ್ನ ಭಾಗ್ಯ. ಆ ಹೊಲಕ್ಕೆ ಒರೇ ಡಬಗಳ್ಳಿ ಇದೆ. ವರ್ಷಾ ನಾನು ಖಾಲಿ ಪುಕ್ಕಟೆ ಅವರ ತೆರಗಿ ಕೊಟ್ಟು ದಣಿದುಹೋಗಿದ್ದೇನೆ. ನೀವು ಸ್ವಾಮಿಗಳೆಂದ ಮೇಲೆ ಸುಳ್ಳಾಡುವದಿಲ್ಲ. ಯಾಡ್ನೂರ ನೂರಿಗೆ ಬೇಕಾದ್ರ ಕೊಡ್ತೇನಿ. ತಗೊಳ್ಳಿ' ಎಂದ.

ವಿಜಯ ಮಹಾಂತ ಶಿವಯೋಗಿಗಳ ಭವಿಷ್ಯ ಚಿತ್ರದಲ್ಲಿ ಕೆತ್ತಿದಂತೆ ನಿಜ ವಾಯಿತು. ಅಂದೆ ಅದರ ಖರೀದಿ ಪತ್ರ ಮಾಡೇಬಿಟ್ಟರು. ಕೂಡಲೆ ಹಾನಗಲ್ಲ ಶ್ರೀಗಳು ನೆಲವಿಗಿ ಗ್ರಾಮದ ಇಪ್ಪತ್ತು ಮೂವತ್ತು ಆಳುಗಳನ್ನು ಹಚ್ಚಿಸಿ ಆ ಹೊಲದ ಡಬಗಳ್ಳಿಗಳನ್ನೆಲ್ಲ ಬೇರುಸಹಿತ ಕಡಿಸಿಬಿಟ್ಟರು. ಅಲ್ಲಿಯೆ ನಾಲ್ಕು ಹುಲ್ಲಿನ ಮನೆಗಳನ್ನು ಭಕ್ತರ ಸಹಾಯದಿಂದ ಹಾಕಿಸಿ ಸಿದ್ಧ ಮಾಡಿದರು.

ಈ ಮೊದಲು ಅಪ್ಪಣೆ ಮಾಡಿದಂತೆ ಇಲಕಲ್ಲಿನಿಂದ ವಿಜಯ ಮಹಾಂತ ಸ್ವಾಮಿಗಳು ಮಾಘ ಶುದ್ಧ ಸಪ್ತಮಿಯಂದು ದಯಮಾಡಿಸಿದರು. ಶಿವ ಯೋಗ ಮಂದಿರಕ್ಕೆ ಲಿಂಗ ಮುದ್ರೆಯನ್ನು ಹಾಕಿದರು.

ಆದರೆ ಇದೊಂದೇ ಜಮೀನು ಶಿವಯೋಗ ಮಂದಿರಕ್ಕೆ ಸಾಕಾಗುವದಿಲ್ಲ ವೆಂದು ಶಿವಯೋಗಿಗಳು ಅರಿತರು. ಆದರೆ ಮಗ್ಗಲಿನ ಹೊಲಕ್ಕೆ ಇವತ್ತೆ ಲಿಂಗಮುದ್ರೆ ಹಾಕಿಬಿಟ್ಟರಾಯಿತು ಎಂದರು.

ಈ ಮಾತು ಕೇಳಿ ಒಬ್ಬರು ಹೇಳಿದರು—

'ಬುದ್ಧೀ.... ಆ ಹೊಲಾ ಒಬ್ಬ ಬ್ರಾಹ್ಮಣನದು ಇದೆ. ಬ್ರಾಹ್ಮಣನ ಹೊಲಕ್ಕೆ ಲಿಂಗ ಮುದ್ರೆ ಹಾಕಿದರೆ ಹೇಗೆ? ಮೊದಲು ಆತನನ್ನು ಒಂದು

ಮಾತು ಕೇಳೋದು ನ್ಯಾಯ, ಅಲ್ಲದೆ ಮೊದಲೆ ಲಿಂಗಮುದ್ರೆ ಹಾಕಿದರೆ ಆತ ಭಾರೀ ಬೆಲೆಯನ್ನೇ ಆ ಹೊಲಕ್ಕೆ ಮಾಡಬಹುದು.'

ಈ ಮಾತಿಗೆ ಶಿವಯೋಗಿಗಳು—

—ಇದು ಶಿವನ ಕಾರ್ಯವಿದೆ. ಇದಕ್ಕೆ ಯಾವ ವಿಘ್ನವೂ ಇಲ್ಲ. ಅಲ್ಲದೆ ನಾವು ನಮ್ಮ ಮಠಮಾನ್ಯಗಳಿಗೆ ಈ ಜಮೀನು ಬರೆಸಿಕೊಳ್ಳುವದಿಲ್ಲ. ಅಂಜುವಿರೇಕೆ ? ಶಿವನು ತನ್ನ ಕಾರ್ಯವನ್ನು ತಾನೇ ಮಾಡಿಕೊಳ್ಳುತ್ತಾನೆ. ಚಿಂತೆ ಮಾಡಬೇಡಿರಿ' ಎಂದು ಹೇಳಿ ಆ ಹೊಲಕ್ಕೂ ಲಿಂಗಮುದ್ರೆ ಹಾಕಿಯೆ ಬಿಟ್ಟರು !

ಶಿವಯೋಗಿಗಳ ಮಾತು ಸತ್ಯದ ಸತ್ಯ. ನಿತ್ಯದ ನಿತ್ಯ. ಕೈವಲ್ಯದ ಕೈವಲ್ಯ. ಅಂಜುವಿರೇಕೆ ? ಶಿವನು ತನ್ನ ಕಾರ್ಯವನ್ನು ತಾನೇ ಮಾಡಿ ಕೊಳ್ಳುತ್ತಾನೆ ಎಂದು ಅಂದ ಅಮರವಾಣಿ ಸತ್ಯವಾಗಿ ಹೋಯಿತು. ಮರು ದಿನ ಆ ಗೃಹಸ್ಥರಲ್ಲಿ ಕೆಲವರು ಬಾಗಿಲುಕೋಟೆಯ ಕಚೇರಿಗೆ ಯಾವುದೊ ಕಾರ್ಯಾಂತರದಿಂದ ಹೋದಾಗ, ಲಿಂಗಮುದ್ರೆ ಸ್ಥಾಪಿಸಲ್ಪಟ್ಟ ಅದೇ ಬ್ರಾಹ್ಮಣನ ಅದೇ ನಂಬರಿನ ಹೊಲವನ್ನೇ ಅಲ್ಲಿ ಲಿಲಾವಿಗೆ ಹಚ್ಚಲಾಗಿತ್ತು ! ಆ ಗೃಹಸ್ಥರು ಕೂಡಲೆ ವಿಜಯ ಮಹಾಂತ ಶಿವಯೋಗಿಗಳ ಅದ್ಭುತ ವಾಕ್ಯ ಸಿದ್ಧಿಯನ್ನು ಕೊಂಡಾಡುತ್ತ ಕೇವಲ ಮುನ್ನೂರು ರೂಪಾಯಿಗಳಿಗೆ ಆ ಹೊಲವನ್ನು ಲಿಲಾವಿನಲ್ಲಿ ಖರೀದಿಮಾಡಿಬಿಟ್ಟರು !!

ಈ ರೀತಿ ಪವಾಡ ಪುರುಷನೊಬ್ಬ ಪವಾಡಗಳ ಮಳೆಗರೆಯುತ್ತಲೆ, ತನ್ನ ಅದ್ಭುತ ಇಚ್ಛಾಬಲದಿಂದ ಅವಿರಳ ಜ್ಞಾನ ಚಕ್ಷುವಿನಿಂದ ಶ್ರೀಶಿವಯೋಗ ಮಂದಿರದ ಪ್ರತಿಷ್ಠಾಪನೆಗೆ ಕಾರಣೀಭೂತನಾದನು. ಅದು ಆ ಮಹಾ ಪುರುಷನ ಕೈವಲ್ಯದ ಕೂಸು. ನಿರ್ಮಾಯದ ಮಗು. ನಿಶ್ಶೂನ್ಯದ ಶಿಶು. ಅಂತೆಯೆ ಅಲ್ಲಿ ಸಾಧನಗೈದವರೆಲ್ಲರೂ ಶಿವಯೋಗಿಗಳು, ಅಧ್ಯಯನ ಗೈದವ ರೆಲ್ಲರೂ ಅಮರರು, ಚೇತನೆ ಗೈದವರೆಲ್ಲ ಚಿಜ್ಜ್ಯೋತಿಗಳು. ಶಿವಯೋಗಿ ಸ್ಥಾಪಿಸಿದ ಶಿವಮಂದಿರ ವಸುಂಧರೆಯ ಶಿವಮಂದಿರವಾಗಿ ಮೆರೆಯುತ್ತಿದೆ ! ಯುಗಯುಗಾಂತರ ವರೆಗೆ ತಪೋವೈಭವದ ಪ್ರಕಾಶ ಪುಂಜವಾಗಿ, ದಿವ್ಯಾತ್ಮ ಸಾಧಕರ ಜ್ಯೋತಿರ್ಮಂಡಲವಾಗಿ ರಾರಾಜಿಸುತ್ತಿದೆ !!

# ಒಪ್ಪತ್ತಿನ ಸ್ವಾಮಿಗಳ ಮಲರೋಗ ನಿವಾರಣೆ

ಗುಳೇದಗುಡ್ಡದ ಒಪ್ಪತ್ತಿನ ಸ್ವಾಮಿಗಳು ಲಿಂಗಪೂಜಾ ಪ್ರೇಮಿಗಳು. ಶಿವಯೋಗಾನುಸಂಧಾನಕ್ಕೆ ಶಿವಮಂದಿರಕ್ಕೆ ಬಂದರು. ಹಲವು ಕಾಲ ಲಿಂಗ ಪೂಜಾ ನಿರತರಾಗಿ ಜಂಗಮ ಸೇವೆ ಮಾಡಿದರು.

ಹಾಲಿನಲ್ಲಿ ಹುಳಿ ಹಿಂಡಿದಂತೆ ದುರ್ವಿಧಿಯಿಂದ ಒಂದು ಘಟನೆ ನಡೆಯಿತು. ಒಪ್ಪತ್ತಿನ ಸ್ವಾಮಿಗಳ ಗುರುಗಳು ಅಮೀನಗಡದ ತೋಂಟದಾರ್ಯರು. ಶಿಷ್ಯನು ಯೋಗಿಪುಂಗವನಾದರೂ ಗುರುವು ಅಸೂಯಾಪುಂಗವನಾಗಿದ್ದನು. ಶಿಷ್ಯನ ಗುಣ ಗುರುವಿನಲ್ಲಿ ಇರಲಿಲ್ಲ! ಈ ಪುಣ್ಯಾತ್ಮ ಒಂದು ಸಲ ಗುಳೇದ ಗುಡ್ಡಕ್ಕೆ ದಯಮಾಡಿಸಿ, ಶಿವಯೋಗ ಮಂದಿರದಿಂದ ಶಿಷ್ಯನನ್ನು ಕರೆಸಿ ಕೊಂಡನು. ಶಿಷ್ಯನಿಗೆ ಸದ್ಬೋಧೆಯನ್ನು ನೀಡುತ್ತ ಶ್ರೀಮದ್ವೀರಶೈವ ಶಿವ ಯೋಗ ಮಂದಿರದ ಬಗ್ಗೆ ಅವಾಚ್ಯ ಶಬ್ದಗಳಿಂದ ಹೀಯಾಳಿಸಿ ಮಾತನಾಡಿ ಅವರನ್ನು ಅಲ್ಲಿಂದ ಬಿಡಿಸಿ ಗುಳೇದಗುಡ್ಡದ ಮಠದಲ್ಲಿ ಇರಿಸಿದರು.

ಶಿವಯೋಗ ಮಂದಿರವನ್ನು ನಿಂದಿಸಿದರೆ ವಿಜಯ ಮಹಾಂತ ಶಿವ ಯೋಗಿಗಳನ್ನೇ ಬಹಿಷ್ಕರಿಸಿದಂತಲ್ಲವೆ? ಕೆಲವೆ ದಿನಗಳಲ್ಲಿ ಒಪ್ಪತ್ತಿನ ಸ್ವಾಮಿ ಗಳಿಗೆ ಮಲರೋಗ ಆರಂಭವಾಯಿತು. ಯಾವ ಮದ್ದು ತಿಂದರೂ ಸರಿಂು ಲಿಲ್ಲ. ಜೀವವೆ ಬೇಸರವಾಗಿ ಸಾಯುವದೇ ಲೇಸೆಂಬಂತೆ ಕಾಡಹತ್ತಿತು. ಶಿವ ಪೂಜೆ ನಿಂತಿತು. ವ್ರತ ಅಳಿಯಿತು. ಧ್ಯಾನ ಕೆಟ್ಟಿತು.

ಆದರೂ ಪ್ರಭುಶಕ್ತಿ ಕರುಣೆಯನ್ನು ತೋರಿಸಿತೆಂದು ಕಾಣುತ್ತದೆ! ಒಂದ ಸಲ ಹಾನಗಲ್ಲ ಕುಮಾರ ಸ್ವಾಮಿಗಳು ಕಾರ್ಯಾರ್ಥವಾಗಿ ಇಲಕಲ್ಲಿಗೆ ಪ್ರಯಾಣ ಬೆಳೆಸಿದರು. ಮಾರ್ಗಮಧ್ಯದಲ್ಲಿ ಗುಳೇದಗುಡ್ಡದಲ್ಲಿ ತಂಗಿದರು. ತಮ್ಮ ಜೊತೆಗೆ ಒಪ್ಪತ್ತಿನ ಸ್ವಾಮಿಗಳನ್ನು ಕರೆದುಕೊಂಡೆ ಇಲಕಲ್ಲಿಗೆ ದಯ ಮಾಡಿಸಿದರು.

ಇಲಕಲ್ಲ ಮಠದಲ್ಲಿ, ಮಹಾಂತ ಶಿವಯೋಗಿಗಳ ಅಧ್ಯಕ್ಷತೆಯಲ್ಲಿ ಹಾನಗಲ್ಲ ಶ್ರೀಗಳು ನಿಜಗುಣ ಶಿವಯೋಗಿಗಳ ಕೈವಲ್ಯ ಪದ್ಧತಿಯನ್ನು ಕುರಿತು ಪ್ರವಚನವನ್ನೀಯಲು ಆರಂಭ ಮಾಡಿದರು. ಕೈವಲ್ಯ ಪದ್ಧತಿಯನ್ನು ಕೇಳುತ್ತಿದ್ದಂತೆಯೆ ಒಪ್ಪತ್ತಿನ ಸ್ವಾಮಿಗಳಿಗೆ ಮಲರೋಗವು ಕೆರಳಿತು. ಅವರ

ದೇಹ ಬಿಲ್ಲಿನಂತೆ ಮಣಿಯಿತು, ಸೆಟೆ ಬಂದಿತು. ಬಾಯಲ್ಲಿ ಜೊಲ್ಲು ಚೆಲ್ಲಿತು. ದೇಹಸ್ಮೃತಿ ಹಾರಿ ಬಿದ್ದುಬಿಟ್ಟರು.

ಮಹಾಂತ ಶಿವಯೋಗಿಗಳು ಅದನ್ನು ಕಂಡು 'ಅಯ್ಯೋ ಎಂತಹ ಕೂಸಿಗೆ ಇದೆಂತಹ ವ್ಯಾಧಿ ಬಂದಿದೆ' ಯೆಂದು ಮೈಮುಟ್ಟಿದರು. ತಕ್ಷಣವೆ ಸೆಟೆ ನಿಂತಿತು. ಸ್ಮೃತಿ ಬಂದಿತು.

ಒಪ್ಪತ್ತಿನ ಸ್ವಾಮಿಗಳು ವಿಜಯ ಮಹಾಂತ ಶಿವಯೋಗಿಗಳ ಪಾದದ ಮೇಲೆ ಬಿದ್ದು—

'ಪ್ರಭುವೇ, ಈ ರೋಗ ಬಾಧೆಯನ್ನು ತಡೆಯಲಾರೆ ಕೊಂದಾದರೂ ಕೊಲ್ಲು. ಕಳೆದಾದರೂ ಕಳೆ. ನಿನ್ನ ಅನುಗ್ರಹದಿಂದ ನನ್ನನ್ನು ಕಾಪಾಡ ಬಾರದೆ ? ತಾಳಲಾರೆ........ತಾಳಲಾರೆ........! ಎಂದು ಯಾಚಿಸಿದರು.

ಶಿವಯೋಗಿಗಳು ಅವರ ಶರೀರದ ಮೇಲೆ ಕೈಯಾಡಿಸಿ—

'ಇನ್ನು ಅಂಜಬೇಡ. ಏಳು. ಇನ್ನು ಮೇಲೆ ಅದು ಬರುವದಿಲ್ಲ'ವೆಂದರು.

ಅಂದಿನಿಂದ ಎಂದೆಂದಿಗೂ ಆ ಒಪ್ಪತ್ತಿನ ಸ್ವಾಮಿಗಳಿಗೆ ಮರಳಿ ಮಲ ರೋಗ ಬಾದಿಸಲಿಲ್ಲ. ಶಿವಯೋಗ ಮಂದಿರವನ್ನು ನಿಂದಿಸಿದ ತಮ್ಮ ತಪ್ಪನ್ನು ತಾವೆ ಅರಿತುಕೊಂಡು, ಮರಳಿ ಲಿಂಗಪೂಜಾಲೋಲರಾದರು. ಕೊನೆಗೆ ಅಂತರ್ಮುಖಿಗಳಾಗಿ ನಿಜೈಕ್ಯರಾದರು.

# ಕಾಮಣಿ ರೋಗದ ನಿವಾರಣೆ

ಕಾಮಣಿ ಆದವನಿಗೆ ಜಗತ್ತೆಲ್ಲಾ ಹಳದಿಯೆಂದು ನಾಡನುಡಿ ಇಲ್ಲವೆ ? ಆ ರೋಗವೆ ಅಂಥದು ! ಕಣ್ಣು ಹಳದಿ, ಚರ್ಮ ಹಳದಿ, ಒಂದಗುಳು ಅನ್ನ ಹೋಗದು. ಬೇನೆಯು ತಾಪದಿಂದ ಸಿಟ್ಟು–ಸಿಡುಕು–ಹರಿಹಾಯುವಿಕೆ ಇವೆಲ್ಲ ಪ್ರಾರಂಭವಾಗುತ್ತದೆ. ಒಂದು ವೇಳೆ ಈ ಕಾಮಣಿ ನೆತ್ತಿಗೇರಿತೆಂದರೆ ಬುದ್ಧಿ ಭ್ರಮಣೆಯಾಗುತ್ತದೆ. ಆಗ ಜಗತ್ತಿನಲ್ಲಿ ಯಾವ ವೈದ್ಯನಿಗೂ ರೋಗಿಯನ್ನು ಗುಣಪಡಿಸುವದು ಸಾಧ್ಯವಿಲ್ಲ. ಅವನಿಗೆ ಮರಣವೆ ಶರಣು !

ಕರಡಿ ಊರಿನ ಸಂಗಯ್ಯನ ಮಗನಿಗೆ ವಿಪರೀತ ಕಾಮಣಿ ರೋಗ ಅಡರಿತು. ಹಳದಿ ಬಣ್ಣದಿಂದ ಮಗ ರಾವು ಹೊಡೆದು ಕಾಣಹತ್ತಿದ. ವೈದ್ಯರೆಲ್ಲರೂ ಮುಗಿದರು. ಬೇನೆ ಬಲಿಯಿತು. ಎಂಟು ತಿಂಗಳಾದವು. ವ್ಯಾಧಿ ಮಿದುಳನ್ನು ಆವರಿಸಿತು. ಅರಿವು ಹಾರಿತು. ಕೈಕಾಲುಗಳು ಬತ್ತಿದವು. ಇನ್ನೇನು ಜೀವ ಹೋಗುವ ಕೊನೆಯು ಗಳಿಗೆ. ಎಲ್ಲ ಪ್ರಯತ್ನಗಳೂ ಮುಗಿದಿವೆ ಇನ್ನೊಂದು ಕೊನೆಯ ಪ್ರಯತ್ನ ಮಾಡಿನೋಡೋಣವೆಂದು ಸಂಗಯ್ಯ ಮಗನ ದೇಹವನ್ನು ಬಂಡಿಯ ಮೇಲೆ ಹಾಕಿಕೊಂಡು ಇಲಕಲ್ಲ ಮಠಕ್ಕೆ ಬಂದನು. ಮಗುವನ್ನು ಎತ್ತಿಕೊಂಡು ಒಳಬಂದು ಶ್ರೀಗಳ ಮುಂದೆ ಹಾಕಿ ಬೋರಾಡಿ ಅತ್ತನು—

'ಬುದ್ಧಿಯವರೆ, ಎಲ್ಲ ವೈದ್ಯರೂ ಮುಗಿದರು. ಸಾವಿರಾರು ರೂಪಾಯಿ ಖರ್ಚಾದವು. ಹಣ ಹೋಯಿತು, ಗುಣ ಉಳಿಯಲಿಲ್ಲ. ಕೊನೆಯ ಬಾರಿಗೆ ನಿಮ್ಮ ಪಾದಕ್ಕೆ ತಂದಿದ್ದೇನೆ. ಮೇಲಾದರೂ ಎತ್ತಿ, ಕೆಳಗಾದರೂ ಒತ್ತಿ.'

ಸ್ವಾಮಿಗಳು ಒಂದು ಕ್ಷಣ ಬಾಲಕನ ಮೈಮೇಲೆ ಕೈಯಾಡಿಸಿ ಮೆಲ್ಲನೆ ಹೇಳಿದರು—

'ಅಳಬೇಡ ಬಿಡು. ಸುಮ್ಮನಾಗು. ನಿನ್ನ ಪುತ್ರನಿಗೇನಾಗಿದೆ. ಇದು ಕೊಲ್ಲಲು ಬಂದ ರೋಗ ಅಲ್ಲ. ಕಾಡಲು ಬಂದ ರೋಗ. ಈತನನ್ನು ಊರಿಗೆ ಒಯ್ದು ಬಿಡು, ಪತ್ತೆ ಮಾಡಿಸಬೇಡ. ಏನು ಕೇಳುತ್ತಾನೋ ಅದನ್ನೆಲ್ಲ ಕೊಟ್ಟುಬಿಡು. ಇಲ್ಲೆನ್ನಬೇಡ.'

ಎಂದರು. ಸ್ವಾಮಿಗಳು ಇಷ್ಟನ್ನುವಷ್ಟರಲ್ಲೇ ಬಾಲಕ ಖಸ್ಸೆಂದು

ಕೆಮ್ಮಿ ಮೈ ಅಲ್ಲಾಡಿಸಿದ. ಮೆಲ್ಲನೇ ಕಣ್ಣು ತೆರೆದ. ಎದ್ದು ಕೂಡ್ರಲು ಹವಣಿಸಿದ. ಮೆಲ್ಲನೆ ಮೊಣಕಾಲು ಊರಿ ಕೂಡ್ರಲೂ ಕಲಿತ.

ಸ್ವಾಮಿಗಳ ಅಪ್ಪಣೆ ಪಡೆದು ಸಂಗಯ್ಯ ಸ್ವಗ್ರಾಮ ಸೇರಿದ. ಮಗನ ರೋಗ ಬಾಧೆ ಕಡಿಮೆ ಆದಂತೆ ಹಸಿವೆ ಹೆಚ್ಚಾಯಿತು. ಏನು ಬೇಡುವನೊ ಅದನ್ನೆಲ್ಲ ಕೊಡಲು ಶ್ರೀಗಳ ಆಣತಿ ಆಗಿಯೇ ಬಿಟ್ಟಿತ್ತು. ಪಥ್ಯ ಮುರಿದಂತೆ ಬಾಲಕ ಸಶಕ್ತನಾಗಿ ಅಡ್ಡಾಡತೊಡಗಿದ. ಕೆಲ ದಿನಗಳಲ್ಲೇ ರೋಗಮುಕ್ತನಾಗಿಬಿಟ್ಟ.

ಜೀವ ಕೊಡುವವನೂ ಆತನೆ. ಜೀವ ಕೊಳ್ಳುವವನೂ ಆತನೆ. ನಾವೆಲ್ಲ ಕೇವಲ ಸೂತ್ರದ ಗೊಂಬೆಗಳು. ಆತ ಸೂತ್ರಧಾರಿ ಅಲ್ಲವೆ ?

# ಮಜ್ಜನೋದಕಕ್ಕೂ ಶಕ್ತಿ

ಕರಡಿ ಊರಿನ ಸಂಗಯ್ಯನ ಮಗನಿಗೆ ಕಾಮಣಿ ರೋಗವೊಂದೇ ಅಂಟಿತ್ತು. ಆದರೆ ಹಿರಿಯ ಬಾದವಾಡಗಿಯ ನಾಲತ್ತವಾಡ ಬಸಯ್ಯನ ಮಗಳಿಗೆ ಕಾಮಣಿ ರೋಗದ ಜೊತೆಗೆ ಕ್ಷಯರೋಗವೂ ಕೂಡಿಕೊಂಡಿತ್ತು ! ಏಕಕಾಲಕ್ಕೆ ಎರಡು ರೋಗ !! ಒಬ್ಬಳಿಗೇ ಎರಡು ಗಂಡು ದೆವ್ವಗಳು ಬಡಿದು ಕೊಂಡಂತೆ !!! ವೈದ್ಯರಿಗೆ ಆತ ಹಣವನ್ನು ಹೊಳೆ ಹರಿಸಿದಂತೆ ಹರಿಸಿದ. ಆದರೆ ರೋಗಪೀಡ ಅಧಿಕವಾಯಿತೇ ವಿನಾ ಇಳಿಯಲಿಲ್ಲ. ದಿನದಿನಕ್ಕೆ ಹೆಚ್ಚಾಗಿ ಕೈಮೀರಿತು. ಸ್ವತಃ ನುರಿತ ವೈದ್ಯರೆ ಹೇಳಿದರು....

'ಬಸಯ್ಯಾ ಇವಳು ನಿನ್ನ ಮಗಳು ಅಲ್ಲಾ ಎಂದು ತಿಳಿದು ಬಿಡು, ಅವಳ ಋಣ ತೀರಿದೆ'

ಕತ್ತಲೆಯಲ್ಲಿ ತಡಕಾಡುವವನಿಗೆ ವಜ್ರದ ದೀಪ ಸಿಕ್ಕಂತೆ, ಯಾರೋ ಒಬ್ಬರು ಬಸಯ್ಯನಿಗೆ ವಿಚಿತ್ರ ಸಂಗತಿಯೊಂದನ್ನು ಹೇಳಿದರು— 'ಬಸಯ್ಯಾ, ವಿಜಯ ಮಹಾಂತ ಸ್ವಾಮಿಗಳು ಮಠದ ಜೀರ್ಣೋದ್ಧಾರಕ್ಕಾಗಿ ಇದೇ ಊರಿನ ಮಠದಲ್ಲಿ ತಂಗಿದ್ದಾರೆ. ಅವರು ಪ್ರತಿದಿನ ನಸುಕಿನಲ್ಲಿ ಸ್ನಾನಮಾಡುವ ನೀರು ಬಚ್ಚಲದ ಮೋರೆಯಲ್ಲಿ ಹರಿದು ಹೋಗುತ್ತದೆ. ಆ ನೀರನ್ನೇ ತಂದು ನಿನ್ನ ಮಗಳಗೆ ಸ್ನಾನ ಮಾಡಿಸು. ಗುಣವಾಗುತ್ತದೆ. ಸುಮ್ಮನೆ ವ್ಯರ್ಥವಾಗಿ ದುಡ್ಡು ಕಳಕೊಳ್ಳಬೇಡ.'

ನೂರು ಪ್ರಯತ್ನಗಳನ್ನು ಮಾಡಿದ ಬಸಯ್ಯ ಇದನ್ನೂ ಮಾಡಿದ. ಪ್ರತಿದಿನ ನಸುಕಿನಲ್ಲ ಯಾರಿಗೂ ಗೊತ್ತಿಲ್ಲದಂತೆ ಶ್ರೀಗಳು ಸ್ನಾನ ಮಾಡುವ ಸಮಯದಲ್ಲಿ ಬಚ್ಚಲಮೋರೆಗೆ ಹೋಗಿ, ಪಾತ್ರೆಯೊಂದನ್ನು ಹಿಡಿದು ಕೂಡ್ರುತ್ತಿದ್ದ. ಅದೇ ನೀರು ತಂದು ಮಗಳಿಗೆ ಸ್ನಾನ ಮಾಡಿಸುತ್ತಿದ್ದ. ಪರಿಣಾಮ ಆಶ್ಚರ್ಯಕರವಾಗಿ ಹೋಯಿತು. ಕೇವಲ ಹನ್ನೊಂದು ದಿನಗಳಲ್ಲಿ ಮಗಳು ಗುಣಮುಖಿಯಾದಳು. ಕ್ಷಯರೋಗವೂ ಹೋಯಿತು ! ಕಾಮಣಿಯೂ ಹೋಯಿತು !! ಅಷ್ಟೇ ಅಲ್ಲ ಅವಳಿಗೆ ಸಕಾಲದಲ್ಲಿ ಸಜ್ಜನನಾದ ಪತಿದೇವನೂ ಸಿಕ್ಕ !!! ಲಗ್ನವಾದ ವರ್ಷದಲ್ಲಿ ಮುತ್ತಿನಂತ ಮಗನನ್ನು ಹೊತ್ತು ಆಡಿಸುವ ಸೌಭಾಗ್ಯ ಅವಳಿಗೆ ಪ್ರಾಪ್ತವಾಯಿತು.

ಶಿವಯೋಗಿಯ ಕೃಪೆ ಅಂಥದು. ಒಂದು ಬೇಡಿದರೆ ಹತ್ತು ನೀಡುವ ಕರುಣಾಳು ಆತ, ಆದರೆ ಹಗಲಿನಲ್ಲೇ ಕತ್ತಲೆ ಇದೆಯೆಂದು ಬಾಳನ್ನು ನೂಕುವ ಅಜ್ಞಾನಿಗಳಿಗೆ ಆ ಪರಂಜ್ಯೋತಿ ಹೇಗೆ ತಾನೇ ಕಂಡೀತು ? ಅದಕ್ಕೆ ಗುಪ್ತ ಭಕ್ತಿ ಬೇಕು, ನಿಷ್ಕಾಮ ಸೇವೆ ಬೇಕು. ಆತ್ಮಾರ್ಪಣೆ ಬೇಕು. ಸಿಕ್ಕವರಿಗೆ ಸಿಗಲಿಕ್ಕೆ ಅದೇನು ಹಿತ್ತಲದ ಹುಣಿಸೆ ಗಿಡವೇ?

ಮುಂದೆ ಕಾಲಕ್ರಮದಲ್ಲಿ ಇನ್ನೊಂದು ವಿಚಿತ್ರ ನಡೆಯಿತು. ಮಗಳ ಬೇನೆಯ ತಂಟೆ ಬಸಯ್ಯನಿಗೂ ಬರಬೇಕೆ! ಆದರೆ ಆತ ಎದೆಗುಂದಲಿಲ್ಲ. ಸಿದ್ಧೌಷಧಿ ಸಿಕ್ಕೇ ಬಿಟ್ಟಿತ್ತು. ಪ್ರತಿದಿನ ನಸುಕಿನಲ್ಲಿ ಹೋಗಿ ಶಿವಯೋಗಿಗಳ ಬಚ್ಚಲ ಮೋರಿಗೆ ಮೈಯೊಡ್ಡಿ ಕೂಡ್ರುಹತ್ತಿದ! ಏಳೇ ದಿನಗಳಿಗೆ ಆತನ ಜಡ್ಡು ಹೇಳಕೇಳದೆ ಓಡಿತು !!

# ಮಠದ ಅಳಿವು ಮನೆಗೆ ಮುಳಿವು

ಯಾವದೇ ಹೆಸರಿಗೂ ಆ ಹೆಸರನ್ನು ಹೊಂದಿದವರಿಗೂ ಸಾಮ್ಯ ಇರಲೇ ಬೇಕೆಂಬುದು ಕೆಲವೊಂದು ಪ್ರಸಂಗದಲ್ಲಿ ಶುದ್ಧ ಅವ್ಯವಹಾರಿಕವಲ್ಲವೇ ?

ಹಡಗಲಿಯ ಬಸಲಿಂಗಯ್ಯನೂ ಇದೇ ಮಾದರಿಯ ಪುಣ್ಯಾತ್ಮ ! ಭಕ್ತಿ ಭಾಂಡಾರಿ, ಶರಣವತ್ಸಲ, ಜಂಗಮ ಪ್ರಾಣಿಯಾದ ಜಗಜ್ಯೋತಿ ಬಸವೇಶ್ವರನ ಹೆಸರನ್ನು ಈತ ಪಡೆದರೂ ಮಾಡುವ ಕಾರಭಾರವೇ ಬೇರೆ. ಹಡಗಲಿಯಲ್ಲಿದ್ದ ಚಿತ್ತರಗಿ ಶಾಖಾಮಠದಲ್ಲಿ ಪ್ರವೇಶ ಮಾಡಿದ್ದಾನೆ. ನೆರೆ ಮನೆ ಬಿದ್ದರೆ 'ಕರಕಟ್ಟಲಿಕ್ಕೆ ಜಾಗೆ ಆತು' ಎಂಬ ಮಾತು ರೂಢಿಯಲ್ಲಿಲ್ಲವೇ? ಅದೇ ರೀತಿ ಹಡಗಲಿಮಠ ಜೀರ್ಣೋದ್ಧಾರವಿಲ್ಲದೆ ಕುಸಿದು ಬಿದ್ದಿತ್ತು, ಅದರ ಕಂಬಗಳು ಇವನ ಮನೆಯನ್ನು ಸೇರಿದವು. ತೊಲಿಗಳು ಮೆಲ್ಲನೆ ಇವನ ಮನೆಯ ಮೇಲು ಮುದ್ದೆ ಹಾಕಲು ಅನುಕೂಲವಾದವು. ಮಠದ ಬಾಗಿಲು ಇವನ ಹಿತ್ತಲ ಬಾಗಿಲಾಯಿತು. ಕಿಡಕಿ ಕಮಾನುಗಳ ಕಟ್ಟಿಗೆಗಳು ಇವನ ಒಲೆಗೆ ಭರಪೂರ ಆದವು. ಮಠದ ಸಾಮಾನುಗಳು ಈತನ ಆಸ್ತಿಯಾದವು. ಕೊನೆಗೆ ಮಠದ ತಳಗಲ್ಲುಗಳನ್ನು ಬಿಡಲಿಲ್ಲ!

ಮಹಾಂತ ಶಿವಯೋಗಿಗಳು ಕಾರ್ಯಾರ್ಥವಾಗಿ ಅನೇಕ ವರ್ಷಗಳ ತರುವಾಯ ಹಡಗಲಿ ಮಠಕ್ಕೆ ಬಂದು ನೋಡುತ್ತಾರೆ ನೆಲಸಮವಾಗಿದೆ ! ಮಠ ಬಿದ್ದರೂ ಮಠದ ತೊಲೆ ಕಂಬಗಳು ಇರಲೆಬೇಕಲ್ಲವೆ? ಊರ ಹಿರಿಯರನ್ನು ಕರೆಸಿ ಶಿವಯೋಗಿಗಳು ವಿಚಾರಿಸಿದರು. ಅವೆಲ್ಲವೂ ಒಂದೊಂದಾಗಿ ಯುಕ್ತಿ ಭಂಡಾರಿ ಬಸಲಿಂಗಯ್ಯನ ಮನೆಯನ್ನು ಸೇರಿವೆಯೆಂದು ತಿಳಿಯಿತು. ಸ್ವಾಮಿಗಳು ಒಡನೆಯೆ ಆತನನ್ನು ಕರೆಸಿ ಕೇಳಿದರು—

'ಏನಪಾ ಬಸಲಿಂಗಪ್ಪಾ, ಮಠಾ ಅಂದರ ನಿನ್ನ ಮನೆಯೆಂದು ಮಾಡಿಯೇನೋ?'

ಆತನೂ ಸ್ವಲ್ಪ ಒರಟಾಗಿಯೆ ಉತ್ತರಿಸಿದ—

'ಏನ್ರೀ ಬುದ್ಧಿ, ಯಾಕೋ ದನಿ ಬ್ಯಾರೆ ಎಳದ್ರಿ?'

ಸ್ವಾಮಿಗಳು ಠೀಕಾಗಿಯೇ ಉತ್ತರಿಸಿದರು—

'ಏಳೀ ಬೇಕಾದಲ್ಲೆ ಎಳೀಬೇಕಾಗತದ ಏನಪಾ. ಈಗ ಕಳ್ಳರ ಕಾಲಾ ಶುರು ಆಗ್ಯೈತಿ. ಗೊತ್ತದನೊ ಇಲ್ಲೊ?'

'ಸ್ವಲ್ಪ ಬಿಚ್ಚಿ ಹೇಳ್ರಿ ನಿಮ್ಮ ಮಾತು. ಗುಟ್ಟು ಇಟ್ಟು ಜಡೀಬ್ಯಾಡ್ರಿ'

ಮಠದ ಕಂಬಾ ತೊಲಿ ಎಲ್ಲಿ ಹೋದವು? ಮೂಲಿಗಲ್ಲು, ಪಾಟಿಗಲ್ಲು, ಛಾವಣಿಗಲ್ಲು ಎಲ್ಲಿ ಹೋದವು?'

'ನಾ ಕಾಯಾಕ ನಿಂತಿಲ್ಲ ಬುದ್ಧಿ. ಸ್ವಲ್ಪ ಸುಧಾರಿಸಿ ಮಾತಾಡ್ರಿ.'

'ಸುಧಾರಿಸಿ ಮಾತಾಡೇನಂತ ಹಿಂಗ ಮಾತಾಡೇನಿ. ತುಡುಗಿನ ಮಾಲು ತಂದ ಇಡತೀದ್ಯೋ ಇಲ್ಲೊ?'

'ಆಂ.... ನನಗ ತುಡುಗನ್ನ ಮಾಡತೀದ್ಯಾ? ಸ್ವಾಮಂತ ಸ್ವಾಮಿ!!'

ಎಂದು ಉರಿಯುತ್ತ ಎದ್ದು ಹೋದ. ಸ್ವಾಮಿಗಳು ಅವನಿಗೆ ಕೇಳು ವಂತೆಯೇ ಗಟ್ಟಿ ಧ್ವನಿಯಿಂದ —

'ಎದ್ದ ಹೋಗತೀಯಾ ನೀನು? ಹಂಗಾದ್ರ ಎದ್ದೇ ಹೋಗು.'

ಎಂದರು. ಅಲ್ಲದೆ ಅಲ್ಲಿ ನೆರೆದಿದ್ದ ಮಠದ ಹಿರಿಯ ಭಕ್ತರಿಗೆ—

'ನಾನು ಈ ವಿಷಕಂತ ಹೋದಮ್ಯಾಲೆಯೇ ಈ ಮಠಾ ಸುಧಾರಿಸ್ತೀನೀ ಅಲ್ಲೀ ವರೆಗೆ ಇದು ಹಿಂಗs ಬೀಳಲಿ' ಎಂದು ಹೇಳಿದರು.

ಮುಂದೆ ಒಂದು ವಾರ ಕಳೆಯಲಿಲ್ಲ. ಬಸವಲಿಂಗಯ್ಯ ಒಂದು ದಿನ ಮಧ್ಯಾಹ್ನ ಎದೆ ನೋಯುತ್ತದೆಂದು ಕುಪ್ಪಳಿಸಿಬಿದ್ದ. ನೆಲದ ಮೇಲೆಯೆ ಬಿದ್ದು ಹೊರಳಾಡತೊಡಗಿದ. ಅವನ ಹೆಂಡತಿ ಅಂಗಾರ ತರಲಿಕ್ಕೆ ಮಠಕ್ಕೆ ಓಡಿದಳು. ಆದರೆ ಅದು ಬರುವಷ್ಟರಲ್ಲೇ ಅವನ ಪ್ರಾಣಪಕ್ಷಿ ಈ ಲೋಕ ವನ್ನೇ ಬಿಟ್ಟು ಹಾರಿಹೋಗಿತ್ತು!

ಮಠವೆಂದರೆ ಸಾರ್ವಜನಿಕ ಆಸ್ತಿಯೆಂದು ಕೆಲ ಧೂರ್ತರು ಸಿಕ್ಕಷ್ಟು ದೋಚಿಕೊಂಡು ಮನೆ ತುಂಬಿಕೊಳ್ಳುತ್ತಾರೆ. ಕೇವಲ ನಿರಂಜನ ಜಂಗಮು, ವಾಸವಾಗಿರಬೇಕಾದ ಮಠದ ಆವರಣಗಳಲ್ಲಿ ಕೆಲವರು ಮನೆಮಾಡಿಕೊಂಡರೆ ಸಂಸಾರ ಸಾಗಿಸುತ್ತಾರೆ. ದಾಂಪತ್ಯ ವೈಭವ ನಡೆಸುತ್ತಾರೆ. ಇದೆಂಥ ಘನ ಘೋರ ಅನ್ಯಾಯ! ಸನ್ಯಾಸಿಯು ದುಡ್ಡು ದಾರಿಯ ಮೇಲೆ ಬಿದ್ದಿದ್ದರೂ

ಎತ್ತಿಕೊಂಡವನ ಮನೆಯನ್ನೇ ನಿರ್ವಂಶ ಮಾಡುತ್ತದೆ. ಸಂನ್ಯಾಸಿಯ ದುಡ್ಡು ಕುಲಕ್ಕೆ ಕೊಡಲಿ ಪೆಟ್ಟು ಎಂಬ ಮಾತು ಸುಳ್ಳೇ? ಅಲ್ಲದೆ ಮಠಮಾನ್ಯಗಳ ವಿಷಯದಲ್ಲಿ ತಮ್ಮ ಕರ್ನಾಟಕದ ಅಷ್ಟೇ ಏಕೆ ಸಮಗ್ರ ಭಾರತದ ಭಕ್ತವೃಂದ ಈ ಮಾತು ಎಚ್ಚರಿಕೆಯಲ್ಲಿಟ್ಟುಕೊಳ್ಳಬೇಕು. ಸಂನ್ಯಾಸಿಗಳು, ನಿರಂಜನರು, ಸ್ವಾಮಿಗಳು, ಶಿವಯೋಗಿಗಳು ಆರಿಸಲಾಗದ ನಿಗಿನಿಗಿಯು ಬೆಂಕಿಯ ಕೆಂಡ ವಿದ್ದಂತೆ. ಅದರಿಂದ ಸುಟ್ಟು ಸಾಯಲೂಬಹುದು. ಇಲ್ಲವೆ ಅದೇ ಕೆಂಡದಿಂದ ಪಕ್ವಾನ್ನ ಪ್ರಸಾದ ಸಿದ್ಧಗೊಳಿಸಿ ಸೇವಿಸಲೂಬಹುದು !

# ಒಡಕಾದರೆ ಕೆಡಕು

ಇಲಕಲ್ಲಿನ ಬಸವನಗೌಡ ಭಾರೀ ಪುಡಾರಿ. ಸರಕಾರಕ್ಕೇ ಹೊತ್ತು ನಿಂತ ಆಸಾಮಿ! ಒಂದು ಸಲ ಸರಕಾರದ ಒಬ್ಬ ಅಧಿಕಾರಿ ಇವನ ಮೇಲೆ ಮುಳಿಸಿಟ್ಟು ಅಪವಾದ ಹೇರಿ ಬಂಧಿಸಿದ. ಸುಳ್ಳು ಸಾಕ್ಷಿಗಳನ್ನು ಕೂಡಿಸಿದ. ಕೋರ್ಟಿಗೆ ಎಳೆದ. ಕೋರ್ಟಿನಲ್ಲಿ ಬಸವನಗೌಡನಿಗೆ ಆರು ತಿಂಗಳ ಕಠಿಣ ಶಿಕ್ಷೆ ವಿಧಿಸಲ್ಪಟ್ಟಿತು. ಅಷ್ಟೇ ಅಲ್ಲ ನ್ಯಾಯಾಧೀಶ ಈ ಕೇಸು ಮೇಲಿನ ಕೋರ್ಟಿಗೆ ಹೋಗುವದಕ್ಕೂ ಅನುಮತಿ ನೀಡಲಿಲ್ಲ.

ಅತಿ ದುಃಖಿತನಾದ ಗೌಡ ಮಠಕ್ಕೆ ಬಂದು ಸ್ವಾಮಿಗಳ ಎದುರಿಗೆ ತನ್ನ ಅಳಲು ತೋಡಿಕೊಂಡ. ಸ್ವಾಮಿಗಳು ಹೇಳಿದರು—

'ಗೌಡಾ ಅಂಜಬೇಡ. ಈಗ ನಿನಗೆ ಕಠಿಣ ಶಿಕ್ಷೆಯಾದರೂ ಅದು ಖಾಯಂ ಶಿಕ್ಷೆ ಆಗುವದಿಲ್ಲ. ನಿನಗೆ ಬಿಡುಗಡೆಯಾಗುವದು. ಭಯಪಡಬೇಡ.'

ಗೌಡ ಕಠಿಣ ಶಿಕ್ಷೆ ಅನುಭವಿಸಲು ಜೇಲು ಕಂಡದ್ದೇ ತಡ. ಸ್ವಲ್ಪೇ ದಿನಗಳಲ್ಲಿ ಆತನ ಅಪರಾಧ ಕಾರ್ಯಕಾರಣ ಘಟನೆಗಳಿಂದ ಸುಳ್ಳಾಗಿ ತಕ್ಷಣವೆ ಬಿಡುಗಡೆ ಮಾಡಲ್ಪಟ್ಟ. ಹಸಿದವನ ಬಾಯಿಗೆ ಜೇನುತುಪ್ಪ ಸುರುವಿದಂತೆ ಗೌಡನಿಗೆ ಮಹಾನಂದವಾಯಿತು. ಮಠಕ್ಕೆ ಬಂದು ಸ್ವಾಮಿಗಳಿಗೆ ಪೂಡಮುಟ್ಟು ಮಹಾಗಣಾರಾಧನೆ ಮಾಡಿಸಿದ.

ಆದರೆ ಮುಂಜಾನೆ ಇದ್ದ ಬುದ್ಧಿ ಮಧ್ಯಾನ್ಹಕ್ಕೆ ಹೋಯಿತೆಂಬ ಮಾತಿನಂತೆ ಕೆಲ ದಿನಗಳಲ್ಲಿ ಗೌಡ ಸ್ವಲ್ಪ ವಕ್ರನಾದ. ಕೈಯಲ್ಲಿ ದುಡ್ಡು ಆಡಿತು. ಕಳ್ಳ ಗಂಟೂ ಕೂಡಿತು. ಅವನಿಗೆ ಇಬ್ಬರು ತಮ್ಮಂದಿರೂ ಅವರ ಹೆಂಡಿರು ಮಕ್ಕಳೂ ಇದ್ದರು. ಅವರಿಗೇಕೆ ನಾನು ನನ್ನ ಗಂಟು ಪೋಲುಮಾಡಬೇಕೆಂದು ಸ್ವಾರ್ಥವನ್ನೆ ಬಗೆದು ಮನೆ ಆಸ್ತಿ ಪಾಲು ಮಾಡಲು ಸಿದ್ಧನಾಗಿಬಿಟ್ಟ. ಅಷ್ಟರೊಳಗೆ ಬಹಳಷ್ಟು ಗಂಟು-ದಾಗೀನು ನುಂಗಿ ನೀರು ಕುಡಿದಿದ್ದ.

ಗೌಡನ ತಮ್ಮಂದಿರಾದ ಸಿದ್ಧನಗೌಡ ಹಾಗು ಅಯ್ಯನಗೌಡರು ಅಣ್ಣನ ಕುಯುಕ್ತಿ ಗೊತ್ತಾಗಿ ಬಹಳ ನೊಂದರು. ಪಾಲು ಮಾಡಬೇಡವೆಂದು ಪರಿ ಪರಿಯಾಗಿ ಬೇಡಿಕೊಂಡರು. ನೀನು ಹೇಳಿದಂತೆ ದುಡಿದು, ಹಾಕಿದ ತುತ್ತು ಅನ್ನ ಉಂಡು ಇರುತ್ತೇವೆಯೆಂದು ಸಮಾಧಾನ ಹೇಳಿದರು. ಆದರೆ ಗೌಡನ

ಬುದ್ಧಿ ನೆತ್ತೀದಾಟಿ ಹೋಗಿತ್ತು. ಅದಕ್ಕೆ ಯಾರ ಮಾತೂ ತಟ್ಟುವಂತಿರಲಿಲ್ಲ.

ಬಸವನಗೌಡನ ಮೂರ್ಖತನದ ಸುದ್ದಿ ಶಿವಯೋಗಿಗಳಿಗೂ ತಲುಪಿತು. ಅವರು ಈ ಕಾರ್ಯಕ್ಕೆ ತುಂಬ ನೊಂದುಕೊಂಡರು. ಆತನ ಅನ್ಯಾಯಕ್ಕೆ ಮರುಗಿದರು. ಗೌಡನ ಧರ್ಮಪತ್ನಿಯಾದ ಶಿವಲಿಂಗಾಂಬೆಯನ್ನು ಮಠಕ್ಕೆ ಕರೆಸಿಕೊಂಡು ಬುದ್ಧಿವಾದ ಹೇಳಿದರು—

'ತಾಯಿ, ಇದೇನು ಕಿತ್ರಾಟ ನಡೆಸಿದ್ದಾನೆ ನಿನ್ನ ಗಂಡ. ಅವನ ತಲೆ ಶುದ್ಧ ಇದೆಯೊ ಇಲ್ಲವೊ? ಮುತ್ತಿನಂಥ ತಮ್ಮಂದಿರಿವೆ. ಹೇಳಿದಂತೆ ದುಡಿಯುತ್ತವೆ. ಅವರನ್ನ ಹೊರಗ ಹಾಕಿ ಚಪಾತಿ-ತುಪ್ಪ ತಿನಬೇಕಂತ ಮಾಡೀರೇನು ಗಂಡಾ ಹೇಣ್ತಿ? ಹೋಗಿ ಹೇಳು ನಿನ್ನ ಗಂಡಗ ಈ ಹುಚ್ಚಾಟ ಬಿಟ್ಟು ಎಲ್ಲಾರೂ ಚಂದಾಗಿ ಇರಾಕಬೇಕಂತ. ನಾ ಹೇಳೇನಿ ಅಂತ ಸ್ವಚ್ಛ ಹೇಳು. ಸೊಕ್ಕು ಬಂದೈತಿ ಅವನಿಗೆ ಸೊಕ್ಕು.'

ಸ್ವಾಮಿ ಭಕ್ತಿ ಪರಾಯಣೆಯಾದ ಶಿವಲಿಂಗಾಂಬೆ ಮನೆಗೆ ಓಡಿ ಬಂದು ಗಂಡನಿಗೆ ಪರಿಪರಿಯಾಗಿ ಹೇಳಿದಳು. 'ನೀ ಬ್ಯಾರೆ ಆದ್ರ ಸ್ವಾಮಿಗಳು ಸಿಟ್ಟಾಗತಾರ. ಅವರ ಮನಸ್ಸು ಇದಕ್ಕೆ ಇಲ್ಲ. ನಿನಗೆ ಹೇಳು ಅಂತ ನನಗೆ ಮುದ್ದಾಂ ಹೇಳಿ ಕಳಿಸ್ಯಾರ. ನೀ ಹಂಗೆಲ್ಲಾ ಮಾಡಬ್ಯಾಡ. ತಮ್ಮಂದಿರನ್ನು ಕೂಡಿಕೊಂಡು ಸುಖದಿಂದ ಬಾಳಬಾರ್ದಾ? ನಿನಗೇನು ಬಂತು ಅನಾಚಾರ?' ಎಂದಳು.

ಬಸವನಗೌಡ ಹೆಂಡತಿಯ ಮೇಲೂ ಸಿಟ್ಟಾದ, ಸ್ವಾಮಿಗಳ ಮೇಲೂ ಸಿಟ್ಟಾದ. ಹೆಂಡತಿಗೆ ಹೇಳಿದ—

'ಅವರಿಗೇನು ತಿಳೀತದ ನಮ್ಮ ನಮ್ಮ ಸಂಕಟಾ, ಕಾವಿ ಉಟ್ಟೋರು ಈ ಉಸಾಬರಿಗೆ ಬರಬಾರ್ದು. ಸುಮ್ಮನ ಲಿಂಗಪೂಜಾ ಮಾಡಿಕೊಂಡು ಇರಾಕ ಬರೂದಿಲ್ಲ ಕಾಣಿಸ್ತದ ಅವ್ರಿಗೆ. ನೀ ಸುಮ್ನಿರು. ನನಗ ಸುದ್ದೀ ಸೂರಾಕ ಬರಬ್ಯಾಡ. ಮುಸ್ನೋಡೆ ಒಳಗೆ ಹೋಗು' ಎಂದು ಒದರಾಡಿದ.

ಸ್ವಾಮಿಗಳು ಎಷ್ಟು ಹೇಳಿದರೂ ಕೇಳದೆ, ಹಟ್ಟು ಹಿಡಿದು ಗೌಡ ಬೇರೆಯಾಗಿಯೆ ಬಿಟ್ಟ. ತಮ್ಮಂದಿರಿಗೆ ಸಾಲಾಮೂಲಾ ತೋರಿಸಿ ಹೊರಗೆ ಅಟ್ಟಿದ. ತಾನು ಮಾತ್ರ ಚಕ್ಕಂದ ಕುಳಿತ.

ಆದರೆ ಶಿವಯೋಗಿಯ ಮುನಿಸು ಮುಟ್ಟದೇ ಹೋದೀತೆ? ಬೇರೆ ಆದ ಒಂದು ತಿಂಗಳಲ್ಲೇ ಸತ್ತುಹೋದ! ಬೇರೆ ಆಗಿ ಸಂಸಾರ ಸುಖವನ್ನು ಒಂದು ವರ್ಷ ಕೂಡ ಭೋಗಿಸಲಿಲ್ಲ!!

# ಲಿಂಗಪೂಜೆ ಮರಿವೆಯೆ ಮಾರಿಕಾ

ಶಿವಯೋಗಿಗಳು ಒಮ್ಮೆ ಹಿರಿಯ ಸಿಂಗನಗುತ್ತಿ ಎಂಬ ಗ್ರಾಮಕ್ಕೆ ಕಾರ್ಯಾರ್ಥವಾಗಿ ಹೋಗಿದ್ದರು. ಅಲ್ಲಿ ಬಹಳ ಹೊತ್ತು ನಿಲ್ಲದೆ ಮರು ಪ್ರಯಾಣ ಕೈಕೊಂಡರು. ಆಗ ಊರಿನ ಭಕ್ತರು ಕೈಮುಗಿದು ಬೇಡಿ ಕೊಳ್ಳುತ್ತ—

'ಬುದ್ಧಿ ತಾವು ನಡೆದೇ ಬಿಟ್ಟಿರಿ. ದಯವಿಟ್ಟು ಇವತ್ತು ಇಲ್ಲೇ ಲಿಂಗಾರ್ಚನ ಪ್ರಸಾದ ತೀರಿಸಿಕೊಂಡು ಹೋಗಿರಿ' ಎಂದರು.

ಅದಕ್ಕೆ ಸ್ವಾಮಿಗಳು—

'ಅದು ಹೇಗೆ ಸಾಧ್ಯವಪ್ಪಾ? ನಿಮ್ಮ ಊರಿಗೆ ಬೆಂಕಿ ಹತ್ತಿದೆ'

ಎಂದು ಹೇಳಿ ನಡೆದೇಬಿಟ್ಟರು. ಕ್ಷಣ ಸಹ ನಿಲ್ಲಲಿಲ್ಲ. ಮುಂದೆ ಮೂರೆ ದಿನಗಳಲ್ಲಿ ಆ ಊರಿಗೆ ಭಯಂಕರ ಮಾರಿಕಾ ರೋಗ ಆವರಿಸಿತು.

ಊರಿನ ಪ್ರಮುಖರು ಹೌಹಾರಿ ಶಿವಯೋಗಿಯ ಮಹಾ ವಾಕ್ಯವನ್ನು ನೆನೆದುಕೊಂಡರು. ಆತ ಉಸುರಿದ ಮೂರೆ ದಿನಗಳಲ್ಲಿ ಇಡೀ ಊರಿಗೆ ಊರೆ ರೋಗದಿಂದ ಉರಿಯುತ್ತಿದೆ. ಇದಕ್ಕೆ ಆತನೇ ಪರಿಹಾರ. ಅವನಿಲ್ಲದಿದ್ದರೆ ಸರ್ವಸಂಹಾರವೆಂದು ತಿಳಿದು ಚಿತ್ತರಗಿಗೆ ದೌಡಾಯಿಸಿ ಓಡಿದರು. ಶಿವ ಯೋಗಿಯ ಪಾದಕ್ಕೆ ಭೋರೆಂದು ಅತ್ತರು. ಅವರ ಆರ್ತನಾದ ಕೇಂಡು ವಿಜಯ ಮಹಾಂತ ಶಿವಯೋಗಿಗಳು ಮಮ್ಮಲನೆ ಮರುಗಿ ಹೇಳಿದರು—

'ಇದಕ್ಕೇಕೆ ಇಷ್ಟು ಅಳುವಿರಿ. ಇದೇನು ಅಂಥ ದೊಡ್ಡ ರೋಗವಿದೆ. ನೀವು ಶಿವಲಿಂಗಾರಾಧನೆಯನ್ನೂ ಗುರುಲಿಂಗ ಜಂಗಮ ಸೇವೆಯನ್ನೂ ಬಿಟ್ಟಿದ್ದಕ್ಕೆ ಈ ಫಲಪ್ರಾಪ್ತಿ ಆಗಿದೆ. ಲಿಂಗಾರ್ಚನೆಯಲ್ಲಿ ಬಾಳ್ವವನಿಗೆ ಐವೊಗ ಆಳಾಗಿ ನಿಲ್ಲುತ್ತಾನೆ. ಇನ್ನು ನಡೆಯಿರಿ ಊರಿಗೆ. ಅಲ್ಲಿಯ ಶಿವಲಿಂಗಗಳಿಗೆಲ್ಲ ಪಂಚಾಮೃತಾಭಿಷೇಕ ಮಾಡಿರಿ. ನಿಮ್ಮ ಲಿಂಗವನ್ನು ತಪ್ಪದೇ ಪೂಜೆಮಾಡಿರಿ. ನಿಮ್ಮ ಎದೆಯ ಮೇಲೆ ಇಷ್ಟಲಿಂಗ ಇದೆಯೆ? ಎಂದು ಕೇಳಿದರು.

ಒಬ್ಬರ ಎದೆಯ ಮೇಲೂ ಇಷ್ಟಲಿಂಗವಿರಲಿಲ್ಲ! ಎಲ್ಲರೂ ಗೌಡರೂ ಜಮೀನ್ದಾರರೂ ಹತ್ತೆತ್ತಿನ ಕಮತವುಳ್ಳವರೂ ಸಾವುಕಾರರೂ ಸಾಲಕೊಡುವವರೂ ಧಣಿಗಳೂ ಇದ್ದರು !! ಆದರೆ ಲಿಂಗಮಾತ್ರ ನಾಸ್ತಿ !!! ಶಿವಯೋಗಿ

ಗಳ ಮಾತಿಗೆ ಎಲ್ಲರೂ ತಬ್ಬಿಬ್ಬಾದರು. ಎರಡನೆ ಸಲ ಸ್ವಾಮಿಗಳು ಗದರಿಸಿ ಕೇಳಲು ಒಬ್ಬೊಬ್ಬರೆ ಒಂದೊಂದು ವಿಧವಾಗಿ ಉತ್ತರ ಹೇಳಿದರು.

ಇವರ ಮಾತಿಗೆ ಅಳಬೇಕೊ ನಗಬೇಕೋ ತಿಳಿಯಲಿಲ್ಲ ಸ್ವಾಮಿಗಳಿಗೆ.

'ಈಗ ನೀವೆಲ್ಲರೂ ಊರಿಗೆ ಹೋಗಿ ಇಷ್ಟಲಿಂಗಧಾರಿಗಳಾಗಿ ಭಯ ಭಕ್ತಿಯಿಂದ ದಿನಾಲು ಎರಡು ಸಲ ಪೂಜೆ ಮಾಡಿರಿ. ಅಂದರೆ ಆ ಮಾರಿ ಇನ್ನು ಮೂರು ದಿನಗಳಲ್ಲಿ ಹೋಗುವಳು. ಇಲ್ಲವಾದರೆ ನಿಮ್ಮನ್ನು ಮಾರಿ ಕೊಂಡೇ ಹೋಗುತ್ತಾಳೆ. ಎಚ್ಚರಿಕೆ! ತಿಳಿಯಿತೇ?'

—ಎಂದು ಗದರಿಸಿದರು. ಎಲ್ಲರೂ ತೋಬಾ ತೋಬಾ ಎಂದು ಗಲ್ಲ ಬಡಿದುಕೊಂಡು ಹೋದರು. ಊರಿಗೆ ಹೋದವರೇ ಊರಿನ ಎಲ್ಲ ಜನ ಇಷ್ಟ ಲಿಂಗಧರಿಸಿ ಪೂಜಾವಿಧಾನಗೈದರು. ಶಿವಯೋಗಿಯ ವಾಣಿಯಂತೆ ಮಾರಿ ಆ ಊರಿನಿಂದ ಮೂರೇ ದಿನಗಳಲ್ಲಿ ತಳಕಿತ್ತಳು!

# ಲಿಂಗದ ಅರಿವು ಲಿಂಗಕ್ಕೆ

ಒಂದು ರಾತ್ರಿ ಶಿವಯೋಗಿಗಳು ತಮ್ಮ ಹುನಗುಂದ ಮಠದಲ್ಲಿ ಮೂರನೆಯ ಪೂಜೆ ತೀರಿಸಿಕೊಂಡು, ಲಿಂಗಪೂಜಾಗೃಹದಿಂದ ಅವಸರದಿಂದಲೆ ಹೊರಗೆ ಬಂದರು. ಪಕ್ಕದಲ್ಲಿ ಸೇವಕನನ್ನು ಕರೆದು ಹೇಳಿದರು—

'ಎಲೋ ಇಲ್ಲಿ ಬಾ. ಬೇಗನೇ ನೀರು ಕಾಸು. ಲಿಂಗಪೂಜಾ ಗೃಹವನ್ನು ಸಾರಿಸು. ಪೂಜಾ ಸಾಮಾನುಗಳನ್ನೆಲ್ಲ ಸಜ್ಜಾಗಿ ಗದ್ದುಗೆ ಹಾಕಿ ಇಡು. ಒಂದು ತುಪ್ಪದ ದೀಪ ಹಚ್ಚು. ಭಸ್ಮ ಪತ್ರಿ ಇಡಲು ಮರೀಬ್ಯಾಡಾ. ಸ್ವಲ್ಪ ಸಿಹಿ ಪ್ರಸಾದ ಮಾಡು. ಹುಂ ಬೇಗನೆ ಹೋಗು!

ಸೇವಕನಿಗೆ ವಿಚಿತ್ರವೆನ್ನಿಸಿ ಕೇಳಿದ—

'ಬುದ್ಧೀ ತಮ್ಮ ಪೂಜೆ ಆಗಿದೆ. ಮತ್ತೇಕೆ?'

'ಅದು ನಿನಗೇ ಗೊತ್ತಾಗುತ್ತದೆ. ಅಷ್ಟನ್ನು ಮಾಡು'

ಸೇವಕ ಮತ್ತೆ ಕೇಳಿದ—

'ಬುದ್ಧೀ ಈಗ ಸರಿರಾತ್ರಿ ಆಗಲು ಬಂತು. ಈಗ ಯಾರು ಬರುತ್ತಾರೆ?'

ಸ್ವಾಮಿಗಳು ಹೇಳಿದರು—

'ನೀ ಹೇಳಿದ್ದನ್ನಷ್ಟು ಮಾಡೋ. ಇಲ್ಲದ್ದನ್ನು ಬೆಳೆಸಬೇಡ. ವ್ಯಾಳೇ ಇಲ್ಲಾ.'

ಸ್ವಾಮಿಗಳು ಹೇಳಿದಂತೆ ಸೇವಕ ಎಲ್ಲ ವ್ಯವಸ್ಥೆಗಳನ್ನು ಮಾಡುವುದರಲ್ಲಿ ಮಧ್ಯರಾತ್ರಿ ಆಯಿತು.

ಪ್ರಸಾದ ಬಿಸಿನೀರು, ದೀಪ-ಧೂಪ, ಪೂಜಾ ದ್ರವ್ಯ ಎಲ್ಲವನ್ನೂ ಕೂಡಿಸಿ ಆತ ತೂಕಡಿಸುವ ಹೊತ್ತಿಗೆ, ಬಾಗಿಲುಕೋಟೆಯ ಮಹಾಶರಣರಾದ ಖಣಗಿಯ ಬಸವಲಿಂಗಪ್ಪನವರು ಬಂದರು. ಶಿವಯೋಗಿಗಳ ಪೂರ್ವಸೂಚನೆಗೆ ಸೇವಕ ತಬ್ಬಿಬ್ಬಾಗಿ ಹೋದ.

ಶಿವಯೋಗಿ ಭಕ್ತವತ್ಸಲನಲ್ಲವೇ? ಭಕ್ತಿಪ್ರಾಣಿಯಲ್ಲವೆ? ಲಿಂಗಪೂಜೆಯಲ್ಲೇ ಮುಂಬರುವ ಆಗುಹೋಗುಗಳನ್ನು ಅರಿಯಬಲ್ಲ ತ್ರಿಕಾಲಜ್ಞಾನ ವಿಜಯ ಮಹಾಂತೇಶ್ವರ ಮಹಾ ಯೋಗಿಗಳಲ್ಲಿ ಕರತಲಾಮಲಕವಾಗಿ ಹೋಗಿತ್ತು.

ಇಷ್ಟಕ್ಕೆ ಶಿವಯೋಗಿಗಳಿಗೆ ತೃಪ್ತಿ ತೀರಲಿಲ್ಲ. ಖಿಣಗಿ ಬಸವಲಿಂಗಪ್ಪನವರನ್ನು ಆದರದಿಂದ ಬರಮಾಡಿಕೊಂಡು ಸ್ನಾನಗೃಹಕ್ಕೆ ಕರೆದೊಯ್ದರು. ನೀರು ಸರಿಯಾಗಿ ಕಾದಿದೆಯೋ ಇಲ್ಲವೊ ಎಂದು ತಾವೇ ಕೈಯದ್ದಿ ನೋಡಿದರು. ಪೂಜಾಗೃಹಕ್ಕೆ ಬಂದು ಎಲ್ಲ ಪೂಜಾದ್ರವ್ಯಗಳು ಇರುವವೋ ಗಮನಿಸಿದರು. ಅಕ್ಷತೆ ತಾಂಬೂಲಗಳು ಕಡಿಮೆ ಇದ್ದುದನ್ನು ಗಮನಿಸಿ ತಕ್ಷಣವೇ ಇಡಿಸಿದರು. ಪ್ರಸಾದ ಗೃಹಕ್ಕೆ ಬಂದು ಪ್ರಸಾದ ಸಿದ್ಧತೆಯನ್ನು ಅವಗಾಹಿಸಿದರು. ಶಿವಯೋಗಿಗಳು ಆತ್ಮವ್ಯಕ್ತಿತ್ವದಲ್ಲಿ ಹಿಮಾಲಯ ಪರ್ವತದಂತಿದ್ದರೂ ಭಕ್ತ ಪ್ರೇಮದಲ್ಲಿ ಎಳೆಯ ಬಾಳೆಯ ಸಸಿಯಾಗಿದ್ದರು!

ಖಿಣಗಿ ಬಸವಲಿಂಗಪ್ಪನವರ ಪ್ರಸಾದದ ಸಮಯದಲ್ಲಿ ಮಠದ ಸೇವಕ ಸಣ್ಣ ದನಿಯಿಂದ ಅವರಿಗೆ ಹೇಳಿದ–

'ತಾವು ಎಲ್ಲಿಂದ ಬಂದಿರಿ?'

'ಬಾಗಿಲುಕೋಟೆಯಿಂದ'

'ಇಲ್ಲಿ ಇವತ್ತು ತಾವು ಬರುವದಾಗಿ ಯಾರಿಗಾದರೂ ಹೇಳಿ ಕಳಿಸಿದ್ದೀರಾ?'

'ಇಲ್ಲ. ಇಲ್ಲ. ಆಕಸ್ಮಿಕವಾಗಿಯೇ ಬಂದೆ. ನಾನು ಬೇರೆ ಊರಿಗೆ ಹೋಗುವವನಿದ್ದೆ. ಬಸ್ಸು ತಪ್ಪಿ ಅಪರಾತ್ರಿಯಲ್ಲಿ ಇಲ್ಲಿ ಇಳಿಯಬೇಕಾಯಿತು. ಈ ಊರಲ್ಲಿ ನಮ್ಮ ಗುರುತಿನವರು ಯಾರೂ ಇರಲಿಲ್ಲ ತ್ರಿಕಾಲ ಲಿಂಗ ಪೂಜೆಗೆ ಇವತ್ತು ಭಂಗ ಬಂದಿದೆಂದು ತಿಳಿದೆವು. ಈ ಮಠದ ನೆಪವಾಗಿ ವಸತಿ ಯಾದರೂ ಸಿಕ್ಕರೆ ಪುಣ್ಯವೆಂದು ಅನ್ನುತ್ತ ಇಲ್ಲಿಗೆ ಬಂದೆವು. ಆದರೆ ಸ್ವಾಮಿಗಳು ನಮಗೆ ಎಲ್ಲವನ್ನೂ ಅನುಕೂಲ ಮಾಡಿದರು' ಎಂದು ಬಸವಲಿಂಗಪ್ಪನವರು ಅಂದರು.

ಅದಕ್ಕೆ ಭಕ್ತ ಆಶ್ಚರ್ಯದಿಂದ ಕೇಳಿದ–

'ನೀವು ಇಲ್ಲಿ ಬರುವದನ್ನು ಶಿವಯೋಗಿಗಳಿಗೆ ಯಾರ ಮುಖಾಂತರವೂ ತಿಳಿಸಿರಲಿಲ್ಲವೇ?'

'ಛೇ ಛೇ. ನಾವು ಈ ಊರಿಗೆ ಬರುವದಿದ್ದಿಲ್ಲ. ಅಕಸ್ಮಾತ್ ಬಂದೆವು.'

'ಅಬ್ಬಾ! ಹಾಗಾದರೆ ನೀವು ಬಹಳ ಪುಣ್ಯವಂತರು. ಶಿವಯೋಗಿಗಳು

ಇವತ್ತು ನೀವು ಬರುವದನ್ನು ತಮ್ಮ ಪೂಜೆಯಲ್ಲಿ ತಿಳಿದುಕೊಂಡು, ಒಂದು ತಾಸು ಮೊದಲೇ ಎಲ್ಲವನ್ನೂ ನನ್ನ ಕಡೆಯಿಂದ ಸಿದ್ಧ ಮಾಡಿಸಿದರು.

ಎಂದು ಸೇವಕ ಭಾವಗರ್ಭಿತನಾಗಿ ಹೇಳಿದ. ಅದನ್ನು ಕೇಳಿ ಖಣಗಿ ಬಸವಲಿಂಗಪ್ಪನವರು ಅತ್ಯಾಶ್ಚರ್ಯದಿಂದ ಉದ್ಗಾರ ತೆಗೆದರು–

'ಧನ್ಯ ಧನ್ಯ. ಇಂದಿಗೆ ನನ್ನ ಬಾಳು ಧನ್ಯ. ಮಹಾಶಿವಯೋಗಿಯ ಕೃಪೆಯು ನನ್ನ ಮೇಲೆ ಆಯಿತು. ವಿಜಯ ಮಹಾಂತೇಶ್ವರಾ ! ನೀನು ಸಾಮಾನ್ಯನಲ್ಲ. ಬಸವ ಅಲ್ಲಮಪ್ರಭು ಚನ್ನಬಸವಣ್ಣನವರಿಗಿಂತಲೂ ನೀನು ಅಧಿಕ........! ನೀನು ಅಧಿಕ........!! ನಮೋ........ ನಮೋ........ !!! '

ಎಂದು ಕೊಂಡಾಡಿದರು.

# ಗೌಡನ ಗೌಡಿಕೆ

ಶಿವಯೋಗಿಗಳು ಹೆಜ್ಜೆ ಇಟ್ಟರೆ ಒಂದು ಪವಾಡ, ಹೆಜ್ಜೆ ಕಿತ್ತರೆ ಒಂದು ಪ್ರತಾಪ ತೋರಿಸುವವರು. ನುಡಿದರೆ ಒಂದು ಕಡವರ, ಸಿಡಿದರೆ ಒಂದು ಸಿಡಿಲು ಚಲ್ಲಿಹೋಗುವವರು.

ಒಂದು ಸಲ ತಮ್ಮ ಭವ್ಯ ಕುದುರೆಯನ್ನೇರಿ ಅರಣ್ಯ ಮಾರ್ಗವಾಗಿ ಹೋಗುತ್ತಿದ್ದಾರೆ. ಮಾರ್ಗ ಮಧ್ಯದಲ್ಲಿ ಒಂದು ಹಳ್ಳಿಯ ಗೌಡ ಕೈಮುಗಿಯುತ್ತ, ದಂಡ ನಮಸ್ಕಾರ ಹಾಕುತ್ತ ಹಿಂದಿಯೆ ಬರುತ್ತಿದ್ದಾನೆ. ಶಿವಯೋಗಿಗಳು ಅದನ್ನು ಕಂಡರೂ ಕಾಣದಂತೆಯೆ ಸಾಗಿದರು. ಅನೇಕ ಮೈಲುಗಳವರೆಗೆ ಆ ಗೌಡ ಹಾಗೆ ವಂದಿಸುತ್ತ ಹುಚ್ಚನಂತೆ ಬರುತ್ತಿದ್ದಾನೆ. ಆಗ ಶಿವಯೋಗಿಗಳಿಗೆ ಕರುಣೆ ಅರಳಿ ಕುದುರೆಯನ್ನು ಎಳೆದು ನಿಲ್ಲಿಸಿ ಕೇಳಿದರು—

'ಯಾರಪಾ ನೀನು? ಬಾ ಇಲ್ಲಿ, ನನ್ನ ಕುದುರೆಯ ಹಿಂದೆ ಬಹಳ ದೂರ ಬಂದಿರುವಿ. ಯಾಕೆ ಏನು ವಿಚಾರವಿದೆ ಹೇಳಬಾರದೆ? ಮನಸ್ಸು ಬಿಚ್ಚಿ ಹೇಳು. ಇಲ್ಲಿ ಯಾವ ಆತಂಕವೂ ಇಲ್ಲ.'

ಗೌಡ ಹಿಂದೆ ಮುಂದೆ ನೋಡುತ್ತಲೇ ಹೇಳಿದ—

'ಬುದ್ಧೀ ನನಗೊಂದು ಸಂಕಟ ಬಂದಿದೆ. ಸರಕಾರದವರು ನನ್ನ ಮೇಲೆ ತಪ್ಪು ಹೊರಿಸಿ ನನ್ನ ಗೌಡಿಕೆ ಕಿತ್ತು ಒಗೆದಿದ್ದಾರೆ. ನಮ್ಮ ಹಳ್ಳಿಯಲ್ಲಿ ಮತ್ತೊಬ್ಬರಿಗೆ ಕೊಟ್ಟಿದ್ದಾರೆ. ತಾವು ಕೃಪೆ ಮಾಡಬೇಕು.'

ಶ್ರೀಗಳು ಹೇಳಿದರು.

'ಲೇ ಗೌಡಾ, ಅದಕ್ಕೇಕೆ ಕೊರಗುವಿ. ನೀನು ಏನೂ ಪ್ರಯತ್ನಮಾಡಬೇಡ. ಮನೆಗೆ ಹೋಗಿ ಸುಮ್ಮನೆ ಇದ್ದು ಬಿಡು. ಆ ಗೌಡಿಕೆ ತಾನೆ ನಿನ್ನ ಹತ್ತರ ಬರುತ್ತದೆ' ಎಂದರು.

ಶಿವಯೋಗಿಗಳ ಮಾತಿನಲ್ಲಿ ಗಾಢವಾದ ವಿಶ್ವಾಸವಿರಿಸಿ ಗೌಡ ಮನೆ ಸೇರಿದನು. ಮುಂದೆ ಎರಡೇ ತಿಂಗಳಿಗೆ ಗೌಡಕಿಯನ್ನು ಮರಳಿ ನಡೆಸಬೇಕೆಂದು ಸರಕಾರದವರು ಅವನಿಗೆ ಹುಕುಂ ನೀಡಿದರು. ಕುಳಿತಲ್ಲೇ ಕಾಂಚನ ಸಿದ್ಧಿ ಪ್ರಾಪ್ತವಾಯಿತು!

ಶಿವಯೋಗಿಗಳ ಜೀವನದಲ್ಲಿ ಇಂತಹ ಪುಟ್ಟ ಘಟನೆಗಳು ಲಕ್ಷಾವಧಿ ನಡೆದುಹೋದವು. ಅವೆಲ್ಲವುಗಳನ್ನು ಸಂಗ್ರಹಿಸಲು ಹೋದರೆ ಹತ್ತು ಹೆಬ್ಬೊತ್ತಿಗೆಗಳೇ ಬೇಕಾದಾವು ! ಇದಲ್ಲದೆ ಇನ್ನೂ ನೂರಾರು ಅದ್ಭುತ ಆಶ್ಚರ್ಯ ಘಟನೆಗಳು ಯಾರಿಗೂ ತಿಳಿಯದಂತೆ ನಡೆದು, ಕಾಲಗರ್ಭದಲ್ಲಿ ಹೂತುಹೋದವು. ಅವುಗಳು ದೊರೆಯುದ್ದಕ್ಕಾಗಿ ಮರುಗುವದೊಂದೇ ಈಗ ಉಳಿದ ಮಾರ್ಗ ! ಇನ್ನೇನನ್ನೂ ಮಾಡಲು ಬರುವಂತಿಲ್ಲ. ಸದ್ಯ ದೊರೆತ ಅವರ ಜೀವನ ಕಾರ್ಯ ಹಾಗೂ ಯೋಗ ಕಾರ್ಯಗಳು ನೂರರಲ್ಲೊಂದು ಪಾಲು ಮಾತ್ರ!

# ಪಾರಾಯಣದಿಂದ ಫಲಸಿದ್ಧಿ

ಇಲಕಲ್ಲಿನ ಮಹಾಂತಪ್ಪನೆಂಬ ಸದ್ಭಕ್ತನು ಶಿವಯೋಗಿಗಳ ಕರುಣೆಯ ಪುತ್ರನಾಗಿ, ಚಿತ್ತರಗಿ ಪೀಠದ ಚೊಚ್ಚಿಲಮಗನಾಗಿ ಬಾಳುತ್ತಿದ್ದನು, ಶಿವಯೋಗಿಗಳೆಂದರೆ ಆತನಿಗೆ ಪಂಚಪ್ರಾಣ. ಇನ್ನೂ ದಾಂಪತ್ಯ ಸುಖದಲ್ಲಿ ಇದ್ದಾಗಲೆ ಆತನ ಕಣ್ಣುಗಳು ಹೋಗಿಬಿಟ್ಟವು. ಜಗತ್ತು ಕತ್ತಲೆಯಾಯಿತು. ಆದರೆ ಅಂತರಂಗ ಮಾತ್ರ ಬೆಳಕಾಗಿಯೇ ಉಳಿಯಿತು.

ಆತನ ಹೆಂಡತಿ ತುಂಬು ಗರ್ಭಿಣಿ. ನವಮಾಸ ತುಂಬಿ ಪ್ರಸವ ವೇದನೆಯನ್ನು ಅನುಭವಿಸತೊಡಗಿದಳು. ಆದರೆ ಒಮ್ಮೆಲೆ ಬೇನೆಗಳು ಕಟ್ಟಾಗಿ ಪ್ರಸವ ವೇದನೆ ನಿಂತು ಭಯಂಕರ ಸಂಕಟಕ್ಕೆ ತುತ್ತಾದಳು. ವೈದ್ಯರನ್ನು ಕರೆಸಿದರು. ಅವರು ವಿಫಲರಾದರು. ದೊಡ್ಡ ಡಾಕ್ಟರರನ್ನು ಕರೆಸಿದರು. ಅವರು— 'ಕೂಸನ್ನು ಕತ್ತರಿಸಿ ತೆಗೆಯಬೇಕು. ಇಲ್ಲವಾದರೆ ಕೂಸು–ತಾಯಿ ಇಬ್ಬರೂ ಸಾಯುತ್ತಾರೆ!' ಎಂದರು. ಆದರೂ ಕೂಡ ತಾಯಿಯ ಜೀವ ಉಳಿಯುವ ಬಗ್ಗೆ ಭರವಸೆ ಕೊಡಲಿಲ್ಲ.

ಮಹಾಂತಪ್ಪ ಆದದ್ದಾಗಲೆಂದು ಕೋಲಿನ ಆಸರೆಯಿಂದ ಓಡಿ ಬಂದು ಶಿವಯೋಗಿಗಳ ಪಾದದ ಮೇಲೆ ಬಿದ್ದು ಅಂಗಲಾಚಿ ಬೇಡತೊಡಗಿದ. ಸ್ವಾಮಿಗಳು ಸ್ವಲ್ಪಕಾಲ ಏನೇನೊ ಎಣಿಕೆ ಹಾಕಿದರು. ಆಮೇಲೆ ಒಂದು ವಿಚಿತ್ರ ಪರೀಕ್ಷೆಯನ್ನೆ ಕೈಕೊಂಡರು. 'ಮಹಾಂತಪ್ಪಾ ನಿನ್ನ ಮನೆಯಲ್ಲಿದ್ದ ಎಲ್ಲ ಪುಸ್ತಕಗಳನ್ನೂ ತೆಗೆದುಕೊಂಡು ಬಾ' ಎಂದರು. ಆತ ಓಡಿಹೋಗಿ ತನ್ನ ಮನೆಯ ಗ್ರಂಥಗಳನ್ನು ತಂದುಕೊಟ್ಟ. ಆ ಗ್ರಂಥ ರಾಶಿಯಲ್ಲಿ ಶ್ರೀಗಳು ಹುಡುಕಾಡಿ 'ಅಪ್ಪಗಳ' ವಚನದ ಒಂದು ಪುಸ್ತಕವನ್ನು ಹೊರ ತೆಗೆದರು. ಆದರಲ್ಲಿ ಒಂದು ವಚನವನ್ನು ಓದಿ ಅರ್ಥ ಮಾಡಿಕೊಂಡು ಹೇಳಿದರು—

'ಮಹಾಂತಪ್ಪಾ, ನೋಡು ಇಲ್ಲಿ ಅಪ್ಪನವರು ಒಂದು ಕರಾರು ನಿನಗೆ ಹಾಕಿದ್ದಾರೆ. ಪ್ರತಿದಿನ ಅವರ ವಚನಗಳನ್ನು ನೀನು ಭಕ್ತಿಯಿಂದ ಪಾರಾಯಣ ಮಾಡಿದರೆ ನಿನ್ನ ಹೆಂಡತಿ ಸರಿಯಾಗಿ ಹಡೆಯುವಳೆಂದು ಅಪ್ಪಣೆ ಕೊಡಿಸುತ್ತಿದ್ದಾರೆ.'

ಆಗ ಮಹಾಂತಪ್ಪ ಆಶ್ಚರ್ಯದಿಂದಲೆ ಕೇಳಿದ—

'ಬುದ್ಧೀ ಇದೇನು ಹೇಳಿದಿರಿ? ನನ್ನ ಕಣ್ಣುಗಳೇ ಇಲ್ಲ, ಪಾರಾಯಣ ಹೇಗೆ ಮಾಡುವದು?'

ಆಗ ಸ್ವಾಮಿಗಳು ಸ್ವಲ್ಪ ಸಿಟ್ಟಿನಿಂದಲೆ ಹೇಳಿದರು–

'ಸುಮ್ಮನೆ ಹೂಂ ಅನ್ನೊ ಮೂರ್ಖಾ. ಅಪ್ಪಗಳ ಮಾತಿಗೆ ವಿರುದ್ಧ ಹೋಗಬೇಡ. ದಿನಾಲು ಪಾರಾಯಣ ತಪ್ಪದೇ ಮಾಡು. ಬೇಕಾದರೆ ಆತನೆ ನಿನಗೆ ಕಣ್ಣುಗಳನ್ನು ಕೊಡುತ್ತಾನೆ.'

'ಆಗಲಿ ಬುದ್ಧಿ ದಿನಾಲು ಪಾರಾಯಣ ಮಾಡುತ್ತೇನೆ'

'ಇನ್ನು ಹೋಗು. ಅಲ್ಲಿ ಮನೆಯಲ್ಲಿ ನಿನ್ನ ಹೆಂಡತಿ ಗಂಡು ಕೂಸು ಹಡೆದಿದ್ದಾಳೆ. ಎತ್ತಿಕೊ ಹೋಗು' ಎಂದರು.

ಮೂಂತಪ್ಪ ಮಠದಿಂದ ಮರಳಿ, ತನ್ನ ಮನೆಯ ಹೊಸ್ತಿಲಲ್ಲಿ ಕಾಲಿಡುತ್ತಲೇ – ಮಗು ಅರಚುವಂತೆ ಧ್ವನಿ ಬಂತು! ಅವನ ತಾಯಿ ಅವನ ಹತ್ತಿರ ಓಡಿ ಬಂದು 'ಗಂಡು....ಗಂಡು....' ಎನ್ನುತ್ತ ಡುಬ್ಬ ಚಪ್ಪರಿಸಿದಳು.

ಆತ ಮಗನನ್ನು ಎತ್ತಿಕೊಳ್ಳಲು ಬರುತ್ತಾನೆ; ಆಗಲೇ ಕಣ್ಣುಗಳು ಮಂಜು ಕಾಣತೊಡಗಿದವು! ಹಿಗ್ಗಿ ಪುಟಚಂಡಿನಂತಾದ. ದಿನ ದಿನ 'ಅಪ್ಪನವರ' ವಚನಗಳನ್ನು ಪಠನ ಮಾಡಲು ಪ್ರಯತ್ನಿಸಹತ್ತಿದ. ಬಹಳ ಕಷ್ಟದಿಂದ ನೋಡಿದರೆ ಒಂದೊಂದೇ ಅಕ್ಷರಗಳು ಮಸುಕು ಮಸುಕಾಗಿ ಕಾಣಹತ್ತಿದವು. ಮುಂದೆ ಕೆಲ ದಿನಗಳಲ್ಲೇ ಸ್ಪಷ್ಟವಾಗಿ ತೋರಹತ್ತಿದವು. ಆ ಮೇಲೆ ಸಹಜವಾಗಿ ಪಠಿಸಹತ್ತಿದ.

ಶ್ರೀಗಳ ಕೃಪೆಯೆ ಇಂಥದು. ಒಂದು ಕಲ್ಲು ಒಗೆದರೆ ಎರಡು ಫಲ! ಹೆಂಡತಿ ಜೀವದಿಂದ ಉಳಿಯಲಿಯೆಂದು ಬೇಡಿಕೊಳ್ಳಲು ಹೋದರೆ, ಅದರ ಜೊತೆಗೆ ಕಣ್ಣುಗಳನ್ನೂ ಕೊಟ್ಟ ಮಹಾರಾಯ!! ವಿಜಯ ಮಹಾಂತ ಶಿವಯೋಗಿಗಳು ಬೇಡಿದ ಭಕ್ತರಿಗೆ ಕೈಯ ಮೇಲೆಯೇ ಫಲವನ್ನು ನೀಡುವ ಕರುಣಾಶಾಲಿಗಳು. ಆದರೆ ಆ ಗೂಢವನ್ನು ತಿಳಿದುಕೊಂಡವರು ಎಷ್ಟು ಜನ?

## ಪೆಟ್ಟು ತಗುಲಿದಾಗಲ್ಲವೇ ಜೋಳ ಹಿಟ್ಟಾಗುವದು!

ಓತಗೇರಿಯ ಆಡಿವೆಪ್ಪನೆಂದರೆ ಹುರಿಕಟ್ಟಾದ ಹುರಿಮೀಸೆಯ ಆಳು. ಕೈಕೂಲಿಯ ಕಮ್ಮಾರ. ಕೈಯಲ್ಲಿ ನಾಲ್ಕು ಕಾಸುಗಳು ಮೆಲ್ಲನೇ ಆಡ ಹತ್ತಿದವು. ಅವನಿಗೆ ಯಾರ ಪರಿವೆಯೂ ಇಲ್ಲ. ದೊಡ್ಡವರ ಹಂಗು ಇಲ್ಲ. ಚಿಕ್ಕವರ ಹದ ಇಲ್ಲ.

ವಿಜಯ ಮಹಾಂತ ಶಿವಯೋಗಿಗಳು ಓತಗೇರಿಯ ಮಠದ ಆಗು ಹೋಗುಗಳನ್ನು ನಿರೀಕ್ಷಿಸಲು ಒಂದು ಸಲ ಬರಬೇಕಾಯಿತು. ಆದೇ ಸಮಯ ದಲ್ಲಿ ಮಠದ ಜೀರ್ಣೋದ್ಧಾರವೂ ನಡೆಯಿತು. ಅವರಿಗೆ ಯಾವ ಕೆಲಸವೂ ಗೌಣವಲ್ಲ. ಯಾವ ಕಾಯಕವೂ ಕ್ಷುದ್ರವಲ್ಲ. ಗುದ್ದಲಿ, ಸಲಿಕೆ, ಕಬ್ಬಿಣಬುಟ್ಟಿ ಮೊದಲಾದ ಮಠದ ಸಾಮಾನುಗಳನ್ನು ರಿಪೇರಿ ಮಾಡಿಸುವದರಿಂದ ಹಿಡಿದು ಶಿವಯೋಗ ಮಂದಿರ ಸ್ಥಾಪಿಸುವ ವರೆಗೆ ಎಲ್ಲ ಕೆಲಸಗಳೂ ಅವರಿಗೇ ಒಂದೇ ಸಮನಾಗಿದ್ದವು. ಅವರು ಕಾಯಕ ಜೀವಿಗಳು. ಕಾಯಕ ತತ್ಪರತೆಯೇ ಅವರ ಶಿವಯೋಗದ ಬಹಿರ್ಮುಖ ಅಭಿವ್ಯಕ್ತಿಯಾಗಿತ್ತು.

ಹೀಗಿರಲು ಮಠದಲ್ಲಿ ಜಂಗುಹತ್ತಿದ ಗುದ್ದಲಿಯೊಂದನ್ನು ಪೆಟ್ಟು ಹೆರಿಸಲು ಕಮ್ಮಾರನ ಬಳಿಗೆ ಕೊಟ್ಟು ಕಳಿಸಿದರು. ಸಾಧಾರಣ ಮಠದ ಚಿಕ್ಕ ಪುಟ್ಟ ಕಾರ್ಯಗಳನ್ನು ಭಕ್ತರೆಲ್ಲಾ ಉಚಿತವಾಗಿಯೇ ಮಾಡಿಕೊಡುವ ವಾಡಿಕೆ ಇತ್ತು. ಮಠದಿಂದ ದುಡ್ಡು ಇಸಗೊಳ್ಳಬಾರದೆಂದು ಅಂದಿನ ನೈಜ ಶ್ರದ್ಧೆ.

ಶಿವಯೋಗಿಗಳ ಸೇವಕ ಗುದ್ದಲಿಯನ್ನು ಕಮ್ಮಾರನ ಬಳಿಗೆ ಒಯ್ದ. ಆತ ಇಲ್ಲದ ಎಡಸೊಕ್ಕಿನಿಂದ–

'ಇದು ಬಹಳ ಶ್ರಮದ ಕೆಲಸವಿದೆ. ನಮ್ಮ ಕಷ್ಟ ನಿಮ್ಮ ಸ್ವಾಮಿಗಳಿಗೇನು ತಿಳಿದೀತು. ಗಾದೀ ಮ್ಯಾಲ ಕುಂತವ್ರಿಗೆ ಹಾದಿ ಜನರದ್ದು ಏನು ಗೊತ್ತು? ಹೋಗು.... ಹೋಗು.... ಈ ಪುಗಸೆಟ್ಟಿ ಕೆಲಸಕ್ಕೆ ನನ್ನ ರಟ್ಟಿ ಕಳಕೊಳ್ಳಾಕ ನಾ ಒಲ್ಲೆ' ಎಂದು ಕೈಯಲ್ಲಿ ಹಿಡಿದ ಗುದ್ದಲಿಯನ್ನು ಮೂರು ಮಾರು ಒಗೆದನು.

ಸೇವಕ ಇದ್ದುದಿದ್ದಂತೆ ಸ್ವಾಮಿಗಳಿಗೆ ಅರುಹಿದನು. ಆಗ ಅವರು–

'ಆಗಲಿ ಬಿಡಪ್ಪಾ. ಅವಂದರ ಏನ ತಪ್ಪ ಐತಿ? ಅವನಿಗೆ ರಟ್ಟೀನ ಇಲ್ಲಾ ಮಾಡತಾನರ ಹ್ಯಾಂಗ?' ಎಂದರು.

ಈ ಮಾತು ಮುಗಿದು ಎರಡು ವಾರ ಕೂಡ ಕಳೆದಿರಲಿಲ್ಲ. ಆ ಕಮ್ಮಾರನಿಗೆ ಅರ್ಧಾಂಗವಾಯು ಹೊಡೆದು ಬಲಭಾಗವೆಲ್ಲ ನಿರುಪಯುಕ್ತವಾಗಿ ಹೋಯಿತು. ಸೂಚಿ ಚುಚ್ಚಿದರೂ ಗೊತ್ತಾಗದಂತೆ ಅರ್ಧ ಭಾಗ ಸ್ಪರ್ಶ ರಹಿತವಾಯಿತು. ಉಕ್ಕಿನ ದೇಹದ ಮನುಷ್ಯ ಬಗಲ ಬಡಿಗಿ ಊರಿಕೊಂಡು ಹೋಗಹತ್ತಿದ. ಈಗ ಆವನಿಗೆ ತನ್ನ ಪಾಪ ತನಗೇ ಉಳಿಯಿತು. ಶಿವ ಯೋಗಿಯನ್ನು ಛಂಗಿಸಿದ ಮಾತು ಎದೆ ಸೀಳಿ ಕೇಳಹತ್ತಿತು. ಪ್ರಾಯಶ್ಚಿತ್ತ ಬಂದದ್ದೇ ತಡ, ಸ್ವಾಮಿಗಳ ಮಠಕ್ಕೆ ಬಗಲಬಡಿಗೆ ಊರುತ್ತ ಹೋದ. ತನ್ನ ಪಾಪವನ್ನು ಕಳೆಯಬೇಕೆಂದು ಬೇಡಿದ. ಶಿವಯೋಗಿಗಳು ಅವನ ಮೊಂಡು ತನಕ್ಕೆ ಛೀಹಳಿಹಾಕಿದರು. 'ಇನ್ನಾದರೂ ಬುದ್ಧಿ ಬಂದಿತೇನೋ ಮೂರ್ಖಾ?' ಎಂದು ಸ್ವಲ್ಪ ಉಗ್ರವಾಗಿಯೇ ಕೇಳಿದರು. ಅವರ ಮಾತಿಗೆಲ್ಲ ಈತ ಕಮ್ಮಾರನ ತಿದಿ ಗೋಣುಹಾಕಿದಂತೆ ಹಾಕಿದ.

ಕೊನೆಗೆ ಶಿವಯೋಗಿಗಳು ಆತನ ಪಾರ್ಶ್ವವಾಯು ತಗುಲಿದ ದೇಹದ ಮೇಲೆ ಕೈಯಾಡಿಸಿ—

'ಹೋಗು ಗುಣವಾಗುತ್ತದೆ. ಇನ್ನಾದರೂ ಸೆಡವು ಸಿಡುಕು ಬಿಟ್ಟು ಸದ್ಭಕ್ತನಾಗು' ಎಂದರು.

ಮುಂದೆ ಒಂಬತ್ತೇ ದಿನಗಳಲ್ಲಿ ಪಾರ್ಶ್ವವಾಯು ಸರಿಯಿತು. ಮತ್ತೆ ಮೊದಲಿನಂತೆ ಕಬ್ಬಿಣದ ಕಾಯಕಕ್ಕೆ ನಿಂತು ಆದರೆ ಮೊದಲಿನಂತೆ ಕಬ್ಬಿಣದ ಗುಣವನ್ನು ತೋರಲಿಲ್ಲ. ಪೆಟ್ಟು ತಗುಲಿದಾಗಲ್ಲವೇ ಜೋಳ ಹಿಟ್ಟಾಗುವದು?

# ಕಾಮ ವಿಜಯದ ನಿಜನಿಯಮ

ರಾಮಗಡ್ಡಿ ಮಠದ ಸ್ವಾಮಿಯು ಇನ್ನೂ ತರುಣ. ವಿಜಯ ಮಹಾಂತ ಶಿವಯೋಗಿಗಳ ಸತ್‌ಶಿಷ್ಯ. ಈತ ಒಂದು ಸಲ ಇಲಕಲ್ಲಿಗೆ ಆಗಮಿಸಿ ಗುರುಗಳ ದರ್ಶನವನ್ನು ಪಡೆದ. ಶಿವಯೋಗಿಗಳು ಇವನನ್ನು ಗೌರವದಿಂದ ಬರಮಾಡಿ ಕೊಂಡರು. ಪೂಜಾಪ್ರಸಾದಗಳಿಗೆ ಅನುಕೂಲತೆ ಒದಗಿಸಿದರು. ಪ್ರಸಾದದ ನಂತರ ಶಿಷ್ಯನನ್ನು ತಮ್ಮ ಪಕ್ಕದಲ್ಲಿ ಕೂಡ್ರಿಸಿಕೊಂಡರು.

ಯಾರಿಗೆ ಯಾವ ಕಾಲಕ್ಕೆ ಏನು ಕೇಳಬೇಕೆಂಬ ವ್ಯವಹಾರ ಪ್ರಜ್ಞೆ ವಿಜಯ ಮಹಾಂತ ಶಿವಯೋಗಿಗಳಲ್ಲಿ ತುಂಬಿ ತುಳುಕುತ್ತಿತ್ತು. ಈಗಲೇ ಎಚ್ಚರಿಕೆ ನೀಡುವದು ಅತಿ ಯೋಗ್ಯವೆಂದು ಶಿವಯೋಗಿಗಳಿಗೆ ಹೊಳೆದು ಮೆಲ್ಲಗೆ ತಮ್ಮ ಮಾತಿನ ಕಂತೆ ಬಿಚ್ಚಿದರು.

'ತರುಣ ಸಾಧಕನೇ, ನನ್ನ ಎರಡು ಮಾತುಗಳಿವೆ. ಕೇಳಬಲ್ಲೆಯಾ?'

ಆತ ಉತ್ತರಿಸಿದ–

'ಹೇಳಿ ಸ್ವಾಮಿಾ ಹೇಳಿ. ಇದೆಂಥಾ ಮಾತು? ಇದಕ್ಕೇಕೆ ನನ್ನ ಒಪ್ಪಿಗೆ ಕೇಳುವಿರಿ?'

'ಹಾಗಲ್ಲಪ್ಪಾ. ನನ್ನ ಮಾತು ನಿನಗೆ ಬರೆ ಕೊಟ್ಟಂತೆ ಆಗಬಾರದೆಂಬ ವಿಚಾರದಿಂದ ಕೇಳಿದೆ'

'ಶಿವಯೋಗಿಗಳೇ, ತಾವು ಕೊಟ್ಟ ಬರೆಯೂ ನನ್ನ ಕೈವಲ್ಯ ಮಾರ್ಗಕ್ಕೆ ಚಾಟಿಯ ಏಟಿನಂತೆ ಚುರುಕು ನೀಡೀತು. ಹೇಳಿ ದಯವಿಟ್ಟು ಹೇಳಿ'—

'ಹಾಗಾದರೆ ಕೇಳು. ನೀನಿನ್ನೂ ತರುಣ, ಬಲಿಷ್ಠ, ಬಲವಂತ ಇಂದ್ರಿಯಗಳ ಚೈತನ್ಯ ಶೀಘ್ರವಾಗಿರುವ ಸುಂದರ. ಜೊತೆಗೆ ಶ್ರೀಮಂತಿಕೆ ಇದೆ. ಆಸ್ತಿ ಇದೆ. ಬಯಸಿದ ಭೋಗ ಎಡೆಮಾಡಿ ನಿಲ್ಲುವಂತಿದೆ, ನಿನಗೆ ನಿನ್ನ ತೊಡೆ ಏರಬಲ್ಲ ಭೋಗ ಬೇಕೊ. ನಿನ್ನ ಆತ್ಮಾರ್ಪಣೆಯನ್ನೇ ಬಯಸುವ ತ್ಯಾಗ ಬೇಕೊ?'

'ತ್ಯಾಗವನ್ನೇ ಅನುಗ್ರಹಿಸಿರಿ ಗುರುವೆ'

'ಕೇಳು. ಯೋಗವೂ ಕಾಮವೂ ಜೊತೆಗೂಡಿ ಬಾಳಲಾರವು. ಅಧಃ ಪ್ರಪಂಚದ ಕಾಮ ತಮಸ್ಸಿನ ಪ್ರತೀಕ. ಆಲಸ್ಯ, ಆತುರ, ಚಾಂಚಲ್ಯ,

ಬಯಕೆ, ಲಾಲಸೆ, ಮೌಢ್ಯಗಳು ಕಾಮನ ಬೇರಿಗೆ ನೀರೆರೆಯುತ್ತವೆ. ಈ ಮಾತು ನಿನಗೆ ಸರಿ ಕಾಣುವದ?'

'ಒಪ್ಪಿದೆ. ಮಹಾತ್ಮರೆ ಒಪ್ಪಿದೆ. ಆದರೆ ಎಂಥ ಕಠೋರ ಯೋಗ ವೈರಾಗ್ಯವೇ ಇದ್ದರೂ ಇಂದ್ರಿಯ ನಿಗ್ರಹ ಮಾಡಿದರೂ ಸ್ತ್ರೀ ದರ್ಶನ ಮಾತ್ರದಿಂದ ಮನ ಚಂಚಲವಾಗುತ್ತದೆ. ಬೇಡವೆಂದರೂ ಓಡಿ ಹೋಗು ತ್ತದೆ. ಈ ಮನಕ್ಕೆ ಮದ್ದುಂಟೇ?'

'ಇದೆ. ಅವಶ್ಯವಾಗಿ ಇದೆ. ಅದೇ ದೃಷ್ಟಿ ಪರಿವರ್ತನೆ. ದೃಷ್ಟಿ ಪರಿ ವರ್ತನೆಯಿಂದ ಪ್ರವೃತ್ತಿ ಪರಿವರ್ತನೆಯಾಗುತ್ತದೆ. ಹೆಣ್ಣನ್ನು ದೇವತೆ ಯೆಂದಾಗಲಿ ತಂಗಿಯೆಂದಾಗಲಿ ಭಾವಿಸುವದೇ ದೃಷ್ಟಿ ಪರಿವರ್ತನೆ. ಈ ಪರಿ ವರ್ತನೆ ಯಾವ ಕ್ಷಣಕ್ಕೆ ಸಾಧಿಸುತ್ತದೆಯೊ ಅಂದಿನಿಂದಲೆ ಕಾಮವಿಜಯ ಸಿದ್ಧ. 'ಹೆಣ್ಣು ಹೆಣ್ಣಲ್ಲ, ಹೆಣ್ಣು ರಕ್ಕಸಿಯಲ್ಲ, ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ ನೋಡಾ' ಎಂಬ ಶರಣ ವಾಕ್ಯದಲ್ಲಿ ನಿನಗೆ ಸಂದೇಹವೆ?'

'ಇಲ್ಲ ಗುರುದೇವಾ. ಆದರೆ ಮನೋನಿಗ್ರಹವನ್ನು ಮೀರಿ ಒಮ್ಮೊಮ್ಮೆ ಕಾಮದ ಬಿರುಗಾಳಿಗಳು ಏರಿಬರುತ್ತವೆ. ಬಣ್ಣಬಣ್ಣದ ಕಲ್ಪನೆಗಳು ಮನೆ ಮಾಡುತ್ತವೆ. ಒಂದೊಂದು ಸಲವಂತೂ....'

'ನಿಲ್ಲು ತಿಳಿಯಿತು. ಇದಕ್ಕೆ ಸರಳ ಉಪಾಯವಿದೆ. ಕಾಮಭಾವಗಳು ಬಂದಾಗ ಅವುಗಳ ಜೊತೆಗೆ ಗುದ್ದಾಡಿ ಓಡಿಸುವದು ತಪ್ಪು. ನಾವು ಪ್ರತಿಭಟಿ ಸಿದಷ್ಟು ಅವು ಪ್ರಬಲವಾಗುತ್ತವೆ, ಮತ್ತಷ್ಟು ದೊಡ್ಡ ಪ್ರಮಾಣದ ದಾಳಿ ಯನ್ನೇ ಮಾಡಿಬಿಡುತ್ತವೆ. ಆಗ ಸಾಧಕ ನಿತ್ರಾಣನಾಗುತ್ತಾನೆ'

'ಅಂದರೆ? ಸುಮ್ಮನೆ ಮೌನ ತಾಳಬೇಕೆ?'

'ಹಾಗೂ ಅಲ್ಲ. ಪ್ರಭುಶಕ್ತಿಗೆ ನಿನ್ನನ್ನು ಸಂಪೂರ್ಣವಾಗಿ ಪ್ರಾಮಾಣಿಕ ವಾಗಿ ತೆರೆದುಕೊಳ್ಳಬೇಕು. ಆಗ ಅನಂತ ಪ್ರಕಾಶ, ದೈವೀಶಕ್ತಿ, ದಿವ್ಯಜ್ಞಾನ ಗಳು ಓತಪ್ರೋತವಾಗಿ ಪ್ರಕಟಗೊಂಡು ಕಾಮವನ್ನು ಓಡಿಸುತ್ತವೆ. ಕಾಮವು ಮನಸ್ಸಿನಲ್ಲಿ ಮಾತ್ರ ಇದೆಯೆಂದು ಅನೇಕ ಸಾಧಕರು ತಿಳಿದು ತಪ್ಪು ದಾರಿ ಹಿಡಿಯುತ್ತಾರೆ. ಅದು ಹಾಗಲ್ಲ. ಕಾಮವು ಮನಸ್ಸಿನಲ್ಲಿರುವದಕ್ಕಿಂತಲೂ ಆಳವಾಗಿ ಪ್ರಾಣದಲ್ಲಿರುವದಕ್ಕಿಂತಲೂ ಗೂಢವಾಗಿ ದೇಹದಲ್ಲಿದೆ. ಆದ್ದರಿಂದ ನಮ್ಮ ಮನಸ್ಸು–ಪ್ರಾಣ–ದೇಹೇಂದ್ರಿಯಗಳನ್ನೆಲ್ಲ ಪ್ರಭುಶಕ್ತಿಗೆ ಸಂಪೂರ್ಣ

ವಾಗಿ ತೆರೆಯಬೇಕು. ಅರ್ಪಿಸಬೇಕು. ಭಕ್ತಿ–ವಿಶ್ವಾಸ–ಸಮರ್ಪಣೆಗಳಿಂದ ಪ್ರಭುಶಕ್ತಿಗೆ ನಮ್ಮನ್ನು ನಾವು ತೆರೆದಷ್ಟು ಕಾಮ ಕೈಬಿಟ್ಟು ಓಡಿಹೋಗುತ್ತದೆ. ಅದನ್ನು ಓಡಿಸುವುದು ಬೆಣ್ಣೆಯ ಕೂದಲನ್ನು ತೆಗೆದಷ್ಟು ಸುಲಭ. ಗುದ್ದಾಟಕ್ಕೆ ನಿಂತರೆ ಅದೇ ಪರ್ವತವಾಗುತ್ತದೆ. ಯಾವುದಕ್ಕೂ ಪ್ರಭು ಶಕ್ತಿಯ ಸಹಾಯ ಬೇಕೇಬೇಕು. ಮುಂದೆ ಸಾಧನೆ ಹಿಗ್ಗಿದಂತೆ ಮನಸ್ಸು–ಪ್ರಾಣ–ದೇಹಗಳು ದೈವೀಶಕ್ತಿಯಿಂದ ಪಲ್ಲಟವಾಗಿ ಹೋಗುತ್ತದೆ. ಇದನ್ನರಿಯದ ಅಜ್ಞರು ಕಾಮವೆಂದರೆ ಭಯಂಕರವೆಂದೂ ಸ್ತ್ರೀಯೆಂದರೆ ಸಂಭೋಗದ ಪರಾಕಾಷ್ಠೆಯೆಂದೂ ಅವಳ ಅಂಗಾಂಗ ಸೌಂದರ್ಯವೆಂದರೆ ಜಗತ್ತಿನಲ್ಲೇ ಅತಿ ಶ್ರೇಷ್ಠವೆಂದೂ ನಂಬಿ ಮೂಢರಾಗಿರುತ್ತಾರೆ. ಈ ನಂಬಿಕೆಯಿಂದ ಯೋಗ ಆರಂಭಿಸಿದವರು ವಿಫಲರಾಗಲೇಬೇಕು. ಇಂಥವರಿಗೆ ನಾರಿ ಮಾರಿಯಾಗುತ್ತಾಳೆ. ನಾರಿ ಅಪಕಾರಿಯಾಗುತ್ತಾಳೆ. ಅಷ್ಟೇ ಏಕೆ ನಾರಿ ಯಮ-ನೂರ ದಾರಿಯಾಗುತ್ತಾಳೆ! ಕಾಮವನ್ನೂ ದೈವೀಶಕ್ತಿಗೆ ತೆರೆದು, ನಮ್ಮ ಒಪ್ಪಿಗೆಯನ್ನು ಅದಕ್ಕೆ ನೀಡದೆ, ಶಾಂತವಾಗಿ ಪರಿತ್ಯಜಿಸಿದರೆ ಕಾಮವಿಜಯ ಕೈಯ ಮೇಲೆಯೆ ದೊರೆಯುತ್ತದೆ. ಈ ತಂತ್ರ ಪುರುಷರಿಗೆ ಮಾತ್ರವೆಂದು ತಿಳಿಯಬೇಡ. ಬ್ರಹ್ಮಚಾರಿಣಿಯಾದ ಸ್ತ್ರೀಯರೂ ಈ ಶಾಸ್ತ್ರಿಯನ್ನು ಬಳಸಬೇಕು. ತಮ್ಮ ಸೌಂದರ್ಯವನ್ನು ಶಂಕರನಿಗೆ ಸಮರ್ಪಿಸಬೇಕು. 'ಹರನೆ ನೀನೆ ನನಗೆ ಗಂಡನಾಗಬೇಕೆಂದು ಅನಂತಕಾಲ ತಪಿಸಿದ್ದೆ ನೋಡಾ' ಎಂದು ಅಕ್ಕಮ್ಮನವರು ಹೇಳಿಲ್ಲವೇನಪ್ಪಾ?'

ಗುರುಗಳ ಮಾತು ಸಮಾಪ್ತಿಯಾಯಿತು. ಇಂದು ಅಪೂರ್ವ ದರ್ಶನವೊಂದನ್ನೇ ಕಂಡುಕೊಂಡನೆಂದು ಆ ಸತ್ ಶಿಷ್ಯ ಸಾನಂದಿತನಾದ. ಅಲ್ಲದೆ ಗುರುಗಳ ಮಾರ್ಗದರ್ಶನದೊಂದಿಗೆ ಅವರಿಂದ ಅನುಗ್ರಹವೂ ತಾನೇತಾನಾಗಿ ಇಳಿದು ಬಂದಿತ್ತು. ನಾನಿನ್ನು ಕಾಮವಿಜಯ ಗೈದು ಯೋಗ ಸಮರ್ಪಣೆಗೆ ಸಮರ್ಥನಾಗಬಲ್ಲೆನೆಂದು ಆನಂದಿತನಾದನು. ಪೂಜ್ಯರಿಂದ ಅಪ್ಪಣೆಯನ್ನು ಕೋರಿ ತನ್ನ ದಿಗ್ವಿಜಯಕ್ಕೆ ಮುಂದಾದನು.

# ಗಡಗೀ ದಾನದ ಫಲ

ವಿಜಯ ಮಹಾಂತ ಶಿವಯೋಗಿಗಳು ಬಡವರ ದೇವರಾಗಿದ್ದರೆಂದು ನೂರು ಬಾರಿ ಹೇಳುವದರಲ್ಲೇನಿದೆ? ಒಂದೇ ಒಂದು ಘಟನೆ ಅವರ ಕರುಣಾಳು ಶಿಖರವನ್ನು ಕಣ್ಣಮುಂದೆ ತೋರಿಸಲಾರದೆ?

ಬಡವರು ದಕ್ಷಿಣೆ ಕೊಟ್ಟರೆ, ಶಿವಯೋಗಿಗಳು ಅವರ ಮನೆಯ ಕಷ್ಟ-ದುಃಖಗಳನ್ನು ಕೇಳಿ, ಆ ಹಣಕ್ಕೆ ತಮ್ಮ ಜೋಳಿಗೆಯ ಹಣವನ್ನೂ ಕೂಡಿಸಿ ಹೊರಳಿ ಅವರಿಗೇ ಕೊಡುತ್ತಿದ್ದರು. ಬಡ ಹೆಣ್ಣುಮಕ್ಕಳಿಗೆ ಸೀರೆ, ಬಡ ವಿದ್ಯಾರ್ಥಿಗಳಿಗೆ ಬಟ್ಟೆ-ಪುಸ್ತಕ, ನಿರ್ಗತಿಕರಿಗೆ ಧನ-ಧಾನ್ಯ ನೀಡುವಲ್ಲಿ ಅವರು ಬಲ್ಲಿದರು. ಬಸುರಿ-ಬಾಣಂತಿಯರು ಹೊಟ್ಟೆಯ ಸಂಕಟಕ್ಕೆ ಮಠದ ರಿಪೇರಿ ಕಾರ್ಯದಲ್ಲಿ ಆಳಾಗಿ ಬಂದರೆ, ಅವರಿಗೆ ಎರಡುಪಟ್ಟು ಕೂಲಿ ಕೊಟ್ಟು ಉಡಿಯಲ್ಲಿ ರಾಗಿ ಹಾಕಿ ಕಳಿಸುತ್ತಿದ್ದರು. ಕೆಲಸಕ್ಕೆ ಹಚ್ಚುತ್ತಿರಲಿಲ್ಲ. ಅಷ್ಟೇ ಅಲ್ಲ, ತಮ್ಮ ಸೇವಕರನ್ನು ಯಾವದಾದರೂ ಹಳ್ಳಿಗೆ ಮಠದ ಕಾರ್ಯಾರ್ಥವಾಗಿ ಕಳಿಸಿದರೆ ಅವರ ಕೈಯಲ್ಲಿ ನಾಲ್ಕು ಬಗಸೆ ಅಕ್ಕಿ, ಒಂದು ಬಗಸೆ ಬೇಳೆ, ಎರಡು ಉಳ್ಳಾಗಡ್ಡೆ, ಹುಣಸೆಹಣ್ಣು, ಖಾರ, ಬೆಲ್ಲ ಕೊಟ್ಟುಕಳಿಸುತ್ತಿದ್ದರು. 'ಬಡವರ ಮನೆಯಲ್ಲಿ ಉಂಡು ಅವರ ಜೀವನಕ್ಕೆ ತ್ರಾಸು ಕೊಡಬೇಡಿರಿ. ಅವರು ತಮ್ಮ ಹೊಟ್ಟೆ ಕಟ್ಟಿ ನಿಮಗೆ ನೀಡಬೇಕಾಗುತ್ತದೆ. ಈ ಅಕ್ಕಿ-ಬೇಳೆಯಿಂದ ನೀವೇ ಅನ್ನ-ಸಾರು ಮಾಡಿಕೊಂಡು ಊಟ ಮಾಡಿರಿ' ಎಂದು ಹೇಳಿಕಳಿಸುತ್ತಿದ್ದರು. ಹಳ್ಳಿಯಲ್ಲಿ ನಗಕ್ಕೆ ನಾಲ್ಕಾಣೆ ಚಿತ್ತರಗಿ ಮಠಕ್ಕೆ ವರ್ಷಂಪ್ರತಿ ಪಟ್ಟಿಮಾಡುತ್ತಿದ್ದರು. ಯಾರಾದರೂ ಹೆಚ್ಚು ಕೊಟ್ಟರೆ ಹೊರಳಿ ಕೊಡುತ್ತಿದ್ದರು. ತೀರ ಬಡವರಿದ್ದರೆ ಅವರಿಂದ ಏನನ್ನೂ ಆಕರಿಸುತ್ತಿದ್ದಿಲ್ಲ. ಯಾರಾದರೂ ಗಂಡ-ಹೆಂಡಿರ ಜಗಳವಾದರೆ ಇವರ ಪ್ರಾಣ ಹೋದಂತಾಗುತ್ತಿತ್ತು. ದಂಪತಿಗಳನ್ನು ಕರೆದು, ಆಣೆ ಪ್ರಮಾಣ ಮಾಡಿಸಿ ಕೂಡಿಸುತ್ತಿದ್ದರು. ಅವರು ಸರಿಯಾಗಿ ಬಾಳಿ ಸಾಗಿಸಿದ ಮೇಲೆ, ಮೇಲಿಂದ ಮೇಲೆ ಕರೆದು— 'ಏನವ್ವಾ, ಈಗರೆ ಗಂಡನ ಜೋಡಿ ಚೊಲೋ ಅದೀಯಾ?' 'ಏನಪಾ ನಿನ್ನ ಹೇಣ್ತಿ ಏನಂತಾಳ? ನೀನು ಮೊದಲಿನ ಗುಣಾ ಬಿಟ್ಟಿಯೊ ಇಲ್ಲೊ?' ಎಂದು ಎಲ್ಲ ಹಕೀಕತ್ತು

ಕೇಳುತ್ತಿದ್ದರು. ಶಿವಯೋಗಿಗಳು ಸನ್ಯಾಸಿಗಳಾದರೂ ವಿಶ್ವ ಕುಟುಂಬಿಗಳಾಗಿದ್ದರು. ಕರುಣೆ ಅವರ ಆತ್ಮದ ಮೂಲ ಮಂತ್ರವಾಗಿತ್ತು.

ಹೀಗಿರಲು ಶ್ರೀಗಳು ಇಸಲಾಂಪುರಕ್ಕೆ ಜೋಳದ ಭಿಕ್ಷೆಗಾಗಿ ಹೋಗಿದ್ದಾರೆ. ಆ ಗ್ರಾಮದ ಜನರೆಲ್ಲ ದಾನವಂತರು. ಎಲ್ಲರೂ ತಮ ತಮಗೆ ಸಾಧ್ಯವಾದಷ್ಟು ಜೋಳವನ್ನು ಶಿವಯೋಗಿಗಳಿಗೆ ನೀಡಿದರು. ಯಾರೂ ತಪ್ಪಲಿಲ್ಲ. ಇಲ್ಲೆನ್ನಲಿಲ್ಲ. ಆದರೆ ಆ ಊರಿಗೆ ರಾಜನಗೌಡ ತುಂಬ ಬಡವ. ಹೆಸರು ರಾಜನಗೌಡನಾದರೂ ಭಿಕ್ಷಾಧೀಶನಾಗಿದ್ದ! ಅವನ ಹೆಂಡರು-ಮಕ್ಕಳು ಕೂಳಿಲ್ಲದೆ ಕಂಗಾಲಾಗಿದ್ದರು. ಅವನ ಮನೆಯಲ್ಲಿ ಜೋಳದ ಗಂಜಿಯೆಂದರೆ ಅಮೃತಕ್ಕಿಂತಲೂ ಅಸಾಧ್ಯವಾಗಿತ್ತು. ಆದರೆ ಶಿವಯೋಗಿಯ ಮುಂದೆ ಇಲ್ಲೆನ್ನುವದೆ? ಅದು ಮಹಾ ಅಪರಾಧವಲ್ಲವೆ? ಏನೊಂದೂ ತಿಳಿಯದ ಆತ ಕೊನೆಗೆ ಮನೆಯಲ್ಲಿ ಬಳಸದೇ ಇಟ್ಟ ಗಡಿಗೆಯೊಂದನ್ನು ಒಯ್ದು ಶಿವಯೋಗಿಗಳ ಜೋಳಿಗೆಗೆ ಹಾಕಿಬಿಟ್ಟ! . ಸ್ವಾಮಿಗಳಿಗೆ ಭಾರೀ ಆಶ್ಚರ್ಯವಾಯಿತು.

'ಇದೇನೋ? ನಮ್ಮ ಜೋಳಿಗ್ಗೆ ಗಡಿಗಿ ಹಾಕಿದೆಯಲ್ಲಾ?' ಎಂದರು.

ಆತ ಹೇಳಿದ—

'ಬುದ್ಧೀ, ನೀವು ಕೊಟ್ಟದ್ದನ್ನು ನಿಮಗೆ ನೀಡಿದ್ದೇನೆ. ಆ ಖಾಲಿ ಗಡಿಗೆಯ ಜೋಳ ಎಂದು ತಿಳಿದು ಸ್ವೀಕರಿಸಿರಿ. ಇದೊಂದು ಸಲ ದೊಡ್ಡ ಮನಸ್ಸು ಮಾಡಿರಿ'.

'ಯಾಕೆ ನಿನ್ನ ಹೊಲ ಬೆಳೆಯಲಿಲ್ಲವೆ?'

'ತಂದೇ. ನನ್ನ ಹೊಲ ಅಂದರೆ ಅದೊಂದು ಕಲ್ಲು ಮೊರಡಿ. ಗುಬ್ಬಿಗೆ ತಿನ್ನಲು ಕೂಡ ಕಾಳು ಬೆಳೆದಿಲ್ಲ ಶಿವಾ. ಇದೊಂದು ಸಲ ಈ ಬಡವನ್ನ ಕ್ಷಮಾ ಮಾಡಿರಿ ತಂದೆ.'

ಶಿವಯೋಗಿಗಳ ಅಂತಃಕರಣ ಉಕ್ಕಿ ಬಂತು. ಕಣ್ಣೀರುಗಳು ಕಪೋಲಕ್ಕೆ ಅಭಿಷೇಕ ಮಾಡಿದವು. ಆತ್ಮ ಮರುಗಿ ಮೂಕವಾಯಿತು. ಹಿಂದೆ ಮುಂದೆ ನೋಡದ, ಆ ಇಡೀ ಊರಿನಲ್ಲಿ ತಮಗೆ ಬಂದ ಭಿಕ್ಷೆಯ ಅನೇಕ ಚೀಲ ಜೋಳ

ವನ್ನೆಲ್ಲಾ ಅವನಿಗೇ ಕೊಟ್ಟುಬಿಟ್ಟರು. ಒಂದು ಕಾಳು ಕೂಡ ತಾವು ಇಟ್ಟು ಕೊಳ್ಳಲಿಲ್ಲ?

ರಾಜನಗೌಡ ಶಿವಯೋಗಿಗಳ ಕರುಣೆಯಿಂದ ಕೆಲ ಕಾಲದಲ್ಲಿ ನಿಜವಾಗಿಯೂ ರಾಜನಗೌಡನೆ ಆದ. ಭಾರೀ ಉತ್ಪತ್ತಿಯ ಜಮೀನ್ದಾರನಾದ. ಸುಖವಂತನಾದ. ಶಿವಯೋಗಿಯ ಕರುಣೆಯೆಂದರೆ ಸಾಮಾನ್ಯವೆ? 'ದಯವೆ ಧರ್ಮದ ಮೂಲವಯ್ಯಾ' ಎಂಬ ಅಪ್ಪಗಳ ನುಡಿಯನ್ನು ಕುರಿತು ಅವರು ಎಂದಿಗೂ ಭಾಷಣ ಮಾಡಲಿಲ್ಲ. ಆದರೆ ಅದರಂತೆ ಚಾಚೂ ತಪ್ಪದೆ ನಡೆದು ತೋರಿಸಿದರು.

# ಕೋಲಿಯಿಂದಲೂ ಪ್ರತಿಫಲ

ಶಿವಯೋಗಿಗಳ ಭಿಕ್ಷೆ ಮುಂದುವರೆಯಿತು. ಚಿತ್ತರಗಿಗೆ ಬಂದರು. ಈ ವರ್ಷ ಚಿತ್ತರಗಿ ಮಠದ ಜೀರ್ಣೋದ್ಧಾರ ಪೂರ್ಣವಾಗಬೇಕಾಗಿದೆ. ದುಡ್ಡಿನ ಕೊರತೆಯಿಂದ ಅರ್ಧಕ್ಕೇ ನಿಂತಿದೆ. ಆದ್ದರಿಂದ ಅಲ್ಲಿ ಶಿವಯೋಗಿಗಳು, ನಾಲ್ಕು ಜನ ಪುರಪ್ರಮುಖರನ್ನು ಬರಮಾಡಿಕೊಂಡು ಧನದ ಭಿಕ್ಷೆಯನ್ನು ಕೇಳಿದರು.

ಇದ್ದವರು ಇಲ್ಲೆನ್ನದಲೆ ನೀಡಿದರು. ಇಲ್ಲದವರು ಸುಮ್ಮನಾದರು. ಅಷ್ಟರ ಮಟ್ಟಿಗೆ ಇದ್ದವರು ಅಷ್ಟರ ಮಟ್ಟಿಗೆ ನೀಡಿದರು. ಯಾರಿಗೂ ಶಿವಯೋಗಿ ಒತ್ತಾಯ ಮಾಡಲಿಲ್ಲ. ಮುಂದೆ ಆ ಊರಿನ ಕನಕಪ್ಪನ ಸರದಿ ಬಂತು. ಊರಿನ ಪ್ರಮುಖರು ಆತನಿಗೆ ಒಂದು ನೂರು ರೂಪಾಯಿ ದಾನ ಕೊಡಲು ಒತ್ತಾಯ ಮಾಡಿದರು. ಆ ಮಾತಿಗೆ ಆತ ದಿಗ್ಭ್ರಮಿತನಾಗಿ, ಶಿವಯೋಗಿಗಳ ಪಾದಕ್ಕೆ ಬಿದ್ದು--

'ಬುದ್ಧೀ ನಾನು ಬಡವ. ಎರಡೆತ್ತಿನ ಒಕ್ಕಲು ನನ್ನದು. ನನ್ನ ಗೋಣು ಕುಡಗೋಲು ನಿಮ್ಮ ಕೈಯಲ್ಲಿ ಕೊಟ್ಟಿದ್ದೇನೆ. ಏನು ಮಾಡು ತ್ತಿರೋ ನೀವೆ ಮಾಡಿರಿ' ಎಂದ.

ಸ್ವಾಮಿಗಳು ಕೇಳಿದರು—

'ನಿನ್ನ ಜೋಳ ಕೊಯ್ದಿರುವಿಯಾ?'

'ಇಲ್ಲ ಬುದ್ಧಿ. ನಾಳೆ ಕೊಯ್ಯಲು ಹಾಕುತ್ತೇನೆ'

'ಹಾಗಾದರೆ ನೋಡು. ನಮ್ಮ ಕರಾರು ಈ ರೀತಿ ಇದೆ. ಮೇಲೆ ಬೆಳೆದ ಜೋಳ-ದಂಟು ಎಲ್ಲಾ ನಿನ್ನದು. ಕೊಯ್ದು ಕೆಳಗೆ ಉಳಿದ ಕೋಲಿಗಳೆಲ್ಲಾ ನಮ್ಮವು. ಒಪ್ಪಿಗೆಯೆ?' ಎಂದರು.

ಈ ಮಾತು ಕೇಳಿ ಪುರಪ್ರಮುಖರು ಇದೇನು ಹುಚ್ಚು ಎಂದು ಎದೆ ಬಾಯಿಬಿಟ್ಟರು. ಸ್ವತಃ ಕನಕಪ್ಪನೆ ಕಕ್ಕಾವಿಕ್ಕಿಯಾದ. ನಾನು ಉಳಿದುಕೊಂಡೆ ಎಂದು ಮನದಲ್ಲಿ ಮಂಡಿಗೆ ಮಾಡಿಕೊಂಡು, ಕರಾರಿಗೆ ತನ್ನ ಒಪ್ಪಿಗೆಯನ್ನು ನೀಡಿ, ಮೆಲ್ಲನೆ ಅಲ್ಲಿಂದ ಕಾಲು ಕಿತ್ತ. ಬದುಕಿದೆನೆಂದು ಉಸಿರು ಬಿಟ್ಟ.

ಆದರೆ ಪರಮಾಶ್ಚರ್ಯದ ಘಟನೆ ನಡೆಯಿತು. ಜೋಳ ಕೊಯ್ದು

ಮೇಲೆ ಕೆಳಗೆ ಉಳಿದ ಕೋಲಿಗಳು ಜಿಗಿತು ತೆನೆಯಾದವು. ಎಲ್ಲಿ ನೋಡಿದಲ್ಲಿ ಕೋಲಿಯ ಬೆಳೆ ಹುಲುಸಾಗಿ ಪ್ರಸನ್ನವಾಗಿ ಕಾಣತೊಡಗಿತು. ಕಾಳು ಪುಷ್ಟ ವಾದ ಮೇಲೆ ಆತ ಆ ತೆನೆಗಳನ್ನು ಕೊಯ್ದು ರಾಶಿ ಮಾಡಿದರೆ, ಒಂದು ನೂರು ರೂಪಾಯಿಯ ಕಾಳು ಬಂದವು! ಮರುಮಾತು ಆಡದೆ, ಆ ಶಿವ ಯೋಗಿಯ ಅಗಾಧ ಚಮತ್ಕಾರಕ್ಕೆ ಚಕಿತನಾಗಿ, ಆ ಕಾಳುಗಳನ್ನು ತಂದು ಮಠಕ್ಕೆ ಒಪ್ಪಿಸಿದ. ಶ್ರೀಗಳಿಗೆ ಸಾಷ್ಟಾಂಗ ಹಾಕಿ ನಮೋ ನಮೋ ಎಂದ.

ಅಂತೂ ಹೊಲದ ಕೋಲಿ ನೂರು ರೂಪಾಯಿ ಕೊಟ್ಟಿತು ಸ್ವಾಮಿಗಳ ಕರಾರು ಗೆದ್ದಿತು. ಶಿವಯೋಗಿ ಕರುಣಿಸಿದರೆ ರಸ ಕಡವರವಾದೀತು! ತಿಪ್ಪೆ ಉಪ್ಪರಿಗೆಯಾದೀತು!! ಜೋಳಿಗೆ ಹೋಳಿಗೆಯಾದೀತು!!!

# ನಾಗರಾಳ ದೊಡ್ಡಪ್ಪನವರಿಗೆ ಆಶೀರ್ವಾದ

ಹುನಗುಂದದ ನಾಗರಾಳ ದೊಡ್ಡಪ್ಪನವರೆಂದರೆ . ಆಗರ್ಭ ಶ್ರೀಮಂತರು. ದೈವಭಕ್ತಿ ಪರಾಯಣತೆ, ಜಂಗಮ ಪ್ರೇಮ, ಗುರುಸೇವೆ, ಸದ್ಧರ್ಮದಾನ, ಸದಾಚಾರಗಳು ಅವರಿಗೆ ರಕ್ತಗತವಾಗಿದ್ದವು. ಚಿತ್ತರಗಿ ಪೀಠ ಅವರ ಮನೆ ದೇವರೂ ಆಗಿತ್ತು. ವಿಜಯ ಮಹಾಂತ ಶಿವಯೋಗಿಗಳು ಅವರ ಹೃದಯ ಸಿಂಹಾಸನದಲ್ಲಿ ಸದಾವಕಾಲ ರಾರಾಜಿಸುತ್ತಿದ್ದರು.

ಇವರ ಜೀವನದ ಪುಟ್ಟ ಪ್ರಸಂಗವೊಂದನ್ನು ಮರೆಯುವಂತಿಲ್ಲ. ಶಿವಯೋಗಿಗಳು ಒಂದು ಸಲ ಹುನಗುಂದಕ್ಕೆ ದಯಮಾಡಿಸಿದ್ದಾರೆ. ದೊಡ್ಡಪ್ಪನವರು ಶ್ರೀಗಳ ಪಾದದರ್ಶನಾರ್ಥಿಗಳಾಗಿ ಮಠಕ್ಕೆ ಬಂದಿದ್ದಾರೆ. ಅವರಿಗೆ ತಾವು ಮಠಕ್ಕೆ ಬಂದದ್ದೊಂದೇ ಗೊತ್ತು. ಸೂರ್ಯ ಇಳಿಹೊತ್ತು ಕಂಡು ಮುಳುಗಿಹೋದರೂ ಮನೆಯ ಕಡೆ ಧ್ಯಾನ ಇಲ್ಲ. ಅನೇಕ ಘಂಟೆಗಳ ಕಾಲ ಶಿವಯೋಗಿಗಳ ಅಮೃತ ವಚನವನ್ನು ಸದ್ಬೋಧೆಯನ್ನೂ ಕೇಳಿದ್ದೇ ಕೇಳಿದ್ದು. ಶಿವಯೋಗಿಗಳಿಗೂ ಇಂಥ ಭಕ್ತರು ಸಿಕ್ಕರೆ ಕತ್ತಲೆಯಾಗಲು ಶಿವಪೂಜೆಯ ಸಮಯವಾಯಿತೆಂದು ಸೇವಕನು ಹೇಳಿದಾಗಲೆ ಉಭಯತರ ಲಿಂಗಲೀಲಾ ವಿಲಾಸ ಮುಗಿದದ್ದು. ಆಗ ದೊಡ್ಡಪ್ಪನವರನ್ನು ಶಿವಯೋಗಿಗಳು ಹಾಗೇ ಕಳಿಸಿ ಕೊಟ್ಟಾರೆ? ತಾವು ಆಸರೆಯಾಗಿ ಹಿಡಿದುಕೊಳ್ಳುತ್ತಿದ್ದ ಬೆತ್ತದ ಬಡಿಗೆಯನ್ನೇ ದೊಡ್ಡಪ್ಪನವರಿಗೆ ಆಸರೆಗೆ ಕೊಟ್ಟು, ತಮ್ಮ ಸೇವಕನೊಬ್ಬನನ್ನು ಜೊತೆ ಮಾಡಿ ಕಳಿಸಿಕೊಟ್ಟರು. ದೊಡ್ಡಪ್ಪನವರಿಗೆ ಇದು ಬಿಡಿಸಲಾರದ ಸಮಸ್ಯೆ ಆಯಿತು. ಶಿವಯೋಗಿಗಳು ಉಪಯೋಗಿಸುವ ಊರುಗೋಲನ್ನು ತಾವು ಬಳಸಬೇಕೆ? ಸನ್ಯಾಸಿಗಳು ಹಿಡಿಯುವ ಬಡಿಗೆಯನ್ನು ಸಂಸಾರಿಗರು ಹಿಡಿಯಬೇಕೆ?— ಎಂಬ ವಿಚಾರ ಹೊಳೆದು ಶ್ರೀಗಳಿಗೆ ಹೇಳಿದರು—

'ಬುದ್ಧೀ, ಇದೇನು ಮಾಡುತ್ತೀರಿ ನೀವು? ತಾವು ಬಳಸುವ ಬೆತ್ತ ನಾನು ಊರಲಾದೀತೆ? ನನ್ನ ಮನಸ್ಸು ಪರೀಕ್ಷಿಸಲು . ಬೇಕಂತಲೆ ಇದನ್ನು ಕೊಟ್ಟಿದ್ದೀರಿ. ಇದು ಬೇಡ ಬುದ್ಧಿ ಇದು ಬೇಡ. ನಾನು ಹಾಗೆಯೇ ಹೋಗುತ್ತೇನೆ.'

ಆಗ ಸ್ವಾಮಿಗಳು—

'ಇಲ್ಲ ದೊಡ್ಡಪ್ಪಾ. ಬೇಕೆಂತಲೇ ಕೊಟ್ಟಿಲ್ಲ, ನೀನೂ ನನ್ನಂತೆ ಮುದುಕ ಮುದುಕರಿಗೆ ಈ ಕೋಲೆ ಕಾಲಲ್ಲವೆ? ಇಲ್ಲಿಯವರೆಗೆ ನಾನೂ ದೇಹದಲ್ಲಿ ಶಕ್ತಿ ಇದ್ದುದರಿಂದ ನೂರಾರು ಸೀಮೆ ಸುತ್ತು ಹಾಕಿ ಬಂದೆ. ಕೋಲಿನ ಆಶ್ರಯ ಇರಲಿಲ್ಲ. ಈಗ ಶಿವ ನನಗೆ ಕೋಲು ಕೊಟ್ಟಿದ್ದಾನೆ. ಮುಂದೆ ಮತ್ತೇನು ಕೊಡುತ್ತಾನೊ ಮುಂತ್ಮಾಳ. ಆತ ಕೊಟ್ಟಿದ್ದನ್ನು ಪಾಲಿಸಬೇಕಲ್ಲವೆ? ಈ ಕೋಲಿನಲ್ಲಿ ನಿನಗೂ ಪಾಲು ಇದೆ. ಒಯ್ಯಿ....ಒಯ್ಯಿ....' ಎಂದರು.

ದೊಡ್ಡಪ್ಪನವರು ಹೇಳಿದರು—

'ಬೇಡ ಸ್ವಾಮಿ; ಇದೆಂಥಾ ಮಾತು ಆಡುತ್ತೀರಿ? ನೀವು ಮುದುಕರಾದರೇನು, ನೂರು ಜನರು ಹರೆಯದವರು ಮಾಡದಷ್ಟು ಕೆಲಸಾ ಮಾಡುತ್ತೀರಿ. ನಿಮ್ಮನ್ನು ನೋಡಿ ನಾವು ಬುದ್ಧೀ ಕಲೀಬೇಕು. ಶಿವ ಮುಂದೆ ಮತ್ತೇನು ಕೊಡುತ್ತಾನೋ ಎಂದು ಈಗಲೇ ಏಕೆ ಆಡುತ್ತಿರಿ?'

'ಹೌದಪಾ ದೊಡ್ಡಪ್ಪಾ. ಇನ್ನೆಷ್ಟು ವರ್ಷ ನಾವು ಬಾಳಬೇಕೆಂದು ಪಂಥ ಹಿಡಿಯೋದು? ಆತು, ಇನ್ನೇನು ಒಂದೆರಡು ವರ್ಷ ಆದರೆ ನಮಗೂ ತಿಕೀಟು ಬರತೈತಿ. ಯಾಕೆಂದರೆ....'

'ಬುದ್ಧೀ.... ಈ ಮಾತು ನನ್ನ ಕಿವಿಯ ಮೇಲೆ ದಯುವಿಟ್ಟು ಹಾಕಬೇಡಿರಿ; ನನ್ನ ಪ್ರಾಣ ಗೀಚಿದಂಗ ಆಗತೈತಿ.'

'ಅಲ್ಲಪಾ, ಮುಂದ ಕಾಲ ಬಹಳ ಕೆಟ್ಟ ಬರತಾವಪಾ ದೊಡ್ಡಪ್ಪಾ. ಕೇಳಬಾರದ್ದೆಲ್ಲಾ ಕೇಳಬೇಕಾಗತೈತಿ. ನೋಡಬಾರದ್ದೆಲ್ಲಾ ನೋಡಬೇಕಾಗತೈತಿ. ಮಠಾ ಏನೂ ಮನೀ ಏನೂ ಎಲ್ಲಾ ಒಂದ ಆಗತಾವಪಾ ದೊಡ್ಡಪ್ಪಾ, ಅದಕ್ಕ ಈಗ ಹೋಗೂದು ವಾಸಿ ಅಲ್ಲs?' ಎಂದರು.

ದೊಡ್ಡಪ್ಪನವರು ಗಂಭೀರ ಮನಸ್ಕರಾಗಿ ಹೋದರು. ಶಿವಯೋಗಿಗಳು ತಮ್ಮ ಕೈ ಬೆತ್ತವನ್ನೇ ಅವರಿಗೆ ಒಯ್ಯಲು ಎರಡನೇ ಸಲ ಒತ್ತಾಯಿಸಿದರು. ಆಗ ದೊಡ್ಡಪ್ಪನವರು--

'ಬುದ್ಧೀ ಈ ಬೆತ್ತ ತಮ್ಮದು, ನಾನು ಹಿಡಿಯೂದು ಯೋಗ್ಯ ಕಾಣೂದಿಲ್ಲ' ಎಂದರು. ಅದಕ್ಕೆ ಶಿವಯೋಗಿಗಳು—

'ಛೀ ಮಾರಾಯಾ ಒಯ್ಯಿ ಒಯ್ಯಿ. ಅದಕ್ಕೇನಾಗುತ್ತದೆ? ನಡೆಯಲಿ

ಕೋಲು ಆಶ್ರಯ ಆಗುತ್ತದೆ. ಮೈಮೇಲೆ ಏರಿಬರುವ ದನಗಳನ್ನು ಹೊಡೆಯಲು ಅನುಕೂಲವಾಗುತ್ತದೆ. ಅಂಧಕಾರದಲ್ಲಿ ತಗ್ಗು ದಿನ್ನೆಗಳಲ್ಲಿ ಮುಗ್ಗರಿಸಿ ಬೀಳುವ ಸಂಭವ ಇರುತ್ತದೆ. ಆದ್ದರಿಂದ ಹೆಜ್ಜೆ ಹೆಜ್ಜೆಗೂ ಕೋಲು ಬೇಕಪಾ. ಕೋಲು ಬೇಕು. ಕೋಲ ಬಿಡಬ್ಯಾಡಾ.'

ಎಂದು ಒತ್ತಾಯದಿಂದಲೆ ಕೊಟ್ಟು ಕಳಿಸಿದರು. ದೊಡ್ಡಪ್ಪನವರು ಒತ್ತಾಯಕ್ಕೆ ಮಣಿದು ಕೋಲನ್ನೇನೊ ಹಿಡಿದರು. ಆದರೆ ಅದನ್ನು ನೆಲದ ಮೇಲೆ ಊರಲು ಅವರ ಅಂತಃಕರಣ ಹೇಗೆ ಒಪ್ಪೀತು? ನೇರವಾಗಿ ತಮ್ಮ ಹೆಗಲ ಮೇಲೆ ಹೊತ್ತುಕೊಂಡೇ ಹೋದರು! ಮನೆ ಮುಟ್ಟಿದ ಮೇಲೆ ಸೇವಕನ ಕಡೆಯಿಂದ ಅದನ್ನು ಹೊರಳಿ ಕಳಿಸಿದರು.

ಮರುದಿನ ಮಠಕ್ಕೆ ಪುರಾಣ ಪ್ರವಚನಕ್ಕೆಂದು ಹೋಗುವಾಗ ದೊಡ್ಡಪ್ಪನವರು ತಮ್ಮ ಕೋಲನ್ನು ಮರೆಯದೆ ಒಯ್ದರು. ಯಾಕೆಂದರೆ ತಾವು ಕೋಲು ಒಯ್ಯದಿದ್ದರೆ ಶಿವಯೋಗಿಗಳು ತಮ್ಮ ಕೋಲು ಮತ್ತೆ ಕೊಡುವರೆಂಬ ಭಯ ಅವರಿಗೆ! ಆದರೆ ಪುರಾಣ ಮುಗಿದ ಮೇಲೆ ಶಿವಯೋಗಿಗಳು ಮತ್ತೆ ತಮ್ಮ ಕೋಲು ಕೊಟ್ಟೇಬಿಟ್ಟರು!! 'ಬುದ್ಧೀ ಇವತ್ತು ನನ್ನ ಬೆತ್ತ ತಂದಿದ್ದೇನೆ. ಮತ್ತೇಕೆ ಕೊಡುತ್ತೀರಿ?' ಎಂದು ಹೇಳಿದರೂ ಶ್ರೀಗಳು ತಮ್ಮ ಊರುಕೋಲು ಕೊಟ್ಟೇ ಕಳಿಸಿದರು.

ಇದರಲ್ಲೇನೋ ಶಿವಯೋಗಿಗಳು ವಿಶೇಷ ತತ್ವ ಇರಿಸಿದ್ದಾರೆಂದು ಆ ದಿನ ದೊಡ್ಡಪ್ಪನವರು ಅರಿತರು. ಶಿವಯೋಗಿಗಳ ಮಾತಿನಲ್ಲಿ ಯಾವಾಗಲೂ ಎರಡರ್ಥ ಇರುವವೆಂದು ಅವರಿಗೆ ಗೊತ್ತಾಗಿತ್ತು. ಹಿಂದಿನ ದಿನ ರಾತ್ರಿ ಶಿವಯೋಗಿಗಳು ಹೇಳಿದ ಒಂದೊಂದೆ ಮಾತಿಗೆ ಅರ್ಥ ಹಚ್ಚ ತೊಡಗಿದರು. 'ನಡೆಯಲು ಕೋಲು ಆಶ್ರಯವಾಗುತ್ತದೆ.' ಎಂದು ಶಿವಯೋಗಿಗಳು ಹೇಳಿದರು. ಅಂದರೆ ಜೀವನದಲ್ಲಿ 'ನಮ್ಮ ನಡತೆಗೆ ಭಕ್ತಿಯೆಂಬ ಕೋಲಿನ ಆಶ್ರಯ ಬೇಕಾಗುತ್ತದೆ' ಎಂದರ್ಥ. 'ಮೈಮೇಲೆ ಏರಿಬರುವ ದನಗಳನ್ನು ಹೊಡೆಯಲು ಅನುಕೂಲವಾಗುತ್ತದೆ' ಯೆಂದರೆ— 'ನಮ್ಮ ಮೇಲೆ ಏರಿ ಬರುವ ಕಾಮ-ಕ್ರೋಧ-ಲೋಭ-ಮೋಹ-ಮದ-ಮತ್ಸರವೆಂಬ ಆರು ವೈರಿಗಳೆಂಬ ದನಗಳನ್ನು ಓಡಿಸಲು ಅನುಕೂಲವಾಗುತ್ತದೆ' ಯೆಂದು ಅರ್ಥ. ಅಂಧಕಾರದಲ್ಲಿ ತಗ್ಗು ದಿನ್ನೆಗಳಲ್ಲಿ ಮುಗ್ಗರಿಸಿ ಬೀಳುವ ಸಂಭವವಿರುತ್ತದೆ,

ಯೆಂದರೆ— 'ಅಜ್ಞಾನವೆಂಬ ಕತ್ತಲೆಯಲ್ಲಿ ಅವಿವೇಕ-ಮೌಢ್ಯ-ಆಲಸ್ಯ ಮೊದ ಲಾದ ತಗ್ಗುಗಳಲ್ಲಿ ಜೀವಾತ್ಮ ಸಿಕ್ಕುಬೀಳುವ ಸಂಭವವಿರುತ್ತದೆ' ಯೆಂದರ್ಥ. 'ಆದ್ದರಿಂದ ಹೆಜ್ಜೆಹೆಜ್ಜೆಗೂ ಕೋಲು ಬೇಕಪಾ. ಕೋಲು ಬೇಕು' ಎಂದರೆ— 'ಜೀವನದಲ್ಲಿ ಹೆಜ್ಜೆ ಹೆಜ್ಜೆಗೂ ಭಕ್ತಿಯೆಂಬ ಕೋಲಿನ ಆಶ್ರಯಬೇಕು' ಎಂದರ್ಥ.

ಅಂತೂ ದೊಡ್ಡಪ್ಪನವರು ಶಿವಯೋಗಿಗಳ ಮಾತಿನಒಗಟನ್ನು ಅರ್ಥ ಮಾಡಿಕೊಂಡರು. ಪ್ರತಿದಿನವೂ ಅವರು ಕೊಟ್ಟ ಕೋಲಿನ ಆಶ್ರಯ ಬೇಡೆ ನ್ನಲಿಲ್ಲ. ಅದನ್ನು ಹೆಗಲ ಮೇಲೆ ಹೊತ್ತುಕೊಂಡೇ ಮನೆಗೆ ಹೋಗಿ ಮರಳಿ ಕಳಿಸುತ್ತಿದ್ದರು.

ಮುಂದೆ ಆ ಊರುಗೋಲೆ ಅವರ ಮನೆತನಕ್ಕೆ ಆಸರೆ ಕೋಲಾಯಿತು. ವಿಜಯ ಮಹಾಂತೇಶ್ವರರ ಮೇಲಿನ ಅವರ ಅಮಿತ ಭಕ್ತಿಯೆ ಅನುಗ್ರಹ ವಾಯಿತು. ಅಂದಿನಿಂದ ಎಂದೆಂದಿಗೂ ಅವರ ಮನೆತನ ಸುಖಭೋಗ ಶ್ರೀಮಂತಿಕೆಗಳಿಂದ ಸಂತೃಪ್ತವಾಯಿತು. ಕೀರ್ತಿಪಾತ್ರವಾಯಿತು.

# ಸವತೀ ಮತ್ಸರ ಸರಿಯಲ್ಲ

ಸೂಳಿಬಾವಿ ಊರಿನ ನೀಲನಗೌಡನಿಗೆ ಬಹು ದಿನಗಳಿಂದ ಮಕ್ಕಳೆ ಇರಲಿಲ್ಲ. ಹತ್ತು ದಿಕ್ಕಿನ ದೇವರಿಗೆ ಹರಕೆ ಹೊತ್ತು ಹಣ ಕಳೆದುಕೊಂಡದ್ದೂ ಆಯಿತು. ಕೊನೆಗೂ ನಾಲ್ವತ್ತು ವರ್ಷದ ನೀಲನಗೌಡನಿಗೆ ತಾಯಿ ಇನ್ನೊಂದು ಹರೆಯದ ಹುಡುಗಿಯನ್ನು ನೋಡಿ ಮದುವೆ ಮಾಡಲು ತಯಾರಾದಳು. ಸೂಳಿಬಾವಿಯ ಮಠಕ್ಕೆ ದಯಮಾಡಿಸಿದ ಶಿವಯೋಗಿಗಳ ದರ್ಶನಕ್ಕೆಂದು ಬಂದ ಅವಳು ಬೇಡಿಕೊಂಡಳು—

'ಸ್ವಾಮಿಗಳೆ, ನನ್ನ ಮಗ ನೀಲನಗೌಡನಿಗೆ ಮಕ್ಕಳೆ ಆಗಿಲ್ಲ. ಆದ್ದರಿಂದ ನಿಮ್ಮ ಆಶೀರ್ವಾದದಿಂದ ಇನ್ನೊಂದು ಹೆಣ್ಣು ತಂದು ಮದುವಿ ಮಾಡ ಬೇಕಂತ ಮಾಡೇನಿ' ಎಂದಳು.

ಅವಳ ಸ್ವಾರ್ಥಕ್ಕೆ ಶಿವಯೋಗಿಯ ಅಂತರಂಗ ಕೊರಗಿತು. ಪಾಪ ಒಂದು ಹೆಣ್ಣಿಗೆ ಇನ್ನೊಂದು ಹೆಣ್ಣು ಬಂದು ಸವತಿಯಾಗಿ ಬಾಳಲೆಂದು ನಾನು ಆಶಿರ್ವಾದ ಮಾಡಲೆ? ಜೋಡು ಹೆಂಡಿರ ಉಪಭೋಗಕ್ಕೆ ಅನುಗ್ರಹ ನೀಡಲೆ? ಅನಾಚಾರಕ್ಕೆ ಎಣ್ಣೆ ಸಾಸಿವೆ ಹಾಕಲೆ? — ಎಂದು ಎಂದು ಅವರ ಆತ್ಮ ಒರಲಿತು. ಅವಳಿಗೆ ಹೇಳಿದರು—

'ತಾಯಿ, ಈ ವಿಚಾರ ಕೇಳೂದಿದ್ರ ನನ್ನ ಹತ್ತಿರ ಯಾಕೆ ಸುಮ್ಮನೆ ಬಂದೆ. ಅಲ್ಲಿಯೆ ಮದುವೆ ಮಾಡಿಬಿಡಬೇಕಾಗಿತ್ತು. ಸೊಸೆಗೆ ಸವತಿಯನ್ನು ತರಲು ನಿನಗೆ ಆನಂದವೆ? ಒಬ್ಬಳನ್ನು ಕೊಂದು ಇನ್ನೊಬ್ಬಳನ್ನು ಬಾಳಿಸ ಬೇಕೆಂದಿರುವೆಯೊ? ಒಬ್ಬ ಸೊಸೆಯನ್ನು ಪ್ರೀತಿಯಿಂದ ನಡೆಸಿಕೊಳ್ಳಲು ಆಗದ ಈ ದಿನಗಳಲ್ಲಿ ಇನ್ನೊಬ್ಬಳನ್ನು ತಂದು ನಿಬ್ಬರಿಸಬೇಕೆಂದು ನಿನ್ನ ಹಟವೆ? ಇಬ್ಬರೂ ಸೊಸೆಯರು ಒಂದಾಗಿ ನಿನ್ನನ್ನು ಹೊರದಬ್ಬಿದರೆ ಏನು ಮಾಡುವೆ? ಅವರಿಬ್ಬರ ಗಲಾಟೆಗೆ ಮಗ ಮೂಲೆಗೆ ಮೌನವಾಗಿ ಕುಳಿತರೆ ಏನು ಹೇಳುವಿ? ಹಾಗೆಲ್ಲಾ ಮಾಡಬೇಡ ನನ್ನ ಮಾತು ಕೇಳು. ಒಬ್ಬಳು ಹೆಂಡತಿಯಿಂದ ಸಂತೋಷ, ಇಬ್ಬರು ಹೆಂಡಿರಿಂದ ದ್ವೇಷ; ಒಬ್ಬಳಿಂದ ಸಂಸಾರ ಭೋಗದ ಸವಿಯೂಟ, ಇಬ್ಬರಿಂದ ವಿಷಕಾಟ; ಒಬ್ಬಳಿದ್ದರೆ ಪಂಚಾಮೃತದ ಸುಖವಿಲಾಸ, ಇಬ್ಬರಿದ್ದರೆ ಉಪವಾಸ; ಒಬ್ಬಳಿದ್ದರೆ ರತ್ನ-

ಗಂಬಳಿಯ ಹೊದಿಕೆ, ಇಬ್ಬರಿದ್ದರೆ ಎದೆಬಾಯಿಗುದಿಕೆ. ಇದು ಲೌಕಿಕದ ನೀತಿ ಶಾಸ್ತ್ರ ತಾಯಿ, ಚಾಚೂ ತಪ್ಪದೆ ನಡೆಯುವಂಥಾದ್ದು.'

ಎಂದು ಸುದೀರ್ಘ ಬೋಧೆ ಮಾಡಿದರು. ಆಗ ಅವಳು—

'ಹಾಗಾದರೆ ನನ್ನ ಮಗನ ವಂಶ ಉಳಿಯಬಾರದ್ದು ಎಂದು ನಿಮ್ಮ ವಿಚಾರವೆ ಸ್ವಾಮಿ' ಎಂದಳು—

ಶ್ರೀಗಳು— 'ಇಲ್ಲ ತಾಯಿ, ಹಾಗಲ್ಲ, ಈಗ ಸುಮ್ಮನೆ ಮನೆಗೆ ಹೋಗು. ಇನ್ನೊಂದು ಲಗ್ನ ಮರೇ ಮಾಡಬೇಡ, ವರ್ಷ ತುಂಬುವದರೊಳಗೆ ಮೊಮ್ಮಗನನ್ನು ಎತ್ತಿಕೊಂಡು ಬಾ. ತಿಳೀತೆ?'

ಆ ಮುದುಕಿ ಸೆರಗು ಹಾಸಿ, 'ಶಿವಾಯನಮಾ' ಎಂದು ನಮಿಸಿ ಸ್ವಗೃಹಕ್ಕೆ ತೆರಳಿದಳು. ಮಾತು ಪಿಟಕ್ಕೆನ್ನಲಿಲ್ಲ.

ಶಿವಯೋಗಿಯ ಅಮೃತವಾಣಿ ಸತ್ಯವನ್ನೇ ಹಡೆಯಿತು — ವರ್ಷ ತುಂಬಲಿಲ್ಲ; ಮುದುಕಿ, ಮಗ ನೀಲನಗೌಡ, ಆತನ ಹೆಂಡತಿ ಕೈಯಲ್ಲೊಂದು ಎರಡು ತಿಂಗಳ ಗಂಡು ಕೂಸು ಮಠಕ್ಕೆ ಬಂದು ಹಣ್ಣು ಕಾಯಿ ಮಾಡಿಸಿಕೊಂಡು ಹೋದರು.

# ಹೋಗಲು ಬಯಸಿದರೆ ಹೋಗಲಿ

ಕೈಯೊಡ್ಡಿದ ಜಂಗಮನಿಗೆ ಕೈಕೊಟ್ಟು ಓಡಿದರೆ ಶಿವ ಬಿಡುವನೆ? ತನ್ನ ಡಮರುಗ ಬಾರಿನಿ ಮುನ್ನೂರು ಲಾಗ ಹಾಕಿಸುತ್ತಾನೆ. ಈ ಮಾತಿಗೆ ಚಿತ್ತವಾಡಗಿಯ ಹನುಮಪ್ಪನೆ ಸಾಕ್ಷಿ.

ವಿಜಯ ಮಹಾಂತ ಶಿವಯೋಗಿಗಳು ಚಿತ್ತವಾಡಗಿಗೆ ಭಿಕ್ಷಾರ್ಥವಾಗಿ ಬಂದಿದ್ದಾರೆ. ಅವರೇನು ತಮ್ಮ ಹೊಟ್ಟೆಯ ಪಾಡಿಗೆ, ತಮ್ಮ ಸಂಸಾರಕ್ಕೆ, ತಮ್ಮ ಶ್ರೀಮಂತಿಕೆ ಹೆಚ್ಚಿಸಿಕೊಳ್ಳುವವಕ್ಕೆ ಭಿಕ್ಷೆಬೇಡುವವರೆ ? ಜಂಗಮನು ಜಗಪಾಲನೂ ಅಹುದು. ಜಗಸೇವಕನೂ ಅಹುದು. ಆತನ ಜೋಳಿಗೆ ಬಾಯ್ತೆರೆದರೆ ಒಂದು ಹನಿಯನ್ನಾದರೂ ಹಾಕಬೇಕು. ಒಂದು ಕಾಳನ್ನಾದರೂ ನೀಡಬೇಕು. ಆತ ನಿತ್ಯತೃಪ್ತ. ಆದರೆ ಹಂಗಿಸಿ ಭಂಗಿಸಿ ಹಿನ್ನೆಗೆತಕೊಟ್ಟರೆ, ಆತನ ಜಂಗು ಮುಂಜೋಲಿ ಒಗೆಸಿ ಮೊಣಕಾಲು ಮುರಿಸುತ್ತದೆ. ಕಾರಣ ಜಂಗಮನನ್ನು ಕೆಣಕುವದೆಂದರೆ ಸತ್ಯದ ಮೀಸೆಯನ್ನೇ ಎಳೆದಂತೆ !

ಶ್ರೀಗಳು ಚಿತ್ತವಾಡಿಗೆಗೆ ಬಂದು, ಹಲವು ಭಕ್ತರನ್ನೆಲ್ಲ ಬರಮಾಡಿ ಕೊಂಡು, ಭಿಕ್ಷಾಂದೇಹಿಯೆಂದು ಭಿಕ್ಷೆ ಕೇಳಿದರು. ಭಾವುಕ ಭಕ್ತರಲ್ಲ ನಾವು ಉದ್ಧಾರಾದೆವೆಂದು ಮುಗಿಬಿದ್ದು ದಾನ ನೀಡಿದರು. ಶಿವಯೋಗಿಗಳ ಭಕ್ತರು ಊರಲ್ಲಿ ಉಳಿದ ಕೆಲವರನ್ನು ಕರೆಯಲು ಹೋದರು. ಅವರೂ ಬಂದರು. ಆದರೆ ಅವರಲ್ಲಿ ಹನುಮಪ್ಪನೆಂಬೊಬ್ಬ ಹಳ್ಳಿಯ ಹಿಮ್ಮಗ್ಗುಲಿನಿಂದ ಹೊಲಕ್ಕೆ ಜಿಗಿದ. ಬಾರೆಂದು ಕರೆದ ಭಕ್ತರಿಗೆ -- 'ನಾನು ಹೊರಗೆ ಹೊರಟಿದ್ದೇನೆ. ಬರುವದಾಗುವದಿಲ್ಲವೆಂದು ಹೇಳು ನಿನ್ನ ಸ್ವಾಮಿಗೆ' ಎಂದು ಕಾಲುಕಿತ್ತು ಬಿಟ್ಟನು.

ಯಥಾರ್ಥ ಸಂಗತಿಯನ್ನು ಆ ಭಕ್ತ ಶಿವಯೋಗಿಗಳಿಗೆ ಅರಿಕೆಮಾಡಿದ, ಅವರು ನಗುನಗುತ್ತಲೆ—

'ಹೋಗಲಿ ಬಿಡು. ಎಲ್ಲರೂ ಸತ್ಪಾತ್ರಕ್ಕೆ ದಾನ ಮಾಡಿದರೆ ಹೇಗೆ? ಅವನೊಬ್ಬನಾದರೂ ಧೂರ್ತ ಪಾತ್ರಕ್ಕೆ ದಾನಮಾಡಬಾರದೆ? ಹೋದನೆಂಬ ಮೇಲೆ ಹೋಗಿಯೆ ಬಿಡಲಿ. ಹೊರಟವನನ್ನು ಕರೆಯುತ್ತಾರೆಯೆ?'

ಎಂದರು. ಉಳಿದ ಸುಭಿಕ್ಷೆಯನ್ನು ಸ್ವೀಕರಿಸಿ ಇಲಕಲ್ಲಿಗೆ ನಡೆದರು.

ಇತ್ತ ಹನುಮಪ್ಪ ವಿನಾಕಾರಣ ನೆರೆ ಹಳ್ಳಿಯ ಪಾರ್ಟಿಯಲ್ಲಿ ಸೇರಿ ಖೂನಿ ಕೇಸಿನಲ್ಲಿ ಸಿಕ್ಕುಬಿದ್ದ. ಸಂಶಯದಿಂದ ಎಲ್ಲರೂ ಇವನನ್ನೆ ಸದೆಬಡೆದರು. ಆಗ ಪೋಲೀಸ ಕಟ್ಟೆಯಿಂದ ಹಿಡಿದು ಕೋರ್ಟುಕಟ್ಟೆಯ ವರೆಗೆ ಹಣ ಸುರಿಯಬೇಕಾಗಿ ಬಂತು. ಖೂನಿ ಕೇಸೆಂದರೆ ಸಾಮಾನ್ಯವೆ? ಹೊಲ ಮಾರಿದ. ಮನೆ ಮಾರಿದ. ಕೊನೆಗೆ ಖಟ್ಲೆ ಇವನ ವಿರುದ್ಧವೆ ಆಗುವಂತೆ ಕಂಡಿತು. ನಿರುಪಾಯನಾಗಿ ಊರುಬಿಟ್ಟು ದಿಕ್ಕುಪಾಲಾಗಿ ಓಡಿಹೋದ. ಹೋದವನು ಹೋಗಿಯೇ ಬಿಟ್ಟ. ಇನ್ನು ಅವನನ್ನು ಹೊರಳಿ ಕರೆಯುವವರಾದರೂ ಯಾರು?

# ಮನಸ್ಸಿಲ್ಲದ ದಾನ

ಜಗತ್ತಿನಲ್ಲಿ ಹಲವು ಬಗೆಯ ದಾನವಂತರನ್ನು ಕಾಣಬಹುದಲ್ಲವೆ? ಸಾಯಲಾದ ಆಕಳನ್ನು ಎಷ್ಟು ಬ್ರಾಹ್ಮಣರು ದಾನ ಪಡೆದಿಲ್ಲ? ಕೆಟ್ಟ ಸುಳಿಯುಳ್ಳ ಕುದುರೆಯನ್ನು ದಾನ ಮಾಡಿ ಪಾರಾದವರು ಎಷ್ಟು ಜನರಿಲ್ಲ? ಸತ್ತರೆ ದಾನ ಪಡೆದವರೆ ಸಾಯಲೆಂಬ ಸದುದ್ದೇಶವೆ ಅದರ ಹಿಂದೆ ಅಡಗಿರಬಹುದೆ! ಸವಕಳಿಯ ದುಡ್ಡು ದಾನಮಾಡದವರಂತೂ ಒಬ್ಬರೂ ಇಲ್ಲ. ಅಷ್ಟೇ ಏಕೆ, ಕಣ್ಣಿಲ್ಲದ ತಿರುಕರಿಗೆ ಒಂದಾಣೆ ಸವಕಳಿ ನಾಣ್ಯ ಒಗೆದು, ಮೂರು ಒಳ್ಳೆಯ ಬಿಲ್ಲಿಗಳನ್ನು ವಾಪಸು ತಂದವರೂ ಇದ್ದಾರೆ.

ಇಂಥ ದಾನವಂತನು ವಿಜಯ ಮಹಾಂತ ಶಿವಯೋಗಿಗಳಿಗೂ ಒಮ್ಮೆ ಗಂಟುಬಿದ್ದ. ಶ್ರೀಗಳಿಗೆ ತಮ್ಮ ಮಠಕ್ಕೆ ಒಳ್ಳೆಯ ಕಂಬ, ತೊಲಿಗಳು ಬೇಕಾಗಿದ್ದವು. ಅದಕ್ಕಾಗಿ ನೇರವಾಗಿ ಗೊರಬಾಳಿಗೆ ಪ್ರಯಾಣ ಮಾಡಿದರು. ಅಲ್ಲಿ ಸಂಗಪ್ಪನೆಂಬವನ ಹೊಲದಲ್ಲಿ ಭಾರೀ ಗಾತ್ರದ ಬೇವಿನ ಮರಗಳು ಸಾಕಷ್ಟು ಇವೆಯೆಂದು ಗೊತ್ತಾಗಿ ಅವನನ್ನು ಕರೆಯಿಕಳಿಸಿದರು. ತಮ್ಮ ಮಠದ ತೊಲೆ ಕಂಬಗಳಿಗೆ ಒಂದು ಬೇವಿನ ಮರ ಬೇಡಿದರು. ಆತ ಶಿವಯೋಗಿಗಳನ್ನು ತಾತ್ಸಾರದಿಂದಲೆ ಹೊಲಕ್ಕೆ ಕರೆದೊಯ್ದು. ಸಂಪೂರ್ಣ ಅಂಕು ಡೊಂಕಾದ, ಗೆದ್ದಲಿ ತಿಂದು ಅರ್ಧ ಒಣಗಿದ ಮರವೊಂದನ್ನು ತೋರಿಸಿ. ಅದನ್ನು ಕಡಿದುಕೊಂಡು ಒಯ್ಯಲು ಹೇಳಿದ. ಆ ಗಿಡವನ್ನು ಕಂಡು ಸ್ವಾಮಿಗಳ ಪಿತ್ತ ನೆತ್ತಿಗೇರಿತು. ಒಮ್ಮೆಲೇ ಗದರಿದರು—

'ನಿನ್ನ ಹೊಲದಲ್ಲಿ ಇಷ್ಟು ಗಿಡಗಳು ತುಂಬಿವೆ. ಇದನ್ನೇ ನಮಗೆ ಹುಡುಕಿಕೊಟ್ಟೆಯಾ? ನಿನ್ನ ದಾನವೇ ಬೇಡ'

ಎಂದು ಅಲ್ಲಿಂದ ಹೊರಟೇ ಬಿಟ್ಟರು. ಸಂಗಪ್ಪ ಪುಂಗೀನಾದ ಕೇಳಿದ ಹಾವಿನಂತೆ ಸುಮ್ಮನೆ ನಿಂತ !

ಎಂಟು ದಿನಗಳು ಕಳೆದಿರಲಿಲ್ಲ. ಅರ್ಧ ಒಣಗಿದ ಗಿಡವನ್ನು ದಾನಕೊಟ್ಟ ಈತನ ಎಡಭಾಗದ ಕೈ, ಎಡಕಾಲುಗಳು ಒಣಗಿಹೋದವು. ಸ್ಪರ್ಶರಹಿತವಾದವು. ಅಲ್ಲದೆ ಅವನ ದೇಹ ಬಿಲ್ಲು ಮಣಿದಂತೆ ಮಣಿದು ವಕ್ರಾಂಗನಾದ ! ಎದ್ದು ನಿಲ್ಲಲು, ಓಡಾಡಲು ಬರದಂತಾಯಿತು !! ಗೆದ್ದಲಿ ಬಿದ್ದು ಒಣಗಿದ ಸೊಟ್ಟ ಬೇವಿನ ಮರದಂತೆಯೇ ಕಾಣಹತ್ತಿದ !!! ಇಡೀ ಆಯುಷ್ಯವನ್ನು ಒಂದು ಹಳೆಯ ಮೂಲೆಯಲ್ಲಿ ಕಸಪೊರಕೆಯಂತೆ ಬಿದ್ದು ಕಳೆದ.

# ದಾನವೂ ಇಲ್ಲ ವರಮಾನವೂ ಇಲ್ಲ

ವಜ್ಜಲ ಊರಿನ ಗವಿಯಪ್ಪ ವಜನಕಟ್ಟೆ ಆಳು. ಶ್ರೀಮಂತ ಸರದಾರೀ ಪದ್ಧತಿಯ ಜಮೀನದಾರ. ಅವನಲ್ಲಿ ಒಂದು ಸುಲಕ್ಷಣಯುಕ್ತವಾದ ಕುದುರೆ ಇತ್ತು. ಆಕಸ್ಮಿಕವಾಗಿ ಶಿವಯೋಗಿಗಳು ವಜ್ಜಲಕ್ಕೆ ದಯಮಾಡಿಸಿದಾಗ ಅದನ್ನು ನೋಡಿದರು. ಶಿವಯೋಗಿಗಳ ವರ್ತನವೇ ಒಂದು ವಿಚಿತ್ರ! ಏನಾದರೂ ಬೇಕಾದರೆ ಹಿಂದು ಮುಂದೆ ನೋಡದೆ ಬೇಡಿಯೇ ಬಿಡುತ್ತಿದ್ದರು. ಇವರ ಬೇಡಿಕೆಯ ಗೂಢಾರ್ಥವೇ ಬೇರೆಯಾಗಿರುತ್ತಿತ್ತು. ಕಾರಣ ಆ ದಾನ ನೀಡುವವರ ಪಾಪ ಪರಿಹಾರದ ಕಾಲ ಒದಗಿಬಂದಿರುತ್ತಿತ್ತು. ಆ ಪಾಪದ ಬಿಡುಗಡೆಗಾಗಿ ಶಿವನೇ ಇವರ ಬಾಯಿಂದ ಆ ಬೇಡಿಕೆಯನ್ನು ಒಡನುಡಿಸುತ್ತಿದ್ದ. ಆದರೆ ಅಜ್ಞರಿಗೆ ಇದು ತಿಳಿಯಬೇಕಾದರೂ ಹೇಗೆ? ಹಲವು ಸಲ ಪಾಪ ವಿಮೋಚನೆಯ ಒಡಲು ಮತ್ತಷ್ಟು ಗಂಟನ್ನು ದೊಡ್ಡದನ್ನಾಗಿ ಮಾಡಿಕೊಂಡು ಹೋದವರೆ ಬಹಳ!

ಶ್ರೀಗಳು ಗವಿಯಪ್ಪನನ್ನು ಕರೆದು ಹೇಳಿದರು—

‘ಗವಿಯಪ್ಪಾ, ಆ ಕುದುರೆ ನಿನಗೆ ಏನೂ ಉಪಯೋಗವಿಲ್ಲ. ನಮಗೆ ಉಪಯೋಗವಿದೆ. ಕೊಟ್ಟುಬಿಡು! ಎಂದರು.’

ಗವಿಯಪ್ಪ ಈ ಮಾತು ಕೇಳಿ ಬಾಯಲ್ಲೇ ಉಗುಳು ನುಂಗಹತ್ತಿದ. ತಾನು ಕಾಠೇವಾಡದಿಂದ ತರಿಸಿದ ಆ ಕುದುರೆಯನ್ನು ಹೇಗೆ ತಾನೇ ಕೊಟ್ಟಾನು? ಆತ ಕೊಡುತ್ತೇನೆಯೆಂದೂ ಅನ್ನಲಿಲ್ಲ. ಕೊಡುವದಿಲ್ಲವೆಂದೂ ಅನ್ನಲಿಲ್ಲ. ಒಂದು ಸಲ— ‘ಮನೆಯಲ್ಲಿ ಕೇಳಿ ನೋಡುತ್ತೇನೆ ಎಂದ. ಇನ್ನೊಂದು ಸಲ— ‘ವಿಚಾರ ಮಾಡುತ್ತೇನೆ’ ಎಂದ. ಮತ್ತೊಂದು ಸಲ— ‘ಇದು ನನಗೆ ಬಹಳ ಉಪಯೋಗವಿದೆ. ದಿನಾಲು ಇದರ ಮೇಲೆಯೇ ಹತ್ತಿಕೊಂಡು ಹೊಲಗಳಿಗೆ ಹೋಗುತ್ತೇನೆ’ ಎಂದೂ ಆತನ ಮಿಡುಕಾಟ ಕಂಡು ಶಿವಯೋಗಿಗಳು ಮುಂದೆ ಸಾಗಿಬಿಟ್ಟರು.

ಶ್ರೀಗಳು ವಜ್ಜಲದಿಂದ ಹೊರಟು ಹಿರಿಯೋತಗೇರಿಯನ್ನು ಇನ್ನೂ ತಲುಪಿರಲಿಲ್ಲ; ಗವಿಯಪ್ಪನ ಕುದುರೆ ಹೊಟ್ಟೆಬೇನೆ ಬಂದು ನೆಲಕ್ಕೆ ಕುಪ್ಪಳಿಸಿ ಸಂಕಟದಿಂದ ಉರುಳಾಡಿ ಪ್ರಾಣಬಿಟ್ಟಿತು. ಅದನ್ನು ಕಣ್ಣಾರೆ ಕಂಡ ಗವಿಯಪ್ಪ

ಕಸಿವಿಸಿಗೊಂಡು ತನ್ನನ್ನು ತಾನೇ ಬಯ್ದುಕೊಂಡ. ಶಿವಯೋಗಿಗಳು —'ಆ ಕುದುರೆ ನಿನಗೆ ಏನೂ ಉಪಯೋಗವಿಲ್ಲ. ನಮಗೆ ಉಪಯೋಗವಿದೆ' ಎಂದಿದ್ದರು. ಇಲ್ಲಿ ಅದರ ಆಯುಷ್ಯ ತುಂಬಿ ಬಂದದ್ದರಿಂದಲೇ ಅವರು ದಿವ್ಯಜ್ಞಾನದಿಂದ ಹಾಗೆ ಕೇಳಿರಬಹುದು. ಒಂದು ವೇಳೆ ನಾನು ದಾನಕೊಟ್ಟಿದ್ದರೆ ಅದು ಶ್ರೀಗಳ ಮಾತಿನಂತೆ ಮಠದಲ್ಲಿ ಬದುಕಿ ಅವರಿಗೆ ಉಪಯೋಗಕ್ಕೆ ಬಂದೇ ಬರುತ್ತಿತ್ತು. ಅಯ್ಯೋ ನಾನೆಂಥ ಪ್ರಮಾದ ಮಾಡಿದೆ? ದಾನದಿಂದ ಬರಬಹುದಾದ ಪುಣ್ಯವೂ ಹೋಯಿತು. ಕುದುರೆಯೂ ಹೋಯಿತು. ಮೇಲೆ ನನ್ನ ಪಾಪದ ಮೂಟೆಯನ್ನು ಹೆಚ್ಚು ಮಾಡಿಕೊಂಡೆ— ಎಂದು ಆತ ರೋದಿಸಿದ. ಆದರೇನು? ಮಾತು ಮಿಂಚಿಹೋಗಿದೆ! ಒಮ್ಮೆ ಒಲಿದ ಶಿವಯೋಗಿ ಮತ್ತೊಮ್ಮೆ ಒಲಿಯುವನೇ?

# ಕರಡಿಯ ಕುಲಾಂಗನೆ ಹೇಳಿದ ಸುಳ್ಳು

ಸಾವಿರ ಸುಳ್ಳು ಹೇಳಿ ಒಂದು ಮದುವೆ ಮಾಡಬೇಕೆಂದು ಲೋಕಶಾಸ್ತ್ರವಿಲ್ಲವೇ? ಮತ್ತೊಬ್ಬರ ಮನೆಯ ದಾಗೀನುಗಳನ್ನು ಕನ್ನೆಗೆ ತೊಡಿಸಿ, ಲಗ್ನವಾದ ಮೇಲೆ ಉಚ್ಚಿಕೊಂಡವರು ಎಷ್ಟಿಲ್ಲ? ವರದಕ್ಷಿಣೆ ಕೊಡುತ್ತೇನೆಂದು ಕೈಕೊಟ್ಟ ವ್ಯವಹಾರ ಕುಶಲರು ಎಷ್ಟಿಲ್ಲ? ಆದರೆ ಈ ಎಲ್ಲ ಸುಳ್ಳುಗಳನ್ನೂ ಮರೆಮಾಜಿ ಹತ್ತು ಹಡೆದ ದಂಪತಿಗಳು ಸುಳ್ಳೇ?

ಆದರೆ ಈ ಸುಳ್ಳಿಗೆ ತನ್ನದೇ ಆದ ಸರಹದ್ದು ಇದೆ. ಶಿವಯೋಗಿಯ ಬಳಿಗೂ ನಮ್ಮ ಸುಳ್ಳಿನ ಕುಲಾವಿ ಕಟ್ಟಿಕೊಂಡು ಹೋಗಬಾರದು. ವೈದ್ಯನ ಮುಂದೆ ಸತ್ಯವನ್ನೇ ನುಡಿಯಬೇಕು. ಹೊಟ್ಟೆ ಜಾಡಿಸುವ ಸಮಯದಲ್ಲಿ ವೈದ್ಯನ ಮುಂದೆ ನಾಚಿಕೊಂಡು, ಹೊಟ್ಟೆಕಟ್ಟಿದೆ ಎಂದು ಹೇಳಿದರೆ ಏನಾಗಲಿಕ್ಕಿಲ್ಲ! ಹಾಗೆಯೇ ಶಿವಯೋಗಿ ಭವರೋಗ ವೈದ್ಯ. ಅವನು ಮುಂದೆ ನಮ್ಮ ನಾಡೀ ಪರೀಕ್ಷೆ ಚನ್ನಾಗಿಯೇ ಆಗಬೇಕು. ಇಲ್ಲವಾದರೆ ಹೊಟ್ಟೆನೋವು ಆದವನು ತಲೆನೋವಿನ ಗುಳಿಗಿನುಂಗಿದಂತೆ!

ಕರಡಿ ಊರಿನ ಕುಲಾಂಗನೆಯೊಬ್ಬಳು ಈ ರೀತಿ ಎಂಟಾಣೆ ತೂಕದ ಭಕ್ತಿವುಳ್ಳವಳು. ಹಾಗೂ ಸೈ! ಹೀಗೂ ಸೈ!! ಅವಳು ಒಂದು ಸಲ ತನ್ನ ಹೊಟ್ಟೆಯಲ್ಲಿ ಹುಟ್ಟಿದ ಇಬ್ಬರು ಮಕ್ಕಳನ್ನೂ ಹಾಗೂ ತನ್ನ ಮೈದುನನ ಐದು ಜನ ಮಕ್ಕಳನ್ನೂ ಕರೆದುಕೊಂಡು ಶಿವಯೋಗಿಗಳ ದರ್ಶನಕ್ಕೆ ಬಂದಳು. ಸಾಷ್ಟಾಂಗ ಹಾಕಿದಳು. ಸ್ವಾಮಿಗಳು ಆ ಮಕ್ಕಳನ್ನು ಅಪಾರ ದಯೆಯಿಂದ ನಿರುಕಿಸಿದರು. ಬಳಿಕ ಆ ಕುಲವನಿತೆಯು ರತ್ನದ ಚಂಡಿನಂತಹ ಇಬ್ಬರು ಮಕ್ಕಳ ಕಡೆಗೆ ಬರಲು ಮಾಡಿ—

'ಇವರು ಯಾರ ಮಕ್ಕಳು ತಾಯಿ?'

ಎಂದು ಕೇಳಿದರು. ಅದಕ್ಕೆ ಅವಳು—

'ನನ್ನ ಮಕ್ಕಳು ತಂದೆ' ಎಂದಳು.

ಶ್ರೀಗಳು ಇನ್ನುಳಿದ ಐದು ಹುಡುಗರನ್ನು ನೋಡಿ ಮತ್ತೆ ಕೇಳಿದರು—

'ಈ ಐವರು ಯಾರ ಮಕ್ಕಳು?'

ಅದಕ್ಕೆ ಅವಳು—

'ಇವರೂ ನನ್ನ ಮಕ್ಕಳೇ ಬುದ್ಧೀ' ಎಂದಳು.

ಶಿವಯೋಗಿಗಳಿಗೆ ಸಂಶಯುಕ್ಕಿಟ್ಟುಕೊಂಡಿತು. ಮತ್ತೊಮ್ಮೆ ಮೆಲುಕು ಹಾಕಿ ಕೇಳಿದರು–

'ನಿಜವಾಗಿಯೂ ಇವರು ನಿನ್ನ ಮಕ್ಕಳೇನಮ್ಮಾ?'

ಅದಕ್ಕೆ ಅವಳು–

'ಹೌದು ಸ್ವಾಮಿ. ನಿಜವಾಗಿಯೂ ನನ್ನ ಮಕ್ಕಳೇ?' ಎಂದಳು.

ಶಿವಯೋಗಿಗಳು–

'ಆಗಲಿ ಬಿಡವ್ವಾ. ನಿನ್ನ ಮಕ್ಕಳೇ ಆಗಲಿ' ಎಂದರು.

ಮುಂದೆ ಕೆಲ ದಿನಗಳಲ್ಲೇ ಅವಳ ಮೈದುನ ಹಾಗೂ ಮೈದುನನ ಹೆಂಡತಿ ಇಬ್ಬರೂ ಸತ್ತುಹೋದರು. ಅವರ ಆ ಐದು ಜನ ಮಕ್ಕಳು ಅನಾಥರಾದವು. ಅವುಗಳ ಜೋಪಾನ ಇವಳ ಪಾಲಿಗೇ ಬಿತ್ತು! ಆ ಹುಡುಗ ರನ್ನು ತನ್ನ ಮಕ್ಕಳಂತೆಯೇ ನೋಡಬೇಕಾಯಿತು. ಶಿವಯೋಗಿಗಳು 'ಆಗಲಿ ಬಿಡವ್ವಾ ನಿನ್ನ ಮಕ್ಕಳೇ ಆಗಲಿ' ಎಂದಿದ್ದರು. ಈ ಮಾತು ಸುಳ್ಳಾಯಿತೆ?

ಇಲ್ಲಿ ಅವಶ್ಯವಾಗಿ ವಿಚಾರಿಸತಕ್ಕ ಕೆಲಸಂಗತಿಗಳು ಇವೆ. ಈ ಕುಲವನಿತೆ ತನ್ನ ಮೈದುನನ ಮಕ್ಕಳನ್ನು ತನ್ನ ಮಕ್ಕಳೇ ಎಂದು ಹೇಳಿದ ಮಾತಿನಲ್ಲಿ ಏನು ತಪ್ಪು ಇದೆ? ಜಗತ್ತಿನಲ್ಲಿ ಒಬ್ಬರು ಮತ್ತೊಬ್ಬರ ಮಕ್ಕಳನ್ನು ತಮ್ಮ ಮಕ್ಕಳೆಂದು ಭಾವಿಸಬಾರದೇ? ಆ ಹುಡುಗರು ಏನು ತಪ್ಪು ಮಾಡಿದವು? ಅವೇಕೆ ಅನಾಥರಾಗಬೇಕು? ಇನ್ನು ಆ ಮೈದುನ ಹಾಗೂ ಅವನ ಹೆಂಡತಿ ಯಾಕೆ ಸತ್ತರು? ಅವರೇನು ಅನ್ಯಾಯ ಮಾಡಿ ದ್ದರು? ತಮ್ಮ ಮಟ್ಟಿಗೆ ತಾವಾಗಿ ಅವರು ಇದ್ದರೆ ಶಿವಯೋಗಿಯ ಶಾಪ ಅವರಿಗೇಕೆ ತಟ್ಟಬೇಕು? ಏನೂ ಅನ್ಯಾಯ ಮಾಡದವರಿಗೂ ಶಿವಯೋಗಿಯ ಶಾಪ ಅವರಿಗೇಕೆ ತಟ್ಟಬೇಕು? ಏನೂ ಅನ್ಯಾಯ ಮಾಡದವರಿಗೂ ಶಿವ

ಯೋಗಿಯ ಶಾಪ ತಗುಲಿ ಅವರು ಸತ್ತರೆ ಏನು ಗತಿ? ಇದರಿಂದ ಶಿವಯೋಗಿಯ ಶಾಪ ತಗುಲಿ ಅವರು ಸತ್ತರೆ ಏನು ಗತಿ? ಇದರಿಂದ ಶಿವ ಯೋಗಿಗಳಿಗೆ ಯುಕ್ತಾಯುಕ್ತ ಜ್ಞಾನವೇ ಇಲ್ಲದಂತಾಯಿತಲ್ಲ? ಇಂಥವರಿಗೆ ಶಿವಯೋಗಿಯೆಂದು ಯಾಕಾದರೂ ಕರೆಯಬೇಕು?

ಇವೆಲ್ಲ ಸಮಸ್ಯೆಗಳಿಗೆ ಒಂದೇ ಒಂದು ಉತ್ತರ ಉಂಟು. ಮೈದುನ ಮತ್ತು ಮೈದುನನ ಹೆಂಡತಿ ಶಿವಯೋಗಿಯ ಶಾಪದಿಂದಲೇ ಸಾಯಲಿಲ್ಲ. ಅವರು ತಮ್ಮ ಕರ್ಮ ಧರ್ಮ ಸಂಯೋಗದಿಂದ ಆ ಕಾಲಕ್ಕೆ ಸಾಯುವವರೇ ಇದ್ದರು. ಆ ಭವಿಷ್ಯವಾಣಿಯು ಶಿವಯೋಗಿಗಳ ಬಾಯಿಂದ ತಾನಾಗಿಯೇ ಒಡನುಡಿಸಿತು ಅಷ್ಟೆ. ಎಷ್ಟೇ ಆದರೂ ಶ್ರೀಗಳು ತ್ರಿಕಾಲ ಜ್ಞಾನಿಗಳಲ್ಲವೆ?

# ವಿಚಿತ್ರ ಲೀಲೆ

ವಿಜಯಮಹಾಂತ ಶಿವಯೋಗಿಗಳು ಎಷ್ಟು ಗಂಭೀರರಿದ್ದರೋ ಅಷ್ಟೇ ಹುಡುಗಾಟಿಕೆಯುವರೂ ಇದ್ದರು. ಅವರ ವ್ಯಕ್ತಿತ್ವದ ಹಲವು ಹನ್ನೊಂದು ಮುಖಗಳನ್ನು ಅಳೆದು ಹೇಳುವದೇ ಕಷ್ಟ. ಕೆಲವರು ಅವರನ್ನು ಶಾಪ ಕೊಡುವ ಬೆಂಕಿಯ ಕೆಂಡವೆಂದು. ಇನ್ನೂ ಕೆಲವರು ಅನುಗ್ರಹ ನೀಡಿ ಪಾಲಿಸುವ ತಪಸ್ವಿಗಳೆಂದು, ಮತ್ತೆ ಕೆಲವರು ಬಡವರ ದೇವರೆಂದು, ಇನ್ನು ಕೆಲವರು ರೋಗಾದಿಗಳನ್ನು ಕಳೆದು ಮಕ್ಕಳ ಸಂಪತ್ತನ್ನೂ ಧನಧಾನ್ಯ ಸಮೃದ್ಧಿಯನ್ನು ದಯಪಾಲಿಸುವ ತಂದೆಯೆಂದು, ಇನ್ನಿತರರು ಕಷ್ಟಕಾಲದ ಸಮೃದ್ಧಿಯನ್ನು ದಯಪಾಲಿಸುವ, ಇನ್ನಿತರರು ಕಷ್ಟಕಾಲದ ಕರುಣಾದೇವತೆಯಾದ ತಾಯಿಯೆಂದು, ಮತ್ತಿತರರು ಕೇವಲ ಮುಖ ನೋಡಿಯೆ ಜನರ ಬಾಳಿನ ಆಗುಹೋಗುಗಳನ್ನೂ ಗುಣದೋಷಗಳನ್ನೂ ಕಂಡುಹಿಡಿಯಬಲ್ಲ ಮಹಾ ಭವಿಷ್ಯಜ್ಞನೆಂದು ತಿಳಿಯುತ್ತಿದ್ದರು. ಒಟ್ಟಿನಲ್ಲಿ ಅವರು ಭಕ್ತರಿಗೆ ಭಕ್ತರಾಗಿ, ಅಬಲರಿಗೆ ಸಬಲರಾಗಿ ಬಾಳಿದರು. ಇದಲ್ಲದೆ ಅವರ ಇನ್ನೊಂದು ಅಭೂತಪೂರ್ವ ವ್ಯಕ್ತಿತ್ವವೆಂದರೆ ಮಕ್ಕಳೊಂದಿಗೆ ಮಕ್ಕಳಾಗಿ ನಲಿಯುವರು. ಚಿತ್ತರಗಿಯ ಮಠಕ್ಕೆ ಹೋದಾಗ ಆ ಊರಿನಲ್ಲಿದ್ದ ತಮ್ಮ ಪರಿಚಯದ ಇಬ್ಬರು ಹುಡುಗರನ್ನು ಅತೀ ಪ್ರೀತಿಯಿಂದ ಬರಮಾಡಿಕೊಳ್ಳುತ್ತಿದ್ದರು. ಅವರಲ್ಲಿ ಒಬ್ಬ ಹುಡುಗ ಶುದ್ಧ ಬೆಕ್ಕಿನಂತೆ ಕೂಗಲು ಕಲಿತಿದ್ದ. ಇನ್ನೊಬ್ಬ ಗಿಳಿಯಂತೆಯೇ ಧ್ವನಿಮಾಡಲು ಬಲ್ಲಿದನಾಗಿದ್ದ. ಚಿತ್ತರಗಿ ಮಠದಲ್ಲಿ ವಿಶ್ರಾಂತಿಗೆಂದು ತಂಗಿದಾಗ ಮಕ್ಕಳೊಂದಿಗೆ ಆಡುವದೇ ಅವರ ವಾಡಿಕೆಯಾಗಿತ್ತು ಅವರಿಂದ ಬೆಕ್ಕಿನಂತೆ, ಗಿಳಿಯಂತೆ ಕೂಗಿಸಿ ಆನಂದಪಡುತ್ತಿದ್ದರು, ಅವರನ್ನು 'ನನ್ನ ಬೆಕ್ಕು' 'ನನ್ನ ಗಿಳಿ' ಎಂದೇ ಸಂಬೋಧಿಸುತ್ತಿದ್ದರು. ಇಷ್ಟೇ ಅಲ್ಲ; ಅವರ ಅಂತರಂಗದ ಸೂಕ್ಷ್ಮಮತಿ ಎಷ್ಟೊಂದು ಸುಕೋಮಲವಾಗಿತ್ತೆಂದರೆ, ಬೆಕ್ಕಿನಂತೆ ಕೂಗುವ ಹುಡುಗನಿಗೆ ಹಾಲು ಕುಡಿಸುತ್ತಿದ್ದರು ! ಗಿಳಿಯಂತೆ ಧ್ವನಿ ಮಾಡುವ ಹುಡುಗನಿಗೆ ಹಣ್ಣು ತಿನಿಸುತ್ತಿದ್ದರು !! ಉಳಿದ ಜನರಿಗೆ ಆ ಬಾಲಕರನ್ನು ತೋರಿಸುತ್ತ– 'ನೋಡ್ರಿಪಾ.... ಈ ಪುಟ್ಟ ಮಕ್ಕಳಲ್ಲಿ ಶಿವಾ ಎಂಥಾ ಕಲಾ ಹಾಕಿದ್ದಾನ!' ಎಂದು ಹೇಳಿ ಉದ್ಗಾರ ತೆಗೆಯುತ್ತಿದ್ದರು

ಬಾಲ್ಯದಲ್ಲೇ ಶಿವಯೋಗಿಗಳ ಕೃಪೆಗೆ ಪಾತ್ರರಾದ ಆ ಮಕ್ಕಳು ಮುಂದೆ ಬೆಳೆದು ದೊಡ್ಡವರಾದ ಮೇಲೆ ಆಗರ್ಭ ಶ್ರೀಮಂತರಾದರು. ಅವರ ಮನೆ ತನವೇ ಬೆಳೆಯಿತು.

ವಜ್ಜಲದ ಪರ್ವತಗೌಡನ ಮಗಳು ಲಕ್ಕಮ್ಮ ಎರಡು ವರ್ಷದ ಸುಂದರ ಹುಡುಗಿ. ಮಾತಿನಲ್ಲಿ ಬಹಳ ಚತುರೆ. ಆಟದಲ್ಲಿ ತುಂಬ ಚುರುಕು. ವಜ್ಜಲಕ್ಕೆ ಹೋದಾಗ ಶಿವಯೋಗಿಗಳು ಆ ಹುಡಿಗೆಯೊಂದಿಗೆ—'ಇವಳು ನನ್ನ ಹೆಂಡತಿ ಇದ್ದಾಳೆ' 'ನನ್ನ ಹೆಂಡತಿ ಜೊತೆಗೆ ನಾನು ಆಡಿದರೆ ಯಾರದೇನು ಗಂಟು ಹೋಗುತ್ತದೆ' ಎಂದು ಹಾಸ್ಯ ಮಾಡಿ ಆಡುತ್ತಿದ್ದರು! ಆ ಹುಡಿಗೆಯೂ 'ನನ್ನ ಗಂಡನೊಂದಿಗೆ ಗೊಂಬಿ ಆಡುತ್ತೀನಿ'ಯೆಂದು ಆಡುತ್ತಿದ್ದಳು!! ಶಿವ ಯೋಗಿಗಳು ತಮ್ಮ ಆ ಬಾಲ ಹೆಂಡತಿಗೆ ಜೋಳಿಗೆಯಲ್ಲಿದ್ದ ಹಣ್ಣು ಹಂಪಲ ಗಳನ್ನು ಕೊಟ್ಟು ತೃಪ್ತಿ ಮಾಡುತ್ತಿದ್ದರು!!! ಚಿನ್ನಾಟವಾಡಿಸುತ್ತಿದ್ದರು. ಚಕ್ಕಂದವಾಡಿ ನಲಿಯುತ್ತಿದ್ದರು. ಅಂತೂ ವಜ್ಜಲದ ಆ ಹುಡುಗಿ ಶಿವ ಯೋಗಿಯನ್ನೇ ತನ್ನ ಗಂಡನನ್ನಾಗಿ ಮಾಡಿಕೊಂಡುಬಿಟ್ಟಳು!

ಆದರೆ ಮುಂದೆ ಒಂದು ಸಲ ಆ ಬಾಲಿಕೆಗೆ ಭಯಂಕರವಾದ ವಿಷಮ ಜ್ವರ ಸೇರಿಕೊಂಡಿತು. ಸಂಪಿಗೆಯ ಎಸಳಿನ ಮೇಲೆ ಕೆಂಡ ಇಟ್ಟಂತಾಯಿತು. ಯಾವ ವೈದ್ಯರಿಂದಲೂ ಗುಣವಾಗಲಿಲ್ಲ. ಕೇಳಿಸಿ ನೋಡಿದರು. ಹರಕೆ ಹೊತ್ತು ನೋಡಿದರು. ಬೇಡಿಕೊಂಡು ನೋಡಿದರು. ಎಲ್ಲವೂ ವ್ಯರ್ಥವಾ ಯಿತು. ಕೊನೆಯ ದಿನ ಆ ಹುಡುಗಿ ಕಣ್ಣಲ್ಲಿ ಜೀವ ತಂದು ಬಾಯಿ ಬಿಡ ಹತ್ತಿತು. ಊರಿನ ಜನ ಬಂದು ಅಳಹತ್ತಿದರು. ತಾಯಿ ತಂದೆ ಸಂಕಟದಿಂದ ಉರುಳಾಡಿದರು. 'ನಮ್ಮವ್ವ ಹೊಂಟ್ಲು' ಎಂದು ಎದೆ ಬಾಯಿಬಿಟ್ಟರು. ಯಮದೇವನನ್ನು ಯಾರು ತಡೆಯುತ್ತಾರೆ? ಆತ ತನ್ನ ಕಾರ್ಯದಲ್ಲಿ ಸ್ವತಂತ್ರನೇ ಅಲ್ಲವೇ?

ಪರ್ವತಗೌಡನಿಗೆ ಹುಚ್ಚು ಹಿಡಿದಂತಾಗಿ ತಾನೇ ಒಂದು ವಿಚಾರ ಮಾಡಿದ. ನನ್ನ ಮಗಳ ಮೇಲೆ ಶಿವಯೋಗಿಗಳು ಪಂಚಪ್ರಾಣ. ಇವಳು ಸತ್ತರೆ ಅವರ ತೊಡೆಯ ಮೇಲೆಯೇ ಸಾಯಲೆಂದು ಬಗೆದು, ಒಂದು ಬಂಡಿಗೆ ಎತ್ತು ಹೂಡಿ ತಂದು, ಅದರಲ್ಲಿ ಕಂಬಳಿ ಹಾಸಿ, ಮಗಳನ್ನು ಮಲಗಿಸಿ

ಶ್ರೀಗಳ ಮಠಕ್ಕೆ ನಡೆದನು. ಕೂಸನ್ನು ಎತ್ತಿಕೊಂಡು ಹೋಗಿ ಶಿವಯೋಗಿಗಳ ತೊಡೆಯ ಮೇಲೆ ಮಲಗಿಸಿ ಬಿಕ್ಕಿಬಿಕ್ಕಿ ಅಳಹತ್ತಿದನು.

'ಶಿವಯೋಗಿಗಳು ನೋಡುತ್ತಾರೆ, ತಮ್ಮ ಪ್ರೀತಿಯ ಮೊಗ್ಗು ಕೊನೆಯುಸಿರು ಬಿಡುತ್ತಿದೆ ! ಅವರ ಕಣ್ಣಲ್ಲಿ ಒಳಬಳಗೇ ಕಣ್ಣೀರು ಉದುರಿದವು. ಹುಡಿಗೆಯ ತಂದೆಗೆ—

'ಇದೇನೊ ಗೌಡ, ನನ್ನ ಹೆಂಡತಿಗೆ ಹೀಗೇಕಾತು ?'

ಎಂದು ಕೇಳಿದರು. ಗೌಡ ಮೂಕನಾದ. ಶ್ರೀಗಳು ಕೂಡಲೇ ತಮ್ಮ ರೇಶಿಮೆ ಕಗಗಳನ್ನು ಬಾಲೆಯ ಮೈಮೇಲೆಲ್ಲ ಆಡಿಸಿ—'ಪರ್ವತಗಾಡಾ, ಇನ್ನು ಇವಳನ್ನು ಒಯ್ಯಿ' ಎಂದು ಹೇಳಿದರು. ಗೌಡ ಅಪ್ಪಣೆಯಂತೆ ಮಗಳನ್ನು ಊರಿಗೆ ಒಯ್ದ. ಊರು ಮುಟ್ಟುವದರೊಳಗಾಗಿ ಆ ಮುಗ್ಧ ಬಾಲೆ ಎಚ್ಚರಾದಳು. ಜ್ವರಬಾಧೆ ಕಡಿಮೆಯಾಗಿತ್ತು, ಮುಂದೆ ಮೂರು ದಿನಗಳಲ್ಲಿ ಎದ್ದು ನಡೆದಾಡಹತ್ತಿದಳು, ಕರುಣಾಸಾಗರನ ಕರುಣದ ಕೊಡಗೂಸು ಅವಳಲ್ಲವೆ.'

# ಗದಿಗೆಪ್ಪನ ಗಡಿಬಿಡಿ

ಹೆಣ್ಣೆಂದರೆ ಮನೆಗೆ ತಂಪೆಂದು ತಿಳಿಯುವವರು ಎಷ್ಟುಜನ ? ಹೆಣ್ಣು; ಹೆತ್ತವರಿಗೆ ಹುಣ್ಣು ಎಂದು ಹೇಳುವವರೇ ಬಹಳ. ಎಂಟು ಗಂಡುಮಕ್ಕಳು ಹುಟ್ಟಿದ ಮೇಲೆ, ಓಡಾಡಲು ಒಂದು ಪರಕಾರದ ಹುಡುಗಿ ಇರಲೆಂದು ಬೇಡುವವರೂ ಇದ್ದಾರೆ. ಒಂದು ವೇಳೆ ಬಯಸಿದಂತೆಯೆ ಮಕ್ಕಳನ್ನು ಹಡೆಯುವ ಪರವಾನಿಗೆಯನ್ನು ಪರಮೇಶ್ವರ ನೀಡಿದ್ದರೆ ಎಲ್ಲರೂ ಗಂಡೆ ಹಡೆದುಬಿಡುತ್ತಿದ್ದರು ! ಆ ಮೇಲೆ ಹುಟ್ಟಿದ ಗಂಡುಗಳೆಲ್ಲ ಲಗ್ನವಾಗಲು ಹೆಣ್ಣಿಲ್ಲದೇ ಎಲಿಎಲಿ ಒದ್ದಾಡುತ್ತಿದ್ದವು !!

ಹೆಣ್ಣು ಹುಟ್ಟಿದ ಮನೆಯ ಅನ್ನ ಉಂಡು, ಕೊಟ್ಟಮನೆಯ ಆಳಾಗಿ ಹೋಗುವ ಜೀವ. ಕೊಟ್ಟರೂ ಹೊಲಮನೆ ಒತ್ತಿ ಹಾಕಿ ವರದಕ್ಷಿಣೆ ತೆತ್ತು ವರದಕ್ಷಿಣೆ ತೆತ್ತು ಕೊಡಬೇಕು. ಅದೂ ಬಾಳುವೆ ಸರಿಯಾಗಿ ಸಾಗಿದರೆ ನೆಟ್ಟಗೆ ಇಲ್ಲವಾದರೆ ತಂದೆತಾಯಿಗಳ ನೆತ್ತಿಯನ್ನು ಕೊಂದಂತೆ !

ಹಿರಿಯೋತಗೇರಿಯ ಗದಿಗೆಪ್ಪ ಗಂಡು ಹುಟ್ಟಲೆಂದು ಚಿತ್ತರಗಿ ಪೀಠಕ್ಕೆ ಹರಕೆ ಹೊತ್ತು ಕೊನೆಗೆ ಮುತ್ತಿನಂಥಾ ಹೆಣ್ಣನ್ನೇ ಹಡೆದುಬಿಟ್ಟ ಭೂಪ ! ಚೊಚ್ಚಲು ಹೆಣ್ಣಾಯಿತೆಂದು ಭಾರೀ ಕೊರಗಿ ಹೋದ. ಅವನ ಹೆಂಡತಿಯೂ ಸಂಕಟಪಟ್ಟಳು. ಮುಂದೆ ಕೆಲ ದಿನಗಳಲ್ಲೇ ಅವಳ ಎರಡನೆಯ ಬಸುರು ನಿಂತಿತು. ಈಗ ಮತ್ತೆ ದೊಡ್ಡ ದೊಡ್ಡ ವ್ರತ ನಿಯಮಗಳನ್ನು ದಂಪತಿಗಳು ಹಿಡಿದರು. ಚೊಚ್ಚಿಲ ಹೆಣ್ಣಾಯಿತು. ಮರ್ಚಿಲ ಗಂಡಾಗಲೆಂದು ಹರಕೆ ಹೊತ್ತರು. ಹಣ್ಣುಕಾಯಿ ಮಾಡಿಸಿ ಹೆಸರಿಡುವದಾಗಿ ಬೇಡಿಕೊಂಡರು. ಅಂತೂ ಅವನ ಹೆಂಡತಿ ನವಮಾಸ ತುಂಬಿ ಹಡೆದೇಬಿಟ್ಟಳು ಹೆಣ್ಣನ್ನು ! ಗದಿಗೆಪ್ಪನ ಗದ್ದಿಗೆ ತಳಪಾಯ ಕಿತ್ತಂತಾಯಿತು. ಎದೆಬಾಯಿ ಝಲ್ಲೆಂದಿತು, ಇನ್ನು ಈ ಸುಡುಗಾಡು ಹೆಣ್ಣುಗಳನ್ನು ಎಲ್ಲಿ ಕಪ್ಪಿಸಲಿ ಎಂದು ಮರುಗಿ ಹೋದ. ಅವನ ಹೆಂಡತಿ ಗಂಡನನ್ನು ಶಪಿಸುತ್ತ – 'ನೀವು ಪಕ್ಕಾ ಹೇಡಿಗಳು ಗಂಡು ಹಡೆಯುವ ಕೂವತ್ತು ನಮ್ಮ ನಶೀಬಕ್ಕೆ ಬರಲಿಲ್ಲ' ಎಂದು ಚಿಟಗು ಮುರಿಯುವಳು. ಆತ ಅದಕ್ಕೆ ಮಾರುತ್ತರವಾಗಿ— 'ನಾ ಏನು ಮಾಡೇನೇ?

ಹಡದಾಕೆ ನೀ ಹೌದಲ್ಲೊ? ಗಂಡ ಹಡಿಯೂದು ನಿನ್ನ ಹಣ್ಯಾಗ ಹರ ಬರ ದಿಲ್ಲ. ಹೋಡಿ ನಶೀಬಾ ನಿನ್ನದು' ಎಂದ.

ಇಷ್ಟಾದ ಮೇಲೆ ಪದ್ಧತಿ ಪ್ರಕಾರ ಅವನ ಹೆಂಡತಿ ಮೂರನೇ ಸಲ ಬಸುರಿ ಆದಳು. ಊರಿನ ಜನರೆಲ್ಲ ಅವನಿಗೆ ಚಾಸಿ ಮಾತಿನಿಂದ ಕೇಳಹತ್ತಿದರು. 'ಏನೋ ಗದಿಗೆಪ್ಪಾ? ಎರಡಂತೂ ಹೆಣ್ಣಾದವು. ಮೂರನೇದ್ದೂ ಹೆಣ್ಣs ಹಡಿಯುವಂಗ ಕಾಣಸ್ತದೆ' ಎಂದು ಕೆಲವರು— 'ವರದಕ್ಷಿಣೆ ಹಣಾ ಜಮಾಸಿ ಇಟ್ಟೀ ಇಲ್ಲೊ?' ಎಂದು ಕೆಲವರು. ಗದಿಗೆಪ್ಪನ ಹೆಂಡತಿಗೂ ಅದೇ ಬಗೆಯ ರಾಮಬಾಣಗಳು ತಾಕಿದವು. ಅಂತೂ ಮೂರನೆ ಸಲ ಅವಳು ಹಡೆದೇಬಿಟ್ಟಳು ಮೂರನೇ ಹೆಣ್ಣನ್ನು !

ಗದಿಗೆಪ್ಪ ಮೂರು ದಿನ ಊರನ್ನೇ ಬಿಟ್ಟ. ಹಗಲೂ ರಾತ್ರಿ ಹೆಂಡತಿಯ ಮೇಲೆ ಹಲ್ಲು ಕಡಿದ. ಅವಳೂ ಗಂಡನ ಮೇಲೆ ಹಲ್ಲು ಕಡಿದಳು. ಒಬ್ಬರ ತಪ್ಪು ಒಬ್ಬರ ಮೇಲೆ ಹೊರಿಸಿದರು. ಎರಡೂ ಕೈಗೂಡಿದರೆ ಚಪ್ಪಾಳೆ ಆಗುತ್ತದೆಯೆಂಬುದನ್ನೇ ಮರೆತರು.

ಇವರ ದುಃಖ ಕಂಡು ಕಾಲಪುರುಷನಿಗೆ ಕೆಡುಕೆನಿಸಿತು. ಈ ಸಲ ಗಂಡ ಹೆಂಡರಿಬ್ಬರೂ ಜಿದ್ದು ಕಟ್ಟಿಯೇ ಶಯ್ಯಾಗೃಹ ಸೇರಿದರು. ಮತ್ತೆ ಗರ್ಭ ನಿಂತಿತು. ದಂಪತಿಗಳಿಬ್ಬರಿಗೂ ರತ್ನದಂಥಾ ಗಂಡುಮಗು ಹುಟ್ಟೇಬಿಟ್ಟಿತು; ಅವರ ಕನಸಿನಲ್ಲಿ ! ಇನ್ನು ಕನಸು ನನಸಾಗುವದೊಂದೇ ಉಪಾಯ ! ನವ ಮಾಸ ತುಂಬಿ ಆ ಪುಣ್ಯವಂತಿ ನಾಲ್ಕನೇ ಸಲ ಹೆರಿಗೆ ಮಾಡಿದಳು; ಅದೂ ಹೆಣ್ಣೇ !!! ಗದಿಗೆಪ್ಪ ಮನೆಬಿಟ್ಟು ಮಠವನ್ನೇ ಸೇರಿಬಿಟ್ಟ. ಸ್ವಾಮಿಗಳಿಗೆ ಮಾತ್ರ ತನ್ನ ದುಃಖ ಹೇಳದೇ ಅಲ್ಲೇ ಸೇವೆ ಮಾಡುತ್ತ ನಿಂತ.

ಹದಿಮೂರನೆಯ ದಿನ ಹೆಸರಿಡುವ ದಿನ. ಗದಿಗೆಪ್ಪನ ಹೆಂಡತಿ ತಾನು ಕೂಸಿಗೆ ಹೆಸರಿಡಲು ನಿರಾಕರಿಸಿದಳು. ಆ ಗಂಡನಿಂದಲೆ ಈ ಸಲ ಹೆಸರಿಡಿಸ ಬೇಕೆಂದು ನಿರ್ಧಾರಮಾಡಿ, ಗಂಡನನ್ನು ಕರೆಯಲು ತನ್ನ ಹಿರಿಯ ಮಗಳನ್ನು ಮಠಕ್ಕೆ ಅಟ್ಟಿದಳು. ಆಗ ಗದಿಗೆಪ್ಪ ಶಿವಯೋಗಿಗಳ ಪಾದದ ಬಳಿ ಕುಳಿತಿದ್ದ. ಮಗಳು ಬಂದು 'ಅಪ್ಪಾ ನಿನ್ನ ಮೇಲೆ ಅವ್ವ ಸಿಟ್ಟಾಗ್ಯಾಳ. ಈ ಸಲ ಆಕೆ ಹೆಸರಿಡೂದಿಲ್ಲಂತ. ನೀನ ಬೇಕಾದ್ರು ಇಡಬೇಕಂತ' ಎಂದಳು.

ಈ ಮಾತು ಕೇಳಿ ಶಿವಯೋಗಿಗಳು ನಡೆದ ಸಮಾಚಾರವನ್ನೆಲ್ಲಾ ತಿಳಿ

ದುಕೊಂಡರು. ಈಗ ಮಾತ್ರ ಗದಿಗೆಪ್ಪ ಒಳಗಿನ ಸಂಕಟ ಹೊರಗೆ ಚೆಲ್ಲಿ, ಮುಖಕ್ಕೆ ರುಮಾಲು ಮುಚ್ಚಿಕೊಂಡು ಅಳಹತ್ತಿದ. ಸ್ವಾಮಿಗಳು ಆತನ ಹುಚ್ಚುತನಕ್ಕೆ ಮನದಲ್ಲೇ ನಕ್ಕು ಹೇಳಿದರು—

'ಗದಿಗೆಪ್ಪಾ, ಮನೆಗೆ ಹೋಗು. ಹೆಸರು ಪದ್ಧತಿ ಪ್ರಕಾರ ನಿನ್ನ ಹೆಂಡತಿ ಕಡೆಯಿಂದಲೆ ಇಡಿಸು. ಹಾಗೆಲ್ಲಾ ಸಿಟ್ಟಾಗಬಾರದೆಂದು ನಿನ್ನ ಹೆಂಡತಿಗೆ ಹೇಳು. ಶಿವನ ಇಚ್ಛೆ ಯಾರ ಕೈಯಲ್ಲಿದೆ? ಮುಂದಿನ ವರ್ಷ ನಿಮ್ಮ ಗಂಡು ಮಗನನ್ನು ತಂದು ನನಗೆ ಭೆಟ್ಟಿ ಮಾಡಿಸಿರಿ' ಎಂದರು.

ಗದಿಗೆಪ್ಪ ಶಿವಯೋಗಿಗಳ ಮಾತನ್ನು ನಂಬಿದರೂ ಭರವಸೆ ಆಗಲಿಲ್ಲ. ತನ್ನ ಪ್ರಪಂಚದಲ್ಲಿ ಬರೆ ಹೆಣ್ಣೇ ಇವೆಯೆಂದು ಆತ ತಿಳಿದುಬಿಟ್ಟಿದ್ದ.

ಗದಿಗೆಪ್ಪನ ಹೆಂಡತಿ ಐದನೆ ಸಲ ಬಸುರಾದಳು. ಬಸಿರಾಗುವದೆಂದರೆ ಅವಳಿಗೆ ಗೋಲಿಗುಂಡು ಆಡಿದಷ್ಟು ಸುಲಭವಾಗಿಬಟ್ಟಿತ್ತು. ಈ ಸಲವೂ ಅವಳು ಕಂಗೆಟ್ಟು ಹೋಗಿದ್ದಳು. ನಾಲ್ಕು ಹಡೆಯುವವರೆಗೆ ಹರಕ್ಕೆ ಹೊತ್ತು ಹೊತ್ತು ಎಲ್ಲ ದೇವರುಗಳುಗಳೂ ಮುಗಿದು ಹೋಗಿದ್ದವು. ಪ್ರತಿ ಸಲವೂ ಆ ದೇವರುಗಳಿಗೆ ಹರಕೆ ಸಲ್ಲದೇ ಅವಳ ಶಾಪವೆ ತಟ್ಟಿತ್ತು! ನವಮಾಸ ತುಂಬಿದವು. ಈ ಸಲ ಮಾತ್ರ ಗಂಡೇ ಹುಟ್ಟಿತು. ದಂಪತಿಗಳಗಿಬ್ಬರಿಗೂ ಒಂದು ರಾಜ್ಯವೇ ಸಿಕ್ಕಷ್ಟು ಆನಂದವಾಯಿತು. ಕೂಸಿನ ಲಿಂಗಧಾರಣೆಯನ್ನು ಶಿವಯೋಗಿಗಳ ಕೈಯಿಂದಲೆ ಮಾಡಿಸಿ ಕೃತಾರ್ಥರಾದರು.

# ಒಬ್ಬಳ ತೊಟ್ಟಿಲಕಾಯಿ ಮತ್ತೊಬ್ಬಳಿಗೆ

ಕೆಲೂರಿನ ಲಿಂಗಪ್ಪ ಹೊಸದಾಗಿ ಲಗ್ನವಾಗಿದ್ದಾನೆ. ಹೆಂಡತಿಯನ್ನು ಮನೆ ತುಂಬಿಸಿಕೊಳ್ಳುವ ದಿನ ಪ್ರಾಪ್ತವಾಗಿದೆ. ಹಿರಿಯರ ಒತ್ತಾಯದಂತೆ ಆತ ಹೆಂಡತಿಯನ್ನು ಕರೆದುಕೊಂಡು ಆ ದಿನ ಸಂಜೆ ಮಠಕ್ಕೆ ಹೋದ. ತಾನು ಒಯ್ದ ಎರಡು ಕಾಯಿಗಳನ್ನು ಶಿವಯೋಗಿಗಳ ಮುಂದೆ ಇಟ್ಟ. ಶ್ರೀಗಳಿಂದ ಕಾಯಿ ಆಶೀರ್ವಾದ ಪಡೆಯುವ ಕಡೆಗೆ ಆತನ ಗಮನವೇ ಇಲ್ಲ. ಇದ್ದ ಗಮನವೆಲ್ಲಾ ಹೆಂಡತಿಯ ಮೇಲೆಯೆ! ಶ್ರೀಗಳೆಂದರೆ ಸುಖಭೋಜನದ ನಡುವೆ ಹರಳು ಬಂದಂತೆ ಆ ದಿನ ಆವನಿಗೆ ಅನ್ನಿಸಹತ್ತಿತ್ತು. ಮೆಲ್ಲನೆ ಎದೆಸೆಟೆಸಿ ಮಠದಿಂದ ಹೊರಗೆ ಬಂದ.

ಇತ್ತ ಶ್ರೀಗಳು ಎರಡೂ ಕಾಯಿ ಒಡೆಸಿದರು, ಅದರಲ್ಲಿ ಒಂದು ತೊಟ್ಟಿಲಗಾಯಿ ಒಡೆಯಿತು. ದಂಪತಿಗಳ ಸೆರಗಿನಲ್ಲಿ ಹಾಕಬೇಕೆಂದು ಸ್ವಾಮಿಗಳು ನೋಡುತ್ತಿದ್ದರೆ; ಲಿಂಗಪ್ಪ ಹೊರಗೆ ಹೋಗಿ, ಮಠದ ಕಟ್ಟೆಯ ಮೇಲೆ ಕುಳಿತು ಬಿಟ್ಟಿದ್ದಾನೆ ! ಆಶೀರ್ವಾದ ಪಡೆಯಬೇಕೆಂಬ ಗಮನವೇ ಅವನಿಗಿಲ್ಲ. ಅವನಿಗಿದ್ದ ಗಮನವೇ ಬೇರೆ, ವಿಚಾರವೇ ಬೇರೆ. ಈ ರಾದ್ಧಾಂತ ಬೇಗ ಮುಗಿಯಲೆಂದೇ ಆತನ ಸಿದ್ಧಾಂತ !

ಅದೇ ಸಮಯಕ್ಕೆ ಲಿಂಗಪ್ಪನ ತಮ್ಮನಾದ ಮಂಟಪ್ಪನ ಹೆಂಡತಿ ಅಲ್ಲೇ ನಿಂತಿದ್ದಳು. ಅವಳಿನ್ನೂ 'ದೊಡ್ಡವಳು' ಕೂಡಾ ಆಗಿದ್ದಿಲ್ಲ. ಶಿವಯೋಗಿಗಳು ಆ ತೊಟ್ಟಿಲಗಾಯನ್ನು ಅವಳ ಉಡಿಗೇ ಹಾಕಿಬಿಟ್ಟರು !

ಮುಂದೇನು ಕೇಳುವದು ? ಲಿಂಗಪ್ಪನಿಗೆ ಸಲ್ಲಬೇಕಾದ ಆಶೀರ್ವಾದ ಮಂಟಪ್ಪನ ಹೆಂಡತಿಗೆ ಸಲ್ಲಿತು. ಅವಳು ಸ್ವಲ್ಪೇ ದಿನಗಳಲ್ಲಿ ಹಿರಿಯಮನುಷ್ಯಳಾದಳು. ವರ್ಷ ತುಂಬುವ ಒಳಗಾಗಿ ಹೆಣ್ಣುಕೂಸು ಪಡೆದಳು. ಶಿವಯೋಗಿಗೆ ಹಾಡಿ ಹರಸಿ ಹಣ್ಣುಕಾಯಿ ಮಾಡಿಸಿದಳು.

ಇತ್ತ ಲಿಂಗಪ್ಪ ಬಾಯಿ ಬಿಡುತ್ತಲೇ ಕುಳಿತ. ಅತ್ತ ಮಂಟಪ್ಪನ ಬೆಳೆಯುತ್ತಲೇ ನಡೆಯಿತು.

ಹತ್ತು ಜನ್ಮಕ್ಕೊಮ್ಮೆ ಇಂಥ ಶಿವಯೋಗಿಯ ದಿವ್ಯ ಪಾದದ ದರ್ಶನ ಪಾಪಾತ್ಮರಿಗೆ ಆಗುತ್ತದೆ. ಆಗಲಾದರೂ ಎಚ್ಚರಿಕೆ ವಹಿಸಿದರೆ ಪುಣ್ಯಭಾಗಿಗಳಾಗಿ ಸುಖದಿಂದ ಬಾಳಬಹುದು. ಆದರೆ ಪೌರುಷದ ದುರಹಂಕಾರ, ಆತ್ಮ ವಂಚನೆ, ಅನಾಚಾರ, ಹಿರಿಯರ ಬಗ್ಗೆ ತಾತ್ಸಾರ ಭಾವಗಳು ಎಲ್ಲಿಯ ವರೆಗೆ ಇರುವವೋ ಅಲ್ಲಿಯ ವರೆಗೆ ಪಾಪಭಾಂಡಾರ ಬೆಳೆಯುತ್ತಲೆ ಸಾಗುತ್ತದೆ. ಶಿವಯೋಗಿಯ ಪಾದಗಳು ಮಗ್ಗುಲಿಗೇ ಹಾದರೂ ಪಾಪಿಗಳಿಗೆ ಕಾಣ ದೊರೆಯುವದಿಲ್ಲ.

# ಶಿವಯೋಗಿಯ ಆಶೀರ್ವಾದ

ಕುಷ್ಟಗಿಯಲ್ಲೊಂದು ವಿಚಿತ್ರ ಸಂಗತಿಯು ನಡೆದು ಬಿಟ್ಟಿತು. ಆ ಊರಿನ ಪಟ್ಟಣಶೆಟ್ಟಿಯಾದ ಕರಿಬಸಪ್ಪನು ಒಂದು ಸಲ ತನ್ನ ಮೊಮ್ಮಗಳನ್ನು ಶಿವಯೋಗಿಗಳ ಪಾದಕ್ಕೆ ಹಾಕಬೇಕೆಂದು ಎತ್ತಿಕೊಂಡು ಮಠಕ್ಕೆ ಬಂದನು. ಆ ಕೂಸನ್ನು ಶ್ರೀಗಳ ಮುಂದೆ ಅಡ್ಡ ಹಾಕಲು, ಅವರು ಅಂತಃಕರಣಪೂರ್ವಕವಾಗಿ ಕೈಯಾಡಿಸಿ 'ಶುಭಮಸ್ತು' ಎಂದು ಆಶೀರ್ವದಿಸಿದರು.

ಇವನ್ನು ನೋಡುತ್ತ ನಿಂತಿದ್ದ ಅದೇ ಊರಿನ ಕರಿಯಪ್ಪನೆಂಬವನು, ತನ್ನ ಕೈಯಲ್ಲಿದ್ದ ಮೊಮ್ಮಗನನ್ನು ಶ್ರೀಗಳ ಮುಂದೆ ಹಾಕಲು ತಂದನು. ತಾನೂ ತನ್ನ ಮೊಮ್ಮಗನಿಗೆ ಆಶಿರ್ವಾದ ಮಾಡಿಸಬೇಕೆಂಬ ಆಶೆ ಆತನಿಗೆ! ಆದರೆ ಶ್ರೀಗಳು ಆ ಹುಡುಗನನ್ನು ನೋಡಿ— 'ಛೀ, ಕೂಸನ್ನು ಏಕೆ ಇಲ್ಲಿ ತರುತ್ತೀ? ಅಲ್ಲೇ ಇರಲಿ ಬಿಡೋ. ಇಲ್ಲಿ ತರಬೇಡ', ಎಂದು ದೂರಕ್ಕೆ ಕಳಿಸಿಬಿಟ್ಟರು.

ಮುಂದೆ ಆಶಿರ್ವಾದ ದೊರೆಯದಿದ್ದ ಆ ಗಂಡು ಕೂಸು ಕೆಲ ದಿನಗಳಲ್ಲೇ ಸತ್ತುಹೋಯಿತು. ಆಶೀರ್ವಾದ ಪಡೆದ ಹೆಣ್ಣು ಕೂಸು ಬೆಳೆದು ದೊಡ್ಡವಳಾಗಿ ಮದುವೆಯಾಗಿ ಮರಿಮೊಮ್ಮಕ್ಕಳನ್ನು ಕೂಡಾ ಕಂಡಳು.

ಹಾಗಾದರೆ ಆ ಶಿವಯೋಗಿಗಳು ಮೊಮ್ಮಗನಿಗೆ ತಮ್ಮ ಹರಕೆ ಏಕೆ ನೀಡಲಿಲ್ಲ? ಆತ ಬಡವನೆಂದು ಮನ್ನಿಸಲಿಲ್ಲವೆ? ಇವರು ಹರಕೆ ನೀಡಿದ್ದರಿಂದಲೇ ಆ ಕೂಸು ಸತ್ತಿತೇ? ಹಾಗೇನಿಲ್ಲ. ಆ ಕೂಸಿಗೆ ಆಯುಷ್ಯ ಅತ್ಯಲ್ಪವೆಂದು ತಮ್ಮ ದಿವ್ಯಜ್ಞಾನದಿಂದ ಕಂಡುಕೊಂಡ ಶಿವಯೋಗಿಗಳು ವ್ಯರ್ಥವಾಗಿ ಆಶೀರ್ವಾದ ಮಾಡುವ ಗೋಜಿಗೆ ಹೋಗಿರಲಿಕ್ಕಿಲ್ಲ. ಕೇವಲ ಮುಖದರ್ಶನ ಮಾತ್ರದಿಂದಲೇ ಜನರ ಭೂತ ಭವಿಷ್ಯತ್ಕಾಲಗಳ ಗೊತ್ತುಗುರಿಗಳನ್ನು ಅಳಿಯಬಲ್ಲ ಪ್ರವಾದಿ ಅವರಾಗಿದ್ದರು. ಅವರೇನು; ಕಾಲು ಬಿದ್ದವರಿಗೆಲ್ಲ— 'ನೂರುವರ್ಷ ಬಾಳು', 'ಎಂಟು ಮಕ್ಕಳ ಹಡಿ', 'ಊರಿಗೆ ಸರದಾರನಾಗು' ಎಂದು ಆಶಿರ್ವಾದ ಮಾಡಲಿಕ್ಕೆ ನಮ್ಮಂತೆ ಲೌಕಿಕರೆ?

ಇದೇ ಬಗೆಯ ಇನ್ನೊಂದು ವಿಚಿತ್ರ ಸಂಗತಿ. ಬೆನಕನಾಳದ ತರುಣಿಯೊಬ್ಬಳಿಗೆ ಸಂಭವಿಸಿತು. ಅವಳಿಗೆ ಮಕ್ಕಳಿರಲಿಲ್ಲ. ನೆರೆಮನೆಯ ಕೂಸೊಂ

ವನ್ನು ತನ್ನ ಬಗಲೊಳಗೆ ಕೂಡ್ರಿಸಿಕೊಂಡು ಶಿವಯೋಗಿಗಳ ಬಳಿಗೆ ಬಂದು 'ಅಪ್ಪಾ....ನನಗೆ....ಸಂತಾನ ಇಲ್ಲ. ದಯಮಾಡಿರಿ' ಎಂದು ಬೇಡಿಕೊಂಡಳು. ಅದಕ್ಕೆ ಶಿವಯೋಗಿಗಳು ಸಿಟ್ಟಾಗಿ— 'ಬಗಲಲ್ಲಿ ಕೂಸಿದೆ ಮತ್ತೇಕೆ ಬೇಕು ಮಗು?' ಎಂದರು. ಅದನ್ನು ಕೇಳಿ ಅವಳು ಮುಳ್ಳು ತುಳಿದಂತೆ ಪುಟಿಬಿದ್ದು ಕೇಳಿದಳು. 'ಅಪ್ಪಾ ಇದು ನನ್ನ ಮಗನಲ್ಲ. ಮೊದೀದು' ಎಂದಳು. ಶಿವ ಯೋಗಿಗಳು 'ಆಯ್ತು. ಆತನೇ ಮಗನೆಂದು ತಿಳಿ' ಎಂದರು.

ಮುಂದೆ ಅವಳಿಗೆ ಕೊನೆಯ ವರೆಗೂ ಸಂತತಿ ಆಗಲೇ ಇಲ್ಲ. ಹೆರವರ ಮಕ್ಕಳನ್ನೇ ತನ್ನ ಮಕ್ಕಳೆಂದು ಎತ್ತಿಕೊಂಡು ತಿರುಗುವದೇ ಅವಳ ಜೀವನ ವಾಯಿತು!

ಶಿವಯೋಗಿಗಳ ಆಶೀರ್ವಾದವೆಂದರೆ ಸಿಕ್ಕವರಿಗೆ ಸಿಕ್ಕ ಸಮಯದಲ್ಲಿ ಸಿಗಲಿಕ್ಕೆ ಅದೇನು ಊಟದ ಉಪ್ಪಿನಕಾಯಿಯೋ? ಅದಕ್ಕೂ ದೈವಯೋಗ ಬೇಕು.

# ಕುಷ್ಟಗಿಯಲ್ಲಿ ಭರಪೂರ ಬೆಳೆ !

ತಾರುಣ್ಯ, ಜನನ, ಮರಣ, ಭೋಗ, ರೋಗ, ಬಡತನ, ಸ್ತ್ರೀಸುಖ, ಐಶ್ವರ್ಯ, ವೈರಾಗ್ಯ ವ್ಯಾಮೋಹಗಳು ನರರ ಕೈಯಲ್ಲಿಲ್ಲ. ಶಿವನ ಕೈಯಲ್ಲಿವೆ. ಇವು ಯಾವ ಸಮಯದಲ್ಲಿ ಏನು ಮಾಡಿಸುತ್ತವೆ ಹೇಳಲು ಬರುವಂತಿಲ್ಲ.

ಒಂದು ಸಲ ಶಿವಯೋಗಿಗಳು ಕುಷ್ಟಗಿಗೆ ದಯಮಾಡಿಸಿದ್ದಾರೆ. ಇಡೀ ಊರಿಗೆ ಊರೇ ಮಹಾಸಂಭ್ರಮದಲ್ಲಿ ತುಂಬಿಹೋಗಿದೆ. ಕಾರಣ ಆ ವರ್ಷ ಮಳೆ ಸಮೃದ್ಧಿಯಾದ ಬೆಳೆ, ಒಂದು ಚೀಲ ಬೆಳೆಯುವ ರೈತ ಹತ್ತು ಚೀಲ ಬೆಳೆಯುವಷ್ಟು ಪೈರು ಪರಿಪುಷ್ಟವಾಗಿ ಕೊಬ್ಬಿ ಕೊನೆವಾಯ್ದು ನಿಂದಿದೆ, ಎಲ್ಲಿ ನೋಡಿದಲ್ಲಿ ಹಸಿರೇ ಹಸಿರು. ಅನೇಕರು–'ಈ ವರ್ಷ ಲಗ್ನದ ಸಾಲ ಹರಿದ ರಾಯ್ತು' 'ಮಗನ ಮದುವಿ ಮಾಡಿದರಾಯ್ತು' 'ಹುಡಿಗಿ ಬಾಣಂತನದ ಖರ್ಚು ಹೊರಟಿತು' 'ಬಂಗಾರ ದಾಗಿನ ಭರಪೂರ ಕೊಳ್ಳೊದು 'ಸೀಮೀ ಎತ್ತು ತರಿಸೂನು' ಎಂದು ಲೆಕ್ಕಹಾಕಿದ್ದರು. ಧನಲಕ್ಷ್ಮಿಯೆ ಒಲಿದು ಬಂದಿರುವಳೆಂದ ಮೇಲೆ ಅವರು ಆನಂದ ಪಡುವದು. ಸ್ವಾಭಾವಿಕವೂ ಇದೆ. ಯೋಗ್ಯವೂ ಇದೆ.

ಶಿವಯೋಗಿಗಳು ಕುಷ್ಟಗಿ ಮಠಕ್ಕೆ ದಯಮಾಡಿಸಿದರು. ಭಕ್ತರೆಲ್ಲ ಶ್ರೀಗಳ ದರ್ಶನಾರ್ಥ ಇರುವೆಯ ಜಾಡಿನಂತೆ ಬಂದು ಕೂಡಿದರು. ಎಲ್ಲರ ಮೊಗದಲ್ಲಿ ಆನಂದ. ಎಲ್ಲರ ಮೊಸೆಯ ಮೇಲೂ ಕಳೆ. ಎಲ್ಲರ ತುಟಿಯಲ್ಲೂ ಮುಗುಳ್ನಗೆ–'ಶಿವಯೋಗೀಶ್ವರರೆ, ತಮ್ಮ ಕೃಪೆಯಿಂದ ಈ ವರ್ಷ ಮಳೆ-ಬೆಳೆ ಭರಪೂರ ಇದೆ. ಇನ್ನೂ ನಾಲ್ಕು ವರ್ಷ ಉಂಡರೂ ಸವಿಯದಷ್ಟು ಬೆಳೆ ಬರುತ್ತದೆ' ಎಂದರು.

ಆ ಮಾತು ಕೇಳಿ ಶಿವಯೋಗಿಗಳು ಹೇಳಿದರು—

'....ನಿಮ್ಮೂರಿನ ಬೆಳೆ ಚೆನ್ನಾಗಿದೆ. ಆದರೆ ನಿಮ್ಮ ಕೈಗೆ ಹತ್ತುವದಿಲ್ಲ. ಸುಮ್ಮನೆ ನಂಬಿ ಮೋಸ ಹೋಗಬೇಡಿರಿ' ಎಂದರು.

ಶಿವಯೋಗಿಗಳ ಮಾತು ಕೇಳಿ ಅನೇಕರು ತಮ್ಮ ಭವಿಷ್ಯದ ಬಗ್ಗೆ ಚಿಂತಿಸಿದರು.

ವಿಜಯ ಮಹಾಂತ ಸ್ವಾಮಿಗಳು– 'ಬೆಳೆ ನಿಮ್ಮ ಕೈಗೆ ಹತ್ತುವದಿಲ್ಲ' ಎಂದು ಯಾವ ಕ್ಷಣಕ್ಕೆ ಅಂದರೊ ಅದೇ ಕ್ಷಣದಿಂದ ಮಳೆ ಹೋಗಿಬಿಟ್ಟಿತು. ಆಕಾಶದಿಂದ ಹನಿ ನೀರು ಪಟ್ಟನೆ ಬೀಳಲಿಲ್ಲ. ತುಂಬಿದ ಬಸುರಿಯರಂತೆ ನಿಂತ ಹೊಡೆಹಾಯಲು ಬಂದ ಜೋಳದ ದಂಟುಗಳು ಗಳಗಳನೇ ಒಣಗಿದವು. ಕೊನೆಗೆ ಯೋಗಿಯ ಮಾತೇ ಮಂತ್ರವಾಯಿತು. ಒಂದು ಕಾಳು ಕೂಡ ಒಕ್ಕಲಿಗರಿಗೆ ದಕ್ಕಲಿಲ್ಲ. ಭೀಕರ ಬರಗಾಲ ಸುರಿಯಿತು. ಸಾಲ ಹೆಚ್ಚಾಯಿತು. ರೊಕ್ಕ ಕೊಟ್ಟರೂ ಕಾಳಿಗೆ ಗತಿ ಇಲ್ಲವಾಯಿತು. ಅರಗೂಳು ಹೋಗಿ ಅಂಬಲಿಗೂ ಗತಿಹತ್ತಲಿಲ್ಲ. ದನಕರುಗಳು ಸತ್ತವು. ಮಕ್ಕಳು ಮರಿ ಸೊರಗಿ ಸಣ್ಣಾದವು. ಅನೇಕರು ಮಕ್ಕಳನ್ನು ಮಾರಿದರು. ತೌಡನ್ನು ತಿಂದರು, ಸಿಕ್ಕದ್ದನ್ನು ಸವಿದರು. ಶಿವಯೋಗಿಗಳು ಶಿವವಾಣಿ ಸತ್ಯವನ್ನು ಹಡೆಯದೇ ಸುಳ್ಳನ್ನು ಹೆತ್ತೀತೆ ?

# ಮಾಂತಪ್ಪನ ಕಲ್ಲುತೊಲೆ

ವಿಜಯ ಮಹಾಂತ ಶಿವಯೋಗಿಗಳು ಕರ್ಮನಿರತರಾದಾಗ ಒಮ್ಮೊಮ್ಮೆ ಏನಾದರೂ ಕೊರತೆ ಬಿದ್ದರೆ ತಕ್ಷಣ ಭಕ್ತರನ್ನು ಬೇಡಿ ತರಿಸುತ್ತಿದ್ದರು. ಮತ್ತೆ ಆ ವಸ್ತುಗಳನ್ನು ಕಡ ತೀರಿಸಿದಂತೆ ಕೊಡುತ್ತಿದ್ದರು. ಬೇಡುವವನೂ ಸಂಗಮ ದೇವ, ನೀಡುವವನೂ ಸಂಗಮದೇವನಲ್ಲವೆ?

ಆದರೆ ಈ ಸಂಗಮದೇವರಲ್ಲಿ ಕೆಲವರು ಸೆಡವಿನ ದೇವರೂ ಇದ್ದರು. ಹಿರಿಯ ಬಾದವಾಡಗಿಯಲ್ಲಿ ಶಿವಯೋಗಿಗಳು ಮಠವನ್ನು ಕಟ್ಟಿಸುವ ಕಾರ್ಯ ದಲ್ಲಿ ನಿರತರಾಗಿದ್ದಾರೆ. ಎಲ್ಲ ಸಲಕರಣೆಗಳೂ ಸಿದ್ಧವಾಗಿವೆ. ಇಪ್ಪತ್ತು ಜನ ಗಂಡಾಳುಗಳೂ ಹದಿನೈದು ಜನ ಹೆಣ್ಣಾಳುಗಳೂ ಉರಿಬಿಸಿಲಿನಲ್ಲಿ ಕಟ್ಟುತ್ತಿ ದ್ದಾರೆ. ಇನ್ನೇನು ಮಾಡುವದೆಂದು ಶಿವಯೋಗಿಗಳು ಚಿಂತಿಸಿದರು. ಅದೇ ಊರಿನ ಮಹಾಂತಪ್ಪನ ಮನೆಯ ಅಂಗಳದಲ್ಲಿ ಅದೇ ಅಳತೆಯ ಕಲ್ಲು ಬಿದ್ದಿ ರುವುದು ಭಕ್ತರಿಗೆ ಗೊತ್ತಾಗಿ ಶಿವಯೋಗಿಗಳಿಗೆ ಅರಿಕೆ ಮಾಡಿದರು. ಸ್ವಾಮಿ ಗಳು ಅದನ್ನೇ ಕೇಳಿ ತರಲು ಸೂಚಿಸಿದರು.

ಶ್ರೀಗಳ ಹೇಳಿಕೆಯಂತೆ ಭಕ್ತರು ಮಹಾಂತಪ್ಪನ ಮನೆಗೆ ಹೋದರು. ಆದರೆ ಆತ ಹೊಲಕ್ಕೆ ಹೋಗಿದ್ದಾನೆಂದು ತಿಳಿದು ನಿರುತ್ಸಾಹಿತರಾಗಿ ಬಂದರು. ಆಗ ಶಿವಯೋಗಿಗಳು, ಮಹಾಂತಪ್ಪನು ತಮ್ಮ ಶಿಷ್ಯನೆಂಬ ಸತ್ತೆಯಿಂದ ಸ್ವಲ್ಪ ಸ್ವಾತಂತ್ರ್ಯವಹಿಸಿ ಆ ಕಲ್ಲ ತೊಲೆಯನ್ನು ತೆಗೆದುಕೊಂಡು ಬರಲು ಹೇಳಿದರು. ಮರಳಿ ಆತನಿಗೆ ಮುಟ್ಟಿಸಿದರಾಯಿತು ಎಂದರು. ಕಾರಣ ಆ ಕಲ್ಲುತೊಲೆ ಇಲ್ಲದಿದ್ದರೆ ಮಠದ ಕೆಲಸವೆ ಅರ್ಧಕ್ಕೆ ನಿಲ್ಲುವ ಪರಿಸ್ಥಿತಿ ಉಂಟಾಗಿತ್ತು.

ಇತ್ತ ಆಳುಗಳು ಅದನ್ನು ಹೊತ್ತುಕೊಂಡು ಬಂದು ಬಾಗಿಲ ಮೇಲೆ ಕೂಡ್ರಿಸಿ ಅದರ ಮೇಲೆ ಗೋಡೆ ಏರಿಸಹತ್ತಿದರು. ಅತ್ತ ಸುದ್ದಿ ತಿಳಿದು ಮಹಾಂತಪ್ಪ ಉರಿಯುತ್ತಲೇ ಬಂದ. ಸ್ವಾಮಿಗಳ ಎದುರಿಗೇ ನಿಂತು, ಅವರು ಕಂಡರೂ ಕಾಣದಂತೆ ಬೇರೆ ಕಡೆಗೆ ಮುಖ ತಿರುವಿ ಆ ಆಳುಗಳಿಗೆ ಗದರಿಸುತ್ತ—

'ಲೇ........ಯಾರ ಅವಾ ನಮ್ಮ ಕಲ್ಲು ತರಿಸಿದವಾ? ನಮ್ಮ ಮನ್ಯಾಗ

ಯಾರಾಷ್ರೂ ಸತ್ತಿದ್ರು ಅಂತ ತಿಳಿದೀರೇನಲೇ? ಹೇಳದೆ ಕೇಳದೆ ತರಲಿಕ್ಕೆ ನಿಮಗೇನು ಧಾಡಿ ಆಗಿತ್ತು? ನಿಮ್ಮಂಥ ದೊಡ್ಡೋರ ಅನಿಸಿಕೊಂಬೋರು ಇಂಥಾ ಕೆಲಸಾ ಮಾಡಬಾರ್ದು. ಏನು ಊರೊಳಗೆ ಬಡವರು ಬದಕಬೇಕೊ ಬವಕಬಾರ್ದೊ?'

ಎಂದು ಅರಚುತ್ತಲೇ ಖ್ಯಾಕರಿಸಿ ಉಗುಳಿ ಹೋಗಿಬಿಟ್ಟ. ಶಿವಯೋಗಿಗಳಿಗೆ ಬಹಳ ನೋವಾಯಿತು. ಅಷ್ಟರಲ್ಲಿ ಗೋಡೆ ನಾಲ್ಕು ಮೊಳ ಎತ್ತರ ಏರಿಬಿಟ್ಟಿತ್ತು. ಆದರೂ ಅವರು ಕೇಳಲಿಲ್ಲ. ಗೋಡೆಯನ್ನು ಮತ್ತೆ ಕೀಳಿಸಿ, ಆ ಕಲ್ಲನ್ನು ತೆಗೆಸಿ, ನಾಲ್ಕು ಆಳುಗಳ ಮೇಲೆ ಹೊರಿಸಿ ಮಾಂತಪ್ಪನ ಮನೆಗೆ ಕಳಿಸಿಯೇಬಿಟ್ಟರು.

ಮುಂದೆ ಮೂರೆ ದಿನಗಳಲ್ಲಿ ಮಾಂತಪ್ಪನ ರತಿದೇವಿಯಂಥ ಹರೆಯದ ಹೆಂಡತಿ ಸತ್ತುಹೋದಳು. ಆತ ಅದೇ ಕಲ್ಲು ತೊಲೆಯ ಮೇಲೆಯೇ ಕುಳಿತು ಎದೆಬಾಯಿ ಜಜ್ಜಿಕೊಂಡು ಬಿದ್ದಾಡಿ ಅತ್ತ. ಮುಂದೆ ಅವನ ವಂಶವೆ ಅಳಿದು ಹೋಯಿತು. ಮನೆತುಂಬ ಧನಧಾನ್ಯ ಇದ್ದವರೂ ಸಾಲಾಮೂಲಿಗೆ ತುತ್ತಾದರು. ಇಳಿಯುತ್ತ ಹೋದ ಆ ಮನೆತನ ಕೊನೆಗೆ ಎಂದಿಗೂ ಏಳಿಗೆ ಆಗಲಿಲ್ಲ.

# ದುರ್ಜನರ ಸಂಗವದು ಭಂಗವಯ್ಯಾ

ಎಡಹಳ್ಳಿಯ ಬಾಲನಗೌಡನೂ ಮೂರಾಣೆ ಭಕ್ತಿಯುಳ್ಳವನು. ಭಕ್ತಿ ಯೆಂಬುದು ಕೈಗೊಲಿಯೆ? ಆದರೆ ಅನೇಕ ಭಕ್ತರು ಒಂದು ಭಕ್ತಿಗೆ ಹತ್ತು ವರವನ್ನು ಕೇಳುತ್ತಾರೆ. ಎಲ್ಲಿಂದ ಕೊಡಬೇಕು? ಒಂದೇ ಒಂದು ಊದಿನ ಕಡ್ಡಿ ಬೆಳಗಿ — 'ನಮಗೆ ಗಂಡುಮಕ್ಕಳನ್ನು ಕೊಡು, ಕೋರ್ಟಿನ ನ್ಯಾಯಾ ಬಗೇಹರಿಸು. ಹೊಟ್ಟೆ ಬಟ್ಟೆಗೆ ಸುಖಾಕೊಡು, ನಮ್ಮ ವೈರಿಗಳನ್ನು ಸತ್ಯಾ ನಾಶಮಾಡು. ಹೆಣ್ಣುಮಕ್ಕಳ ಮದುವಿ ಮಾಡು' ಎಂದು ಕೇಳುವ ಜನ ಎಷ್ಟಿಲ್ಲ? ಶಿವನನ್ನು ನೆನೆಯುವದಂದರ ಬೇಡುವದಕ್ಕೆಂದೇ ಅರ್ಥ ಹಚ್ಚು ಹಚ್ಚುತ್ತಾರೆ. ಹಲವು ಸಲ ಇಂಥವರ ಮನಸ್ಸು ಸೋಸಿ ನೋಡಲು ಶಿವನೂ ಹರ-ಗುರು-ಚರಮೂರ್ತಿಗಳ ಬಾಯಿಂದ ಏನಾದರೂ ಕೇಳಿ ಮೋಜು ಮಾಡುತ್ತಾನೆ. ಆಗ ಹಾಲಾದರೆ ಸೋಸಿ ಹೋದೀತು. ಕೆಸರಾದರೆ ಸೋಸಲು ಸಾಧ್ಯವೆ ?

ಇದು ಎಡಹಳ್ಳಿ ಬಾಲನಗೌಡನದೇ ಸಮಾಚಾರ. ಶ್ರೀಗಳು ಮಠದ ಕಾರ್ಯಾರ್ಥವಾಗಿ ಆ ಗ್ರಾಮಕ್ಕೆ ಹೋಗಬೇಕಾಗಿ ಬಂತು. ಭಕ್ತರಿಂದ ಅವರು ದುಡ್ಡನ್ನು ಕೇಳುವದು ಕಡಿಮೆ. ಶ್ರೀಮಂತರ ಬಳಿ ದವಸ-ಧಾನ್ಯ, ಕಟ್ಟಿಗೆ ಕಲ್ಲು ಮೊದಲಾದವುಗಳನ್ನು ಭಿಕ್ಷಾ ಮಾಡುತ್ತಿದ್ದರು. ಬಾಲನಗೌಡನ ಮನೆ ಯಲ್ಲಿ ಒಂದು ಗಟ್ಟಿಮುಟ್ಟಾದ ಕೊರಸಿದ ಕಟ್ಟಿಗೆ ತೊಲಿ ಇತ್ತು. ಶ್ರೀಗಳು ಅದನ್ನು ತಮ್ಮ ಮಠಕ್ಕೆ ಕೇಳಿದರು. ಗೌಡನಿಗೇನು ಕಡಿಮೆ ? ಇಂಥ ಸಾವಿರ ತೊಲಿಗಳನ್ನು ಕೊಡುವಷ್ಟು ಕೂವತ್ತು ಇತ್ತು. ಆದರೂ ದಾನಮಾಡುವ ಪ್ರವೃತ್ತಿ ಬೇಕಲ್ಲ, ಮೆಲ್ಲನೆ ಉತ್ತರಿಸಿದ.

'ಬುದ್ಧೀ........ನಾನು ಬಾವಿ ಅಗಿಸಲಿಕ್ಕೆ ಹತ್ತಿದ್ದೇನೆ. ಆ ತೊಲಿ ಬಾವಿಗೆ ಇಟ್ಟಿದ್ದೇನೆ. ಈಗ ಕೊಡುವದು ಆಗುವದಿಲ್ಲ' ಎಂದ.

ಶ್ರೀಗಳು ಯಾವಾಗಲೂ ಒಮ್ಮೆ ಕೇಳುವವರು. ಎರಡು ಮಾತನ್ನು ಅವರು ಜೀವನದಲ್ಲೇ ಅರಿಯರು. ಅದು ಸನ್ಯಾಸಧರ್ಮಕ್ಕೆ ವಿರೋಧ ವಲ್ಲವೆ ? ಆತನ ಮಾತಿಗೆ ಹೇಳಿದರು—

'ಹಾಗಾದರೆ ಬಾವಿ ನೀನೆ ಕಟ್ಟಿಸಿಕೋಪಾ' ಎಂದರು. ತಾವು ಮುಂದೆ ಪ್ರಯಾಣ ಬೆಳೆಸಿದರು.

ಗೌಡ ಆ ಬಾವಿಯನ್ನು ಸಾವಿರಾರು ರೂಪಾಯಿ ಖರ್ಚು ಮಾಡಿ ಪೂರ್ಣವಾಗಿ ಕಟ್ಟಿಸಿದ. ಒಂದೇ ತಿಂಗಳಲ್ಲಿ ಕುಸಿದು ಬಿದ್ದುಬಿಟ್ಟಿತು. ಗೌಡನ ತಲೆ ಪರಟಿ ಸಿಡಿದು ಹೋಗುವಷ್ಟು ಚಿಂತೆ ಮುಸುಕಿತು, ಮತ್ತೆ ಮುಚ್ಚಿ ಬಿದ್ದ ಬಾವಿಯನ್ನು ತೆಗೆಸಿ, ಬಹು ಪ್ರಯಾಸದಿಂದ ಕಟ್ಟಿಸಿದ. ಎರಡನೇ ಸಲವೂ ಉರುಳಿ ಬಿತ್ತು ! ಊರಿಗೆಲ್ಲ ಗೌಡನ ಬಾಳೆ ನಗೇಡಾಯಿತು. 'ಶಿವಯೋಗಿಗಳಿಗೆ ತೊಲಿ ಕೊಡದ್ದಕ್ಕೆ ಈತನ ತಲಿ ಹೋಗಲಿಕ್ಕೆ ಹತ್ತಿದೆ'ಯೆಂದು ಎಲ್ಲರೂ ಆಡಿದರು. ಇನ್ನು ನಾಲ್ಕು ಮಂದಿಯಲ್ಲಿ ಅಪಮಾನವಾಗುತ್ತದೆಯೆಂದು ಗೌಡ ಆ ಬಾವಿಯನ್ನು ತಳಪಾಯ ಮೊದಲು ಮಾಡಿ ಅಗೆಸಿ, ಗಚ್ಚು-ಕಲ್ಲು ಹಾಕಿ ಮೂರನೇ ಸಲ ಕಟ್ಟಿಸಿದ. ಒಂದೇ ಒಂದು ಮಳೆಗೆ ಅದೂ ಬಿದ್ದಿತು !! ಕೊನೆಗೆ ಆಶೆಯನ್ನೇ ಬಿಟ್ಟು, ಬಿದ್ದ ಬಾವಿಗೆ ಕೈ ಮುಗಿದು, ಮನೆಯಲ್ಲಿ ತಲೆಗೆ ಕೈ ಇಟ್ಟು, ಕುಳಿತುಕೊಂಡ !

ಆದರೆ ಗೌಡನಿಗೆ ಮೂರೇಟು ಬಿದ್ದರೂ ಬುದ್ಧಿ ಬರಲಿಲ್ಲ. ಆತನ ಕಥೆ ಮತ್ತೆ ಮುಂದುವರಿದೇ ಬಿಟ್ಟಿತು. ಶಿವಯೋಗಿಗಳು ಅದೇ ಗ್ರಾಮಕ್ಕೆ ಮರು ವರ್ಷ ಭಿಕ್ಷೆಗೆ ಬಂದರು. ಅವರು ಯಾವುದೇ ಊರಿಗೆ ಭಿಕ್ಷೆಗೆ ಹೋದರೆ ಮಠದಲ್ಲಿ ಕುಳಿತು, ಊರಿನ ಸದ್ಭಕ್ತರನ್ನೆಲ್ಲ ತಮ್ಮಲ್ಲಿ ಬರಮಾಡಿಕೊಳ್ಳುವದು ವಾಡಿಕೆ. ಹಾಗೆಯೆ ಆ ಊರಿನ ಮಠದಲ್ಲಿ ಕುಳಿತು ಗ್ರಾಮದ ಪ್ರಮುಖರನ್ನೆಲ್ಲ ಬರಮಾಡಿಕೊಂಡರು. ಇವರು ಅಪ್ಪಣೆ ನೀಡಲು ಎಲ್ಲ ಜನರೂ ಸೇರಿದರು. ಆಗ ಶಿವಯೋಗಿಗಳು ಕೂಡಿದ ಮಂದಿಗೆ—

'ಎಲ್ಲರೂ ಬಂದರೆ ?'

ಎಂದು ಕೇಳಿದರು.

ಕೂಡಿದವರು—

'ಬಂದಿದ್ದೇವೆ ಬುದ್ಧೀ. ಬಂದಿದ್ದೇವೆ. ಆದರೆ ಒಬ್ಬ ಮಾತ್ರ ಬರಲಿಲ್ಲ'

'ಯಾರು ?'

'ಅವನೇ ಬಾಲನಗೌಡ ಬುದ್ಧಿ'

'ಯಾಕೆ ಬರಲಿಲ್ಲ ?'

'ನಿಮ್ಮಿಂದ ಮೂಗೊಡೆದುಕೊಂಡರೂ ಇನ್ನೂ ಅವನ ಬಾಲ ಪೊಂಡಾಗಿಲ್ಲ ಬುದ್ಧೀ ಅದಕ್ಕೇ....! ಆ ಕಾಗಿ ಕರೆಸಬೇಡಿರಿ ಬುದ್ಧಿ, ಅದು ಜೀನತನದ ಜಾತೆ.'

ಆಗ ಶ್ರೀಗಳು ಹೇಳಿದರು—

'ಕರೆಯಬೇಡಿರಿ ಅವನನ್ನು. ನೀವಿಷ್ಟು ಭಿಕ್ಷೆ ನೀಡಿದರೆ ಸಾಕು'

ಈ ಮಾತು ಶಿವಯೋಗಿಗಳು ನುಡಿದು ಹದಿನೈದು ದಿನಗಳು ಜಾರಿರಲಿಲ್ಲ. ಬಾಲನಗೌಡನ ಮಗನು ಅದೇ ಬಿದ್ದ ಬಾವಿಯ ಕಲ್ಲೊಂದನ್ನು ತರ ಹೋಗಿ ಮೈಮೇಲೆ ಹಾಕಿಕೊಂಡನು. ಬಿದ್ದ ಸ್ಥಾನದಲ್ಲೇ ಪ್ರಾಣಬಿಟ್ಟನು. ಬಾಲನಗೌಡನ ಬಾಲ (ಕ) ಸಂಪೂರ್ಣ ಮುರಿದು ಹೋಯ್ತು. ಆದರೆ ಆ ಬಾಲದ ಬೇರು ಇನ್ನೂ ಬೆನ್ನಲ್ಲಿ ಉಳಿದಿತ್ತೆಂದು ಕಾಣುತ್ತದೆ! ಆತ ಕೊನೆಯವರೆಗೂ ಸುಧಾರಿಸಲಿಲ್ಲ.

# ಬೆಳಗಲ್ಲ ಕುಲಕರ್ಣಿಯ ಫಜೀತಿ

ಶಿವಯೋಗಿಗಳು ಕೆಲವು ಸಲ ಮಠದ ಕಾರ್ಯಕ್ಕೆ ಕಲ್ಲು ಹೊರಿಸಿ ಕೊಂಡು ಬರಲು ತಾವೆ ಬಂಡಿಯವರೊಂದಿಗೆ, ಕುದುರೆ ಹತ್ತಿ ಗುಡ್ಡಕ್ಕೆ ಹೋಗುತ್ತಿದ್ದರು. ಒಂದು ಸಲ ಇದೇ ಪರಿಸ್ಥಿತಿ ಉಂಟಾಯಿತು. ಚಿತ್ರರಗಿಯ ಮಠಕ್ಕಾಗಿ ಕಲ್ಲುಗಳನ್ನು ತರಲು ಭಕ್ತರ ಐದಾರು ಬಂಡಿಗಳನ್ನು ತೆಗೆದು ಕೊಂಡು ಬೆಳಗಲ್ಲ ಊರಿಗೆ ದಯಮಾಡಿಸಿದರು. ಅಲ್ಲಿ ಗುಡ್ಡದ ಕಲ್ಲು ತೊಲೆ ಗಳನ್ನು ಹೇರಿಸಿಕೊಂಡು ಬರುವಾಗ ಬೆಳಗಲ್ಲ ಕುಲಕರ್ಣಿಯು ಬಂಡಿಗಳನ್ನು ತರುಬಿ ನಿಲ್ಲಿಸಿ ಅವುಗಳ ತೆರಿಗೆ ಕೇಳಿದನು. ಆದರೆ ಆಗಿನ ಕಾಲದಲ್ಲಿ ಮಠದ ಕಾರ್ಯಕ್ಕೆ ಯಾರೂ ತೆರಿಗೆ ವಗೈರೆ ಆಕರಿಸುತ್ತಿದ್ದಿಲ್ಲ. ಆದರೆ ಆ ಕುಲಕರ್ಣಿ ಪಟ್ಟುಹಿಡಿದು ತೆರಿಗೆ ಕೊಟ್ಟೇ ಮುಂದೆ ಹೋಗಬೇಕೆಂದು ಆಗ್ರಹಪಡಿಸಿದ. ಇವು ಚಿತ್ತರಗಿ ಮಠದ ಬಂಡಿಗಳೆಂದು, ಬಂಡಿಯವರು ಹೇಳಿದರು. ಮಠದ ಬಂಡಿಗಳೆಂದು ಕೇಳಿದ ಕೂಡಲೆ ಆತನ ಮೂಗು ಮತ್ತಷ್ಟು ಮೇಲಾಯಿತು. ಗಾಡಿಗಳನ್ನು ಮುಂದೆ ಬಿಡಲೇ ಇಲ್ಲ.

ಹಿಂದಿನಿಂದಲೇ ಶಿವಯೋಗಿಗಳು ತಮ್ಮ ಕುದುರೆಯ ಮೇಲೆ ಮೆಲ್ಲನೆ ಬಂದರು. ಈ ಕುಲಕರ್ಣಿ ಬಂಡಿಗಳನ್ನು ತರುಬಿದ್ದನ್ನು ನೋಡಿ ಆತನಿಗೆ ಹೇಳಿದರು --

'ಕುಲಕರ್ಣಿ, ಇವು ನಮ್ಮ ಮಠದ ಬಂಡಿಗಳು. ಮನೆಮಾರು ಕೆಲಸದ ಗಾಡಿಗಳಲ್ಲ, ಬಿಟ್ಟುಬಿಡಿ.'

'ಇಲ್ಲಿ ಮಠಾ-ಮನಿಯೆಂದು ಭೇದ ಇಲ್ಲ. ಯಾರಾದರೂ ಸರಿ. ಇಲ್ಲಿ ತೆರಿಗೆ ತೆತ್ತೇ ಹೋಗಬೇಕು' ಎಂದ.

ಆಗ ಶಿವಯೋಗಿಗಳು—

'ಆಗಲಿ, ನಿನ್ನ ಮಾತೇ ನಡೆಯಲಿ. ಈ ತೆರಿಗೆ ತೆಗೆದುಕೋ. ಉತ್ತರ ಕ್ರಿಯೆಗೆ ಅನುಕೂಲವಾದೀತು.' ಎಂದು ಕೊಟ್ಟರು. ಆತ ಆ ತೆರಿಗೆ ಸರಕಾರಕ್ಕೆ ಸೇರಿಸದೆ ಜೇಬಿಗೆ ಸೇರಿಸಿದ.

ಬಂಡಿಗಳು ಮುಂದೆ ಸಾಗಿದವು. ಆದರೆ ಮರುದಿನವೇ ಆ ಕುಲಕರ್ಣಿಯ ತಮ್ಮ ಆಕಸ್ಮಿಕವಾಗಿ ಸತ್ತುಹೋದ. ಆತನ ಉತ್ತರ ಕ್ರಿಯೆಗೆ ಅವನಲ್ಲಿ ದುಡ್ಡು ಇರಲಿಲ್ಲ. ಶಿವಯೋಗಿಗಳು ಕೊಟ್ಟ ದುಡ್ಡನ್ನೇ ಶವಯಾತ್ರೆಗೆ ಬಳಸಬೇಕಾಯಿತು!

ಶಿವಯೋಗಿಗಳ ಮಾತೆಂದರೆ ಸತ್ಯದ ಶಾಸನದ ಮೇಲೆ ನಿತ್ಯದ ಲೆಕ್ಕಣಿಕೆಯಿಂದ ಕೆತ್ತಿದಂತೆ !

# ಯೋಗಿ ಇರ್ದ ನೆಲ ಸುಕ್ಷೇತ್ರ

ಒಂದು ಸಲ ಮಾರಿಕಾದೇವಿ ಚಿತ್ತರಗಿಗೇ ಮುತ್ತಿಗೆ ಒಗೆದಳು.ಮಾರಿಕಾ ಬೇನೆಯಿಂದ ಆ ಗ್ರಾಮ ತತ್ತರಿಸಿ ಹೋಯಿತು. ಓಣಿ ಓಣಿಗೆ ಹೆಣಗಳು ಇಲಿ ಸತ್ತಂತೆ ಬೀಳಹತ್ತಿದವು. ಜನ ಹೌಹಾರಿತು. ಆಗ ಊರಿನ ಪ್ರಮುಖರು ಮಠಕ್ಕೆ ಓಡಿಬಂದು ಶಿವಯೋಗಿಗಳಿಗೆ ಬಿನ್ನವಿಸಿಕೊಂಡರು—

'ಪ್ರಭುವೇ, ಇದು ನಿನ್ನಂಥ ಶಿವಯೋಗಿ ವಾಸಮಾಡಿದ ಪಾವನಕ್ಷೇತ್ರ. ಶಿವಯೋಗಿಗಳಿದ್ದಲ್ಲಿ ಮಾರಿ, ಮೈಲಿ ಮೊದಲಾದ ರೋಗಗಳು ಕಾಲಿಡುವದಿಲ್ಲ ವೆಂದು ಕೇಳಿದ್ದೇವೆ. ಮಹಾತ್ಮರು ಹೇಳಿದ ಈ ವಾಕ್ಯ ಸುಳ್ಳೇ ?'

ಶಿವಯೋಗಿಗಳು ಸಹಜವಾಗಿಯೇ ಉತ್ತರಿಸುತ್ತ —

'ಊರ ಜನರಿಗೆ ಬೇಡವಾದರೆ ಆ ಮಾರಿ ಊರೊಳಗೆ ಇರುವದೇ ಬೇಡ. ನಾಳೆಯೇ ಇಲ್ಲಿಂದ ಬೇರೆ ಕಡೆಗೆ ಹೋಗುವಳು. ನೀವಾರೂ ಅಂಜ ಬೇಡಿರಿ. ಅವಳು ಹೋದ ಸುದ್ದಿಯನ್ನು ನಾಳೆ ಮೂರು ತಾಸಿಗೆ ನಿಮಗೆ ಹೇಳುತ್ತೇವೆ'

ಅದೇ ದಿನ ರಾತ್ರಿ ಶಿವಯೋಗಿಗಳು ಭೇರಿ ಜಾಗಟೆಗಳ ಭಾರೀ ಸದ್ದನ್ನು ಮಠದಲ್ಲಿ ಮಾಡಿಸುತ್ತ, ಮೂರು ತಾಸು ಉಗ್ರ ಲಿಂಗಪೂಜೆ ಮಾಡಿದರು. ಅಷ್ಟೇ ಅಲ್ಲದೆ, ಪ್ರತಿ ದಿನದಂತೆ ಅವರು ಗುರುಮಠದಲ್ಲಿ ಮಲ ಗುವದನ್ನು ಬಿಟ್ಟು ಆ ದಿನ ರಾತ್ರಿ ಹೆಬ್ಬಾಗಿಲಿನ ಮುಂದೆ ಮಂಚದ ಮೇಲೆ ಮಲಗಿದರು.

ಅವರು ಮಾರಿಗೆ ಏನು ಹೇಳಿದರೋ, ಅವಳು ಅವರಿಂದ ಏನು ಕೇಳಿದಳೋ ಯಾರಿಗೆ ಗೊತ್ತು ? ಯೋಗಿಯ ನಿಲುವು ಯೋಗಿಗೇ ಗೊತ್ತು. ಆತನ ಎತ್ತರವನ್ನು ಸಾಮಾನ್ಯರು ಅಳೆಯುವದು ಸಾಧ್ಯವೆ ?

ಮರುದಿನ ಶಿವಯೋಗಿಗಳು ಯಥಾ ಪ್ರಕಾರ ಲಿಂಗಪೂಜೆ ಮಾಡಿ ಕೊಂಡು, ತಾವು ವಚನ ಕೊಟ್ಟಂತೆ ಮೂರುತಾಸು ಸಮಯಕ್ಕೆ ಎಲ್ಲರನ್ನೂ ಬರಮಾಡಿಕೊಂಡರು. ಬಂದ ಎಲ್ಲ ಭಕ್ತರಿಗೂ ಹೇಳಿದರು—

'ಇನ್ನು ಅಂಜಬೇಡಿರಿ. ಈ ದಿನ ಮುಂಜಾನೆ ಅವ್ವನು ಅವಸರದಿಂದಲೇ ನಮ್ಮ ಅಪ್ಪಣೆ ಪಡೆದುಕೊಂಡು ಹೋದಳು' ಎಂದರು.

ಆ ಕ್ಷಣದಿಂದ ಮುಂದೆಎಂದಿಗೂ ಆ ಊರಿಗೆ ಮಾರಿಬೇನೆ ಸುಳಿಯಲಿಲ್ಲ.

# ಚಿತ್ತರಗಿಯಲ್ಲಿ ದುರ್ಘಟನೆ

ನಂಬಿ ಕೆಟ್ಟವರಿಲ್ಲ! ನಂಬಿಕೆಯು ಅಸಾಧ್ಯಗಳನ್ನು ಸಾಧ್ಯಮಾಡಬಹುದು. ಸರ್ಪದ ಹಲ್ಲಿನಿಂದ ಪಾರುಮಾಡಬಹುದು. ಹುಲಿಯ ಪಂಜರದಿಂದ ಉಳಿಸಬಲ್ಲದು. ಸಮುದ್ರದ ಆಳದಿಂದ ದಂಡೆಗೆ ತರಬಲ್ಲದು. ಆದರೆ ಇವೆಲ್ಲಕ್ಕೆ ನಂಬಿಕೆಯೇಮೂಲ. ನಂಬು ನಂಬೆಲೊ ಮನವೆ ಎಂದು ಲೋಕದಲ್ಲಿ ಹುಟ್ಟಿದ ಮಹಾತ್ಮರೆಲ್ಲರೂ ಹೇಳಿದರು. ಆದರೆ ನಂಬಿದವರು ಎಷ್ಟು ಜನ ?

ಚಿತ್ತರಗಿಯ ಮಠದ ಕಾರ್ಯ ಭರದಿಂದ ಸಾಗಿದಾಗ ಅನೇಕ ಘಟನೆಗಳು ಜರುಗಿಹೋದವು. ಒಂದು ಸಲ ನೂರಾರು ಗಂಡಾಳುಗಳೂ ಹೆಣ್ಣಾಳುಗಳೂ ಕೆಲಸಕ್ಕೆ ನಿಂತಿದ್ದಾರೆ. ಬೆಳಗಲ್ಲ ಗುಡ್ಡದಿಂದ ತರಿಸಿದ ಕಲ್ಲುಗಳು ರಾಶಿರಾಶಿಯಾಗಿ ಬಿದ್ದಿವೆ. ಶಿವಯೋಗಿಗಳು ಎತ್ತರದ ಕಲ್ಲುಪೀಠದ ಮೇಲೆ ಹಾಸಿದ ಚಿತ್ರಾಸನದ ಮೇಲೆ ಕುಳಿತು ಕರ್ಮಯೋಗಕ್ಕೆ ಶಿವಯೋಗನು ಚೈತನ್ಯ ನೀಡುತ್ತಿದ್ದಾರೆ. ಬೃಹದ್ ಗಾತ್ರದ ಕಲ್ಲ ತೊಲೆಗೆ ತೇರಿನ ಹಗ್ಗ ಬಿಗಿದು ಮೇಲೆ ಏರಿಸುತ್ತಿದ್ದಾರೆ. ಗೋಡೆಯ ಮೇಲೆ ಹಲವರು ಅದನ್ನು ಎಳೆಯುತ್ತಿದ್ದಾರೆ. ಆದರೆ ಹಗ್ಗ ಹರಿದು ಆ ಬಂಡೆ ತೊಲೆ ಥಟ್ಟನೇ ಉರುಳಿ ಒಬ್ಬ ಕೂಲಿಯವನ ಸೊಂಟದ ಮೇಲೆಯೆ ಬಿತ್ತು ! ಕೂಡಿದ ಜನರೆಲ್ಲಾ 'ಅಯ್ಯೋ ಸತ್ತಾ ಸತ್ತಾ' ಎಂದು ಓಡಿಬಂದರು. ಶಿವಯೋಗಿಗಳು ಬಂದು ನೋಡುತ್ತಾರೆ ಮಹಾ ಪ್ರಮಾದವಾಗಿಬಿಟ್ಟಿದೆ ! ಚರ್ಮವೆಲ್ಲ ಸುಲಿದು ಹೋಗಿದೆ. ಖಂಡ, ಎಲವು ಹೊರಗೆ ಕಾಣುತ್ತಿವೆ. ರಕ್ತ ಧೋ ಧೋ ಸುರಿಯುತ್ತಿದೆ. ಉಳಿದವರೆಲ್ಲ ಧೃತಿಗೆಟ್ಟರೂ ಶ್ರೀಗಳು ಧೈರ್ಯ ಕಳೆದುಕೊಳ್ಳಲಿಲ್ಲ. ತಮ್ಮ ಪೂಜಾ ಮಂದಿರದಿಂದ ಲಿಂಗಮಜ್ಜನದ ನೀರನ್ನೂ ಅಂಗಾರವನ್ನೂ ತರಿಸಿದರು. ಅದೇ ನೀರನ್ನು ಘಾಯದ ಮೇಲೆ ಸಿಂಪಡಿಸಿ, ಅಂಗಾರವನ್ನೂ ತುಂಬಿ, ತೊಯ್ದ ಬಟ್ಟೆಯೊಂದನ್ನು ಸೊಂಟಕ್ಕೆ ಬಿಗಿದು ಒಳಮಠದಲ್ಲಿ ಕಳಿಸಿದರು. ಶ್ರೀಗಳ ಕರಸ್ಪರ್ಶದಿಂದ ಆತನ ಘೋರವಾದ ನೋವು ಮಾಯವಾಯಿತು. ಒಂದೇ ವಾರದಲ್ಲಿ ಎಲವು ಮಾಂಸಖಂಡದ ಒಳಗೆ ತುಂಬಿಕೊಂಡು, ಚರ್ಮ ಕೂಡಿಕೊಂಡಿತು. ಎರಡು ವಾರ ಬಿಟ್ಟು ಆತ ಮತ್ತೆ ಎಂದಿನಂತೆ ಕೆಲಸಕ್ಕೆ ಹಾಜರ ಆದ. ಶ್ರೀಗಳು ಆತನ ಸಂಸಾರ ಹೊಟ್ಟೆಬಟ್ಟೆಗೆ ಧನಧಾನ್ಯ ಕಳಿಸಿ ಸಹಾಯ ಮಾಡಿದರು.

# ಒಬ್ಬರ ಪಾಕ ಇಪ್ಪತ್ತು ಜನರಿಗೆ ಪ್ರಸಾದ

ಶಿವಯೋಗಿಗಳು ಜ್ಞಾನಯೋಗಿಗಳೂ, ಕರ್ಮಯೋಗಿಗಳೂ, ಭಕ್ತಿ ಯೋಗಿಗಳೂ ಆದಂತೆ ಪ್ರಸಾದ ಯೋಗಿಗಳೂ ಆಗಿದ್ದರು. ಅವರ ಜೀವನವೇ ಒಂದು ಮಹಾ ಪ್ರಸಾದವಿದ್ದಂತೆ! ಅವರ ಅನುಗ್ರಹ ಪ್ರಸಾದದಿಂದ ಅನೇಕ ಮನೆತನಗಳು ಉದ್ಧಾರವಾದವು. ವಚನ ಪ್ರಸಾದದಿಂದ ರೋಗಾದಿಗಳು ಓಡಿಹೋದವು. ಅನ್ನ ಪ್ರಸಾದದಿಂದ ಭಕ್ತರೂ ಬಡವರೂ ಕೈಲಾಸದ ಸೌಖ್ಯ ವನ್ನು ಹೊಂದಿದರು.

ಇವರು ತಮ್ಮ ಜೀವನದಲ್ಲಿ ಕಠೋರವಾದ ಪ್ರಸಾದ ನಿಯಮವನ್ನು ಹಾಕಿಕೊಂಡಿದ್ದರು. ಅದರ ಫಲವೇ ಸ್ವಯಂಪಾಕವಾಗಿತ್ತು. ಒಂದು ಸಲ ಇವರು ತಮ್ಮ ಎಡಬಟ್ಟಲಕ್ಕೆ ತುಪ್ಪವನ್ನು ನೀಡಿಕೊಳ್ಳುತ್ತಿದ್ದಾಗ ಅದರೊಂ ದಿಗೆ ಒಂದು ಬೋರೆ ಬೀಜ ಬಿದ್ದಿತಂತೆ! ಬಹುಶಃ ಆ ಬೀಜ ಯಾರೋ ಸೀಪಿ ಒಗೆದದ್ದು!! ಆಕಸ್ಮಿಕವಾಗಿ ತುಪ್ಪದಲ್ಲಿ ಬಿದ್ದಿದೆ, ಈಗ ಎಡಬಟ್ಟಲವನ್ನೇ ಪ್ರವೇಶಿಸಿದೆ. ಇನ್ನೇನು ಮಾಡಬೇಕು? ಪ್ರಾಣಸಂಕಟಕ್ಕಿಟ್ಟುಕೊಂಡಿತು. ಆ ಬೀಜ ಲಿಂಗಪ್ರಸಾದಕ್ಕೆ ಯೋಗ್ಯವಾದೀತೆ? ಅದು ಸೀಪಿ ಒಗೆದ ಎಂಜಲು ಪದಾರ್ಥವಲ್ಲವೆ? ಇಂಥ ಸಂದರ್ಭದಲ್ಲಿ ಶಿವಯೋಗಿಗಳ ಕಠೋರ ತರ್ಕ ಕಾರ್ಯ ಮಾಡಿತು. ಎಷ್ಟು ಬೇಯಿಸಿದರೂ ಬೇಯದೇ ಇರುವ ವಸ್ತುವಾದ್ದ ರಿಂದ ಆ ಬೀಜವನ್ನು ಎಡಬಟ್ಟಲಿನಿಂದ ತೆಗೆದು ಧೂಪಾರತಿಗೆ ಒಗೆದರು. ಅಂದಿನಿಂದ ತಮ್ಮ ಜೀವನದಲ್ಲಿ ತುಪ್ಪವನ್ನೇ ಸೇವಿಸುವದನ್ನೇ ಬಿಟ್ಟರು!

* * *

ಇನ್ನೊಂದು ಸಲ ಇಲಕಲ್ಲ ಮಠದಲ್ಲಿ ಶಿವಯೋಗಿಗಳು ಮಧ್ಯಾಹ್ನ ಲಿಂಗಪೂಜೆ ಮಾಡಿಕೊಂಡು ಸ್ವಯಂಪಾಕಕ್ಕೆ ಅಣಿಯಾಗಿದ್ದಾರೆ. ಆದಿನ ತಮ್ಮ ಪ್ರಸಾದಕ್ಕೆ ಕೆಲವು ಜೋಳದ ಕಡಬುಗಳನ್ನು ಹಾಗೂ ಅನ್ನ-ಸಾರ ಬ್ಯಾಳಿಯನ್ನು ತಯಾರಿಸಿದ್ದಾರೆ. ಜೊತೆಗೆ ಸ್ವಲ್ಪು ಮೆಣಸಿಂಡಿಯೂ ಇದೆ! ಪ್ರಸಾದದಲ್ಲಿ ಷಡ್ರಸಗಳೂ ಲಿಂಗಕ್ಕೆ ಅರ್ಪಿತವಾಗಬೇಕಲ್ಲವೆ? ಅಷ್ಟೆಲ್ಲ ಪ್ರಸಾದ ತಮ್ಮೊಬ್ಬರಿಗೆ ಮಾತ್ರ ಸಾಲುವಷ್ಟಿದೆ. ತಮ್ಮ ಗದ್ದುಗೆಯ ಮೇಲೆ ಕುಳಿತು ಪ್ರಸಾದಕ್ಕೆ ಅಣಿಯಾಗಲು ತೊಡಗಿದರು. ಆ ಮೇಲೆ ಏಕೋ ಸ್ವಲ್ಪು

ಹೊತ್ತು ತಡೆಯಬೇಕೆಂದು ಅವರಿಗೆ ಅನ್ನಿಸಿತು. ಕೆಲವು ಕ್ಷಣಗಳ ವರೆಗೆ ಮೌನವಾಗಿ ಕುಳಿತರು. ಅಷ್ಟರಲ್ಲೇ ಇಪ್ಪತ್ತು ಜನ ದೂರು ಊರಿನ ಮುಗ್ಧ ಭಕ್ತರು ಬಿಸಿಲಿನಲ್ಲಿ ಸಡೆದುಕೊಂಡು ಮಠಕ್ಕೆ ಬಂದರು. ಶಿವಯೋಗಿಗಳು ತಕ್ಷಣವೆ ತಮ್ಮ ಗದ್ದುಗೆಯಿಂದ ಎದ್ದು ಅವರಿಗೆಲ್ಲ ಮುಖಮಾರ್ಜನೆ. ಭಸ್ಮ ಧಾರಣೆಯ ವ್ಯವಸ್ಥೆ ಮಾಡಿಸಿದರು. ಸೇವಕರನ್ನು ಕರೆದು–'ಅವರಿಗೆ ಪ್ರಸಾದ ನೀಡಿರಿ' ಎಂದು ಹೇಳಿದರು. ಈ ಮಾತು ಕೇಳಿ ಸೇವಕರು ಕಂಗಾಲಾಗಿ ಹೋದರು. ಅವರ ಕಂಠ ನಡುಗತೊಡಗಿದವು. ಅವರಲ್ಲೇ ಒಬ್ಬ ಧೈರ್ಯ ತಂದುಕೊಂಡು— ಪ್ರಸಾದ 'ಬೆಳೆದಿದೆ' ಬುದ್ಧೀ ಎಂದ! ಮಠ ಮಾನ್ಯಗಳ ಭಾಷೆಯಲ್ಲಿ ಪ್ರಸಾದ ಬೆಳೆದಿದೆಯೆಂದರೆ ತೀರಿಹೋಗಿದೆಯೆಂದು ಅರ್ಥ!! ಅದನ್ನು ಕೇಳಿ ಶಿವಯೋಗಿಗಳು— 'ಪ್ರಸಾದ ಬೆಳೆದಿದೆಯೇ? ಹಾಗಾದರೆ ಜೋಲೋ ಆತು! ಅದು ಹಾಗೆಯೇ ಬೆಳೆಯಲಿ ಅವರನ್ನು ಗಂಗಾಳ ಹಾಕಿ ಊಟಕ್ಕೆ ಕೂಡ್ರಿಸಿರಿ' ಎಂದರು. ಸೇವಕರು ನಡುಗುವ ತೆಂಗಿನಗರಿಗಳಂತೆ ನಿಂತರು. ಮತ್ತೆ ಶಿವಯೋಗಿಗಳೇ—

'ಹುಂ....ಬೇಗನೆ ತಾಟು ಹಾಕಿರಿ ಅವರಿಗೆ. ಅಪ್ಪನವರು ಹಸಿದು ಬಂದಿದ್ದಾರೆ. ತಿಳಿಯುವದಿಲ್ಲವೆ?' ಎಂದರು.

ಇನ್ನು ಮರುಮಾತು ಆಡಿದರೆ ಶಿವಯೋಗಿಗಳು ಶಾಪವನ್ನೇ ಬಗೆಯುತ್ತಾರೆಂದು ಅಂಜಿದ ಸೇವಕರು ಸುಮ್ಮನೆ ತಾಟು ಹಾಕಿ ಎಲ್ಲ ಭಕ್ತರನ್ನೂ ಕೂಡ್ರಿಸಿಬಿಟ್ಟರು!

ಇತ್ತ ಶಿವಯೋಗಿಗಳು ತಮ್ಮ ಪೂಜಾ ಮಂದಿರಕ್ಕೆ ಹೋಗಿ ತಾವು ಸಿದ್ಧಪಡಿಸಿದ ಜೋಳದ ಕಡಬು, ಕಾರಬ್ಯಾಳಿ, ಅನ್ನ, ಮೆಣಸಿಂಡಿಯನ್ನೆಲ್ಲ ಒಂದು ಡಬರಿಯಲ್ಲಿ ಹಾಕಿ ಒಟ್ಟು ಕಲಿಸಿದರು. ಅದೇ ಪ್ರಸಾದವನ್ನ ಲಿಂಗವಂತೆ ಆಕೃತಿ ಮಾಡಿ ಒಂದು ಪತ್ರಿದಳ ಏರಿಸಿದರು. ಒಂದು ಕಾವಿಯ ಪಾವುಡವನ್ನು ಅದರ ಮೇಲೆ ಹೊಚ್ಚಿ ತಾವೇ ತಮ್ಮ ಸ್ವಹಸ್ತದಿಂದ ನೀಡತೊಡಗಿದರು.

ಪಂಕ್ತಿಯಲ್ಲಿ ಇಪ್ಪತ್ತು ಜನ ಕುಳಿತಿದ್ದಾರೆ. ಶಿವಯೋಗಿಗಳು ಎಣಿಸಿ ಹತ್ತು ಜೋಳದ ಕಡಬು ಮಾಡಿದ್ದಾರೆ. ಬಹುಶಃ ಸ್ವಾಮಿಗಳು ಎಲ್ಲರಿಗೆ ಅರ್ಧ ಅರ್ಧ ಜೋಳದ ಕಡಬು ನೀಡುತ್ತಾರೆಂದು ಸೇವಕರೆಲ್ಲ ಅಪರಾಧಿಗಳು ನಿಂತಂತೆ

ನಿಂತು ಕಣ್ಣಟ್ಟು ನೋಡುತ್ತಿದ್ದಾರೆ! ಇತ್ತ ಶ್ರೀಗಳು ಜೋಳದ ಕಡಬು, ಅನ್ನ, ಕಾರಬ್ಯಾಳಿ ನೀಡೇ ನೀಡಿದರು. ಆ ಭಕ್ತರು ಉಂಡೇ ಉಂಡರು. ಅಂಥ ರುಚಿ ಕಟ್ಟಾದ ಅಡುಗೆಯನ್ನು ಅವರು ಕಂಡಿರಲಿಲ್ಲ! ಜೋಳದಕಡಬು, ಮೆಣಸಿಂಡಿ ಕಾರಬ್ಯಾಳಿ ಅಂದರೆ ಕೇಳಬೇಕೆ? ಪ್ರತಿಯೊಬ್ಬರೂ ನಾಲ್ಕು ದಿನಗಳ ಊಟ ಒಮ್ಮೆಲೇ ಮುಗಿಸಿಬಿಟ್ಟರು! ಅತ್ತ ಸೇವಕರು ಕಣ್ಣಲ್ಲಿ ಜೀವ ಹಿಡಿದಂತೆ ಕಟ್ಟಾಶ್ಚರ್ಯದಿಂದ, ತಮ್ಮ ನಾಲಿಗೆಯನ್ನು ತಾವೇ ಕಚ್ಚಿಕೊಂಡು ನೋಡುತ್ತ ನಿಂತರು !!

# ಇಪ್ಪತ್ತೆರಡು ದಿನ ಉಪವಾಸ

ಶಿವಯೋಗಿಯಾದವನಿಗೆ ಗಾಳಿ_ಮಳೆ–ಮೋಡಗಳ ಮೇಲೂ ಪಂಚ ಭೂತಗಳ ಮೇಲೂ ಹುಟ್ಟು ಸಾವುಗಳ ಮೇಲೂ ಗ್ರಹ ನಕ್ಷತ್ರಗಳ ಮೇಲೂ ಅಧಿಕಾರಶಕ್ತಿ ಬಂದಿರುತ್ತದೆಯಂತೆ! ಅಂತೆಯೇ ವಿಜಯ ಮಹಾಂತ ಶ್ರೀಗಳು ಬಯಸಿದಂತೆ ಮಳೆಯಾಯಿತು. ಕೇಳಿದಂತೆ ಬೆಳೆ ಬಂತು. ಅನೇಕರು ಅವರ ವರಪ್ರಸಾದದಿಂದ ಜನಿಸಿದರು. ರೋಗಾದಿಗಳು ನಾಶವಾದವು. ಬತ್ತಿದ ಬಾವಿಗಳು ಜಲಸಮೃದ್ಧವಾದವು. ಅನೇಕರ ಮನೆತನಗಳು ಸುಖಭೋಗದ ತೊಟ್ಟಿಲು ತೂಗಿದವು. ಹಲವರು ತಮ್ಮ ಪಾಪಕ್ಕಾಗಿ ಇವರಿಂದ ಶಾಪಗ್ರಸ್ಥ ರಾಗಿ ಪರಲೋಕಯಾತ್ರೆಯನ್ನೂ ಮಾಡಿಬಿಟ್ಟರು!

ಒಂದು ಸಲ ಶ್ರೀಗಳು ಚಿತ್ತರಗಿ ಪೀಠಕ್ಕೆ ಇನ್ನೊಂದು ಕುದುರೆ ಅವಶ್ಯ ವಾಗಿ ಬೇಕಾದುದನ್ನು ಗಮನಿಸಿ, ಖರೀದಿಸಲು ಪಂಢರಪುರಕ್ಕೆ ಹೊರಟು ನಿಂತರು. ಪ್ರಾತಃಕಾಲದ ಶಿವಾರ್ಚನೆಯನ್ನು ತೀರಿಸಿಕೊಂಡು ತಮ್ಮ ಕುದುರೆ ಯನ್ನು ಸಜ್ಜು ಮಾಡಿದರು. ಮಾಂತಮ್ಮನ ಮೇಲೆ ಕೈಯಾಡಿಸಿ— 'ಹೋಗಿ ಬರುತ್ತೇನಮ್ಮಾ' ಎಂದರು. ಅವಳು ತಲೆಯಾಡಿಸಿ ಕಣ್ಣೀರು ಮಿಡಿದಳು. ಬಟ್ಟಲುಗಣ್ಣುಗಳನ್ನು ಬಿಟ್ಟು ನೋಡುತ್ತ ನೋಡುತ್ತ 'ಅಂಜಿ........' ಎಂದಳು. ನಂತರ ಅವರು ಮಠದ ಮಹಾದ್ವಾರದ ಹೊರಗೆ ಬಂದು, ಶುಭ ಗಳಿಗೆಯ ಮುಹೂರ್ತವನ್ನು ನೋಡಿ ಕುದುರೆ ಏರಲೆಂದು ಸೂರ್ಯನತ್ತ ದೃಷ್ಟಿ ಹಾಯಿಸಿದರು. ಆಕಾಶವೇ ಅವರಿಗೆ ನೈಸರ್ಗಿಕ ಪಂಚಾಂಗವಾಗಿತ್ತು. ಆದರೆ ಗಗನವೆಲ್ಲ ಕಾರ್ಮೋಡಗಳಿಂದ ಕವಿದು ಕಗ್ಗತ್ತಲಾಗಿತ್ತು. ಒಂದಂಗುಲ ವಾದರೂ ತೆರಪು ಎಲ್ಲಿಯೂ ಇರಲಿಲ್ಲ. ಒಂದೆರಡು ನಿಮಿಷ ಶಿವಯೋಗಿಗಳು ಆಕಾಶದತ್ತ ನೋಡಿದರು. ಸೂರ್ಯ ಎಲ್ಲಿದ್ದಾನೋ ಸುಳುಹುಸಹ ಸಿಕ್ಕಲಿಲ್ಲ. ಆಗ ಅವರು ಸೂರ್ಯನಿಗೇ ನೇರವಾಗಿ ಕೇಳಿದರು—

'ಏನಪ್ಪಾ ಸೂರ್ಯ. ನಾವು ಈ ಪ್ರಯಾಣ ಮಾಡುವದಕ್ಕೆ ನಿನ್ನ ಒಪ್ಪಿಗೆ ಇದೆಯೋ ಇಲ್ಲವೋ? ಹೇಳು' ಎಂದರು.

ಈ ಮಾತು ಒಂಭತ್ತು ಕೋಟಿ ಮೈಲಿಗಳಾಚೆ ಇದ್ದ ರವಿಗೆ ಥಕ್ಕನೇ ತಿಳಿಯಿತೆಂದು ಕಾಣುತ್ತದೆ. ಒಮ್ಮೆಲೇ ಶರವೇಗದ ಬಿರುಗಾಳಿಯೊಂದು ಹುಟ್ಟಿ

ಆಕಾಶವೇ ಅಲುಗಾಡಿದಂತಾಯಿತು. ಶಿವಯೋಗಿಗಳ ಕುದುರೆ ತನ್ನ ಎರಡೂ ಕಾಲುಗಳನ್ನು ಎತ್ತರಿಸಿ ಉತ್ಸಾಹದಿಂದ ಖೇಳಿಟ್ಟಿತು. ಅಲ್ಲಿ ನೆರೆದ ಭಕ್ತರ ರುಮಾಲುಗಳು, ಅಂಗಡಿಯುವರ ಬುಟ್ಟಿಗಳು ಫರಾರಿಯಾದವು. ಹಣ್ಣಿ ಅಂಗಡಿಯುವರ ಡಬ್ಬಿಗಳು ಗುಡುಗುಡು ಉರುಳಿದವು. ಇಡೀ ಪೇಟೆಯನ್ನೇ ಬಿರುಗಾಳಿ ಬೇಟೆಯಾಡಿತು. ಕ್ಷಣಾರ್ಧದಲ್ಲಿ ಭಯಂಕರ ಮೋಡದ ಆಕಾಶ ಪರದೆ ಸರ್ರನೇ ಸರಿದು ನಿಚ್ಚಳವಾದ ಬಿಸಿಲು ಬಿದ್ದಿತು. ಇದೇನಾಶ್ಚರ್ಯ? ಇದೇನು ವಿಚಿತ್ರ ?– ಎಂದು ಭಕ್ತಸಮೂಹ ರೋಮಾಂಚಿತವಾಯಿತು. ಶಿವ ಯೋಗಿಗಳು ಕುದುರೆ ಏರಿ ತಮ್ಮ ಮಹಾ ಪಯಣವನ್ನು ಆರಂಭಿಸಿದರು.

ಮಾರ್ಗದಲ್ಲಿ ತ್ರಿಕಾಲ ಲಿಂಗಪೂಜೆಗೆ ಭಂಗಬರುವಂತಿಲ್ಲ. ನಾಲ್ಕೈದು ಜನ ಸೇವಕರು ಇವರ ಹಿಂದು ಹಿಂದೆಯೇ ಕಾಲುನಡಿಗೆಯಿಂದ ಬರುತ್ತಿದ್ದರು. ಹೊಳೆ, ಹಳ್ಳ, ತೊರೆ, ಕೆರೆ, ಬಾವಿ, ಶೆಲೆ, ಒರತೆಗಳಿದ್ದಲ್ಲಿ ಶಿವಯೋಗಿಗಳು ಇಳಿದು ತಮ್ಮ ಪೂಜೆ ಪ್ರಸಾದಗಳನ್ನು ಪೂರೈಸಿಕೊಂಡು ಮುಂದೆ ಸಾಗುತ್ತಿದ್ದರು.

ವಿಜಯ ಮಹಾಂತ ಶಿವಯೋಗಿಗಳಿಗೆ ಪರೀಕ್ಷಾ ಕಾಲವೇ ಪ್ರಾಪ್ತವಾಯಿತು. ಶಿವ ನಿಷ್ಕರುಣಿ. ನಿರ್ಮೋಹಿಯಲ್ಲವೆ? ತನ್ನವರೆಂದರೆ ಕೂಗಿಡಿಸಿ ಕಾಡುವನಲ್ಲವೆ? ಲಿಂಗಪೂಜೆ ಪ್ರಸಾದಗಳಿಗೆ ಚೊಕ್ಕಮಡಿ ಶ್ರೀಗಳಿಗೆ ಬೇಕೇ ಬೇಕು. ಅವರು ತಮ್ಮ ಪ್ರಾಣಕ್ಕಿಂತಲೂ ಶುಚಿತ್ವಕ್ಕೆ ಹೆಚ್ಚು ಗಮನ ನೀಡುತ್ತಿದ್ದರು. ಯಾರಾದರೂ ಭಕ್ತರು ಮಡಿಬಟ್ಟೆಗಳನ್ನು ಮುಟ್ಟಿದರೆ ಕೆರಳಿ ಕಂಡವಾಗುತ್ತಿದ್ದರು. ಸ್ನಾನ ಶಿವಪೂಜೆಗಳಿಗೆ ಮೀಸಲಾಗಿಟ್ಟ ಮಜ್ಜನ ಬಾವಿಯ ನೀರನ್ನೇ ಬಳಸುತ್ತಿದ್ದರು. ಪರಸ್ಥಳಕ್ಕೆ ಹೋದಾಗ ಭಕ್ತ ಮಾಹೇಶ್ವರರಿಬ್ಬರೇ ಬಳಸುತ್ತಿದ್ದ ಬಾವಿ-ಕೆರೆಗಳಲ್ಲಿ ಸ್ನಾನ ತೀರಿಸುತ್ತಿದ್ದರು. ಅಂತರಂಗದ ಭದ್ರತೆಗೆ ಬಹಿರಂಗದ ಕಟ್ಟುಮಡಿ ಒಂದು ಭದ್ರಬುನಾದಿಯೆಂದು ನಂಬಿದ ಶಿವಯೋಗಿಗಳವರು. ಈ ವ್ರತ ನಿಷ್ಠುರತೆಯನ್ನು ಪ್ರಾಣವನ್ನೇ ಪಣಕ್ಕಿಟ್ಟುಕೊಂಡು ಕಾಪಾಡಿಕೊಂಡು ಬಂದರು. ಹಿಂದೆ ನರೇಗಲ್ಲಿನಲ್ಲಿ ದಿನಕ್ಕೆ ಐವತ್ತು ಸಲ ಶೀತವಾರಿಯ ಸ್ನಾನ ಮಾಡಿದ್ದಾದರೂ ಇದಕ್ಕೆ ಅಲ್ಲವೆ?

ಇಲಕಲ್ಲಿನಿಂದ ಪಂಢರಪುರಕ್ಕೆ ಶ್ವೇತಾಶ್ವದ ಮೇಲೆ ಸಾಗಿದ ಶಿವಯೋಗಿಗಳು ಅಲ್ಲಲ್ಲಿ ಸ್ನಾನ ಪೂಜೆಯನ್ನೀಯುತ್ತ ನಡೆದರು. ತ್ರಿಕಾಲ ಲಿಂಗಪೂಜೆಗೆ

ಭಂಗಬರದಂತೆ ನೋಡಿಕೊಂಡರು. ಆದರೇನು ಮಾಡುವದು? ಯಾವದನ್ನು ಇವರು ಹೆಚ್ಚು ಪ್ರೀತಿಸುತ್ತಿದ್ದರೊ ಅದಕ್ಕೇ ಶಿವ ಕೊಡಲಿಯ ಪೆಟ್ಟು ಹಾಕಿಬಿಟ್ಟ!

ಒಂದು ಸಲ ಮಾರ್ಗ ಮಧ್ಯದಲ್ಲಿ ಒಂದು ಮಾವಿನ ತೋಟದ ಬಾವಿಯನ್ನು ಕಂಡು ಶಿವಯೋಗಿಗಳು ಇಳಿದರು. ಅಲ್ಲೇ ಕುದುರೆಗೆ ಹುಲ್ಲು ನೀರು ಉಣಿಸಿ ತಾವು ಸ್ನಾನಕ್ಕೆ ನಡೆದರು. ತೋಟ ಪ್ರಶಾಂತವಾಗಿತ್ತು. ಊರಿಗೆ ಸಮೀಪವಾಗಿತ್ತು. ಆದರೆ ಒಡೆಯನಿಂದ ಕೊಡವನ್ನು ತರಿಸಿ ಬಾವಿಗೆ ತಾವೇ ಬಿಟ್ಟರು. ತಮ್ಮ ನೀರನ್ನು ತಾವೇ ಸೇದಿಕೊಳ್ಳುವ ಪರಿಪಾಠ ಅವರದು. ಬಾವಿಯಲ್ಲಿ ಬಿಟ್ಟ ಕೊಡ ತುಂಬಿತು. ಮೆಲ್ಲಗೆ ಹಗ್ಗವನ್ನು ಜಗ್ಗಿ ಕೊಡವನ್ನು ಮೇಲೆ ತಂದು ಇಳಿಸಿದರು. ಮೈಮೇಲಿನ ಬಿಳಿಯ ಕಫನಿಯನ್ನು ತೆಗೆದು ಇನ್ನೇನು ಸ್ನಾನ ಮಾಡಬೇಕೆಂಬುದರಲ್ಲೇ ಆ ಕೊಡದ ಮೇಲ್ಗಡೆ ಏನೋ ತೇಲುತ್ತಿದ್ದದು ಕಾಣಿಸಿತು. ಸಂಶಯ ಹುಟ್ಟಿ ಶಿಷ್ಯನನ್ನು ಕರೆದು 'ಇದೇನು ನೋಡಿರಿ' ಎಂದರು. ಅವರು ಅದನ್ನು ಹೊರಗೆ ತೆಗೆದು ಪರೀಕ್ಷಿಸಲು ಅದೊಂದು ಚರ್ಮದ ತುಂಡೆಂದು ಗೊತ್ತಾಯಿತು! ಶಿವಯೋಗಿಗಳಿಗೆ ಹತ್ತು ಸಿಡಿಲುಗಳು ಹೊಡೆದಂತಾಯಿತು!! ಸೇವಕರು ತೋಟದವರನ್ನು ವಿಚಾರಿಸಲಾಗಿ ಹಲವು ಹನ್ನೊಂದು ರೀತಿಯ ಜನರೆಲ್ಲ ಅಲ್ಲಿಂದ ನೀರು ಒಯ್ಯುವದು ಗೊತ್ತಾಯಿತು. ಇನ್ನು ಆ ನೀರಿನ ಸ್ನಾನವೆಂದರೆ ಮೈಲಿಗೆಯನ್ನು ಬರಮಾಡಿಕೊಂಡಂತೆ ಎಂದು ಭಾವಿಸಿ ಶಿವಯೋಗಿಗಳು ತಕ್ಷಣವೇ ಆ ಜಾಗೆ ಬಿಟ್ಟು ಕಳೆದಿಟ್ಟ ಕಫನಿಯನ್ನೇ ಹಾಕಿಕೊಂಡು ನಡೆದುಬಿಟ್ಟರು. ಸ್ನಾನವಿಲ್ಲವೆಂದ ಮೇಲೆ ಶಿವಪೂಜೆಯೂ ಇಲ್ಲ. ಶಿವಪೂಜೆ ಇಲ್ಲವೆಂದ ಮೇಲೆ ಪ್ರಸಾದವೂ ಇಲ್ಲ. ಅವರು ಪ್ರಾಣಹೋದರೂ ಪಾವಿತ್ರ್ಯವನ್ನು ಕಲಂಕಿಸಿಕೊಳ್ಳುವವರಲ್ಲ ಕುದುರೆಯ ಮೇಲೆ ಪ್ರವಾಸ ಮುಂದುವರಿಸಿಬಿಟ್ಟರು. ಮುಂದೆ ಬಂದ ಕೆರೆ-ಬಾವಿ-ಹಳ್ಳ-ತೊರೆ-ಜಾಲಗಳೆಲ್ಲ ಅವರಿಗೆ ಮಲಿನವಾಗಿಯೇ ತೋರಹತ್ತಿದವು.

ಆ ದಿನ ತ್ರಿಕಾಲ ಲಿಂಗಪೂಜೆ ನಡೆಯಲೇ ಇಲ್ಲ. ಹನಿ ನೀರು ಸೇವಿಸಲಿಲ್ಲ. ಹಾಗೇ ಅರಣ್ಯದಲ್ಲಿ ಪವಡಿಸಿದರು. ಬೆಳಗಾಗುವದರೊಳಗೇ ಮತ್ತೆ ಸ್ನಾನ-ಪೂಜೆಯ ಸಮಸ್ಯೆಯೇ ಧುತ್ತೆಂದು ಎದ್ದು ನಿಲ್ಲುತ್ತದೆಯೆಂದು ಅವರಿಗೆ ಗೊತ್ತು. ಆದರೆ ಅವರವ್ಯಕ್ತಿತ್ವವೆಂದರೆ ಕಠೋರಕ್ಕೆ ಕಠೋರ, ಕರಗಸಕ್ಕೆ

ಕರಗಸ, ಬೆಂಕಿಗೆ ಬೆಂಕಿ. ತಮ್ಮ ಮೇಲೆ ಶಿವ ತಂದ ಚೇಷ್ಟೆಯೇ ಇದೆಂದು ತಿಳಿದು, ಪಂಢರಪುರ ಮುಟ್ಟಿ ಕುದುರೆ ಕೊಂಡು, ಹೊರಳಿ ಇಲಕಲ್ಲ ತಲಪುವ ವರೆಗೆ ಸ್ನಾನ ಪೂಜೆ ಪ್ರಸಾದಗಳನ್ನು ತ್ಯಾಗ ಮಾಡಬೇಕೆಂದು ನಿರ್ಧರಿಸಿ ಬಿಟ್ಟರು. ಹತ್ತು ಸಲ ಪ್ರಾಣಹೋದರೂ ಚಿಂತೆ ಇಲ್ಲ. ಪಾವಿತ್ರ್ಯವನ್ನೂ ಬಿಡಬಾರದೆಂದು ಪಣ ಮಾಡಿದರು.

ಬೆಳಗಾಯಿತು. ಪ್ರವಾಸ ಮುಂದುವರೆಯಿತು. ಶಿವಯೋಗಿಗಳ ವಿಚಿತ್ರ ನಡತೆಗೆ ಹಿಂಬಾಲಕರಾದ ಭಕ್ತರು ಹೌಹಾರಿದರು. ಆದರೆ ಅವರಿಗೆ ಸಮಾಧಾನ ಹೇಳಿ. ಒತ್ತಾಯದಿಂದ ಪ್ರಸಾದ ಮಾಡಿಸಿ ತಾವು ಹಾಗೆಯೇ ನಡೆದರು.

ಮುಂದೆ ಪಂಢರಪುರ ಮುಟ್ಟಿದ್ದು ಆಯಿತು, ಕುದುರೆ ಖರೀದಿ ಮಾಡಿ ಆಗಲೇ ಹತ್ತು ದಿನ ಜಾರಿದ್ದವು ! ಬಾಯಲ್ಲಿ ಹನಿ ನೀರು ಕೂಡ ಹಾಕಿರ ಲಿಲ್ಲ !! ಆದರೆ ಅವರ ಮುಖದಲ್ಲಿ ಯೋಗಶಕ್ತಿ ಪ್ರತಾಪಮಯವಾಗಿಯೇ ರಾರಾಜಿಸುತ್ತಿತ್ತು. ಅವರ ಮುಖ ಕಳಾಹೀನವಾದಂತೆ ತೋರಲಿಲ್ಲ. ಭಗವತಿ ಯಾದ ಅನ್ನಪೂರ್ಣೇಶ್ವರಿಯೇ ಅವರಿಗೆ ತಿಳಿಯವಂತೆ, ಅವರ ಉದರದಲ್ಲಿ ಹಾಲು ಜೇನುತುಪ್ಪ ಸುರಿದುಹೋಗುತ್ತಿದ್ದಳೋ ಏನೋ? ಶಿವಯೋಗಿಗಳು ಸಿದ್ಧಪುರುಷರಾಗಿ ನಡೆದರು.

ಪಂಢರಪುರದಿಂದ ಮರಳಿ ಇಲಕಲ್ಲಿಗೆ ಪಯಣ ಸಾಗಿತು. ಇಲಕಲ್ಲು ತಲುಪಲು ಮತ್ತೆ ಹನ್ನೆರಡು ದಿನಗಳು ಬೇಕಾದವು. ಒಟ್ಟು ಇಪ್ಪತ್ತೆರಡು ದಿನ ಶಿವಯೋಗಿಗಳು ಮಹಾಶಿವರಾತ್ರಿಯ ವ್ರತವನ್ನೇ ಮಾಡಿಬಿಟ್ಟರು ! ಮರಳಿ ಇಲಕಲ್ಲಿಗೆ ಬಂದಾಗ ಅವರ ಹೊಟ್ಟೆ ಕಾಣಿಸುತ್ತಲೇ ಇರಲಿಲ್ಲ. ಗುಬ್ಬಿಯ ಗೂಡಾಗಿತ್ತು. ಎಲುವುಗಳು ನರಗಳು ಎಣಿಸಲು ಬರುವಂತೆ ಎದ್ದು ಕಾಣುತ್ತಿದ್ದವು. ಆದರೆ ಕಣ್ಣುಗಳ ಕಾಂತಿ, ಅಂತರಂಗದ ಶಾಂತಿ ಎಳ್ಳನಿತೂ ಭಂಗಗೊಂಡಿರಲಿಲ್ಲ.

ಶಿವಯೋಗಿಗಳ ಉಪವಾಸ ಸುದ್ದಿಯನ್ನು ಅರಿತ ಇಲಕಲ್ಲ ಭಕ್ತರು ಮಹದಾಶ್ಚರ್ಯದಿಂದ ಸಂಕಟಪಟ್ಟರು. ಅವರ ಹೃದಯದಲ್ಲಿ ಕಾದೆಣ್ಣೆ ಯನ್ನು ಸುರುವಿದಂತಾಯಿತು. ಎಲ್ಲರೂ ಮಠಕ್ಕೆ ಬಂದು ಶ್ರೀಗಳನ್ನು ವಿಚಾರಿಸಿ ದುಃಖಿತರಾದರು. ಅವರ ಮಾಂತಮ್ಮ 'ಅಂಬೇ....ಅಂಬೇ....!'

ಎಂದು ಸ್ವಾಗತಿಸಿದಳು. ಶಿವಯೋಗಿಗಳೇ ಎಲ್ಲರಿಗೆ ಸಾಂತ್ವನ ನೀಡಿದರು. ಮಜ್ಜನ ಬಾವಿಯ ನೀರು ತರಿಸಿ ಆನಂದದಿಂದ ಸ್ನಾನ ಪೂಜೆ ಮಾಡಿದರು; ಇಪ್ಪತ್ತೆರಡು ದಿನ ಉಪವಾಸವಿದ್ದರೂ ಚೆನ್ನಾಗಿ ನಡೆದಾಡಬಲ್ಲರು. ನುಡಿಯ ಬಲ್ಲರು. ಅವರ ಕರ್ಮಯೋಗಕ್ಕೆ ಯಾವ ಬಾಧೆಯೂ ಬರಲಿಲ್ಲ. ಇಷ್ಟೊಂದು ಸುದೀರ್ಘ ಉಪವಾಸದ ನಂತರವೂ ತಮ್ಮ ಅಡುಗೆಯನ್ನು ತಾವೇ ಮಾಡಿ ಕೊಂಡರು. ಪಾಂತಮ್ಮ ನೀಡಿದ ಅಮೃತದ ಹಾಲನ್ನು, ಪಾಕದೊಂದಿಗೆ ಸೇರಿಸಿ ಸೇವಿಸಿದರು.

ಇಲ್ಲಿಗೆ ಶಿವಯೋಗಿಗಳ ಜೀವನಧರ್ಮಯೋಗತ್ವ ಮುಕ್ತಾಯ ವಾಯಿತು. ಬೇಡವೆಂದರೂ ಸಂಜೆ ಬಂದಿತು. ಅವರ ದೇಹ ಪಕ್ವ ಮಾವಿನ ಫಲದಂತೆ ಹಣ್ಣು ಹಣ್ಣಾಯಿತು. ಇನ್ನು ಮುಂದೆ ಬರುವದು ಕೊನೆಯ ಪರ್ವ ! ಕೊನೆಯ ಅಂಕ !! ಕೊನೆಯ ದೃಶ್ಯ !!! ಅದನ್ನು ನೋಡ ಬಾರದು....ನೆನೆಯಬಾರದು....ಕಲ್ಪಿಸಬಾರದು....ಊಹಿಸಬಾರದು !!! ಎಲ್ಲರ ಶಿವಯೋಗಿ ಎಲ್ಲರನ್ನಗಲಿ ಹೋಗುವನೇ ? ಕಾಲಪುರುಷ ಅಷ್ಟು ಕಠೋರನೆ? ಶಿವಸಂಕಲ್ಪ ಅಷ್ಟೊಂದು ನಿಷ್ಕರುಣವೆ ? ಈ ವಿಶ್ವದ ರಹಸ್ಯ ಇಷ್ಟೊಂದು ಕರುಣಾಹೀನವೇ ? ಅಯ್ಯೋ....ಅಯ್ಯೋ....ಅಯ್ಯೋ....

# ಶಿವನ ಇಚ್ಛೆ

ಇಲಕಲ್ಲಿನ ಇತಿಹಾಸದಲ್ಲಿ ಸುವರ್ಣಯುಗ ಮುಗಿಸುತ್ತ ಬಂದಿತು ! ತುಪ್ಪದಾರತಿ ತೀರುತ್ತ ಬಂದಿತು !!

ಚಿತ್ತರಗಿಯ ಪೀಠದ ಚೈತ್ಯಾಕ್ಷಿ ಕ್ಷೀಣವಾಯಿತು! ಮಕ್ಕಳಿಗಾಗಿ ತಪಸಿದ ತಾಯಿ ಹಣ್ಣಾದಳು!! ಹಾಲುಂಡು ಹಿಗ್ಗಿದ ಮಕ್ಕಳು ಕಣ್ಣೀರನ್ನು ಉಣ್ಣುವ ಕಾಲ ಬಂದಿತು!!! ತಾಯ ತೊಡೆಯ ಮೇಲೆ ಆಡಿದ ಶಿಶುಗಳು, ಬೀದಿಯಲ್ಲಿ ಚೆಲ್ಲಿದ ಕೂಸಿನಂತೆ ತಬ್ಬಲಿಯಾಗುವ ಕಾಲ ಬಂದಿತು !!!

ಅಯ್ಯೊ.........ಎಂಥ ಕಠೋರ ಸುದ್ದಿ ಇದು........?
ಎಂಥ ವೇದನೆ........ಎಂಥ ಸಂಕಟ.........??
ತುಪ್ಪ ತೀರಿತು........ಬತ್ತಿ ಬಾಡಿತು........
........ದೀಪ ಆರಿತು........!
........ಕತ್ತಲು ಕವಿಯಿತು........!!

*　　*　　*　　*　　*

ಭಕ್ತರಿಗಾಗಿ ಪಡಬಾರದ ಕಷ್ಟವನ್ನೆಲ್ಲ ಪಟ್ಟು ವಿಜಯ ಮಹಾಂತ ಶಿವ ಯೋಗಿಗಳು ಅಂತ್ಯಕಾಲದಲ್ಲಿ ತೀರ ನಿಶ್ಯಕ್ತರಾದರು. ತಮಗೂ ಒಂದು ದೇಹ ಇದೆ ಎಂಬ ವಿಚಾರವನ್ನೇ ಮರೆತುಬಿಟ್ಟರು. ಹಗಲು ಹನ್ನೆರಡು ತಾಸು ಕರ್ಮ ಯೋಗ, ಇಡೀ ರಾತ್ರಿ ಧ್ಯಾನಯೋಗ ಅವರ ಅಂತ್ಯಕಾಲದ ಪರಂಧಾಮವಾ ಯಿತು. ಲಿಂಗಪೂಜೆ ಕಡಿಮೆಯಾಯಿತು. ಆತ್ಮಪೂಜೆ ಅಧಿಕವಾಯಿತು. ಸದಾ ಧ್ಯಾನ, ಅವಿರತ ಧ್ಯಾನ ನಿಂತಲ್ಲಿ-ನಡೆದಲ್ಲಿ-ಕುಳಿತಲ್ಲಿ-ಮಲಗಿದಲ್ಲಿ ಧ್ಯಾನವೇ ಧ್ಯಾನ. ಅವರ ತ್ರಿಕಾಲ ಲಿಂಗಪೂಜೆ, ಸರ್ವಕಾಲ ಲಿಂಗಪೂಜೆಯಾಯಿತು. ಒಂದೊಂದು ಸಲವಂತೂ ಮೂರು ನಾಲ್ಕುದಿನಗಳ ವರೆಗೆ ಲಿಂಗಪೂಜೆಯನ್ನೇ ಮಾಡದೆ ಕೇವಲ ಧ್ಯಾನದಲ್ಲಿ ಕುಳಿತುಬಿಡುತ್ತಿದ್ದರು. ಇಷ್ಟಲಿಂಗ ಪ್ರಾಣ ಲಿಂಗದಲ್ಲಿ ಪರ್ಯವಸಾನವಾಗೆ, ಪ್ರಾಣಲಿಂಗ ಭಾವಲಿಂಗದಲ್ಲಿ ಪರಿಪೂರಿತ ವಾಗಿ, ನಿಷ್ಕಳ ನಿಶ್ಶೂನ್ಯ ನಿರಾಲಂಬ ಮಹಾಲಿಂಗದ ತುಟ್ಟತುದಿಯ ಬೆಟ್ಟ ವನ್ನು ಮೆಟ್ಟಿ ಏರಿದರು. ಪರಿಪೂರ್ಣದೆಡೆಗೆ ಸಾಗಿ, ಪರಿಪೂರ್ಣದೊಂದಿಗೆ ಸ್ವಯಂಪೂರ್ಣವಾದರು. ಆಗ ಇಡೀ ಜಗತ್ತೇ ಒಂದು ಮಹಾ ಶಿವಪೂಜೆ,

ವಿಶ್ವವೇ ಒಂದು ಅಪೂರ್ವ ಶಿವಯೋಗವೆಂಬ ಭಾವನೆ ಬೇರೂರಿತು. ಭಕ್ತರೂ ಶಿವಮಯರಾಗಿ ಕಾಣಹತ್ತಿದರು. ವೈರಿಗಳೂ ಶಿವಸ್ವರೂಪಿಗಳಾಗಿ ತೋರ ಹತ್ತಿದರು. ಗಾಳಿ–ಬೆಳಕು–ಕಲ್ಲು-ಮಣ್ಣು -ಗಿಡ ಬಳ್ಳಿ-ಬೆಳೆ-ಕಳೆ-ಪಶು-ಪಕ್ಷಿ-ಮಾನವರೆಲ್ಲ ಒಂದೇ ಅನಂತ ಲಿಂಗದ ಅನಂತ ರೂಪಗಳೆಂದು ತೋರಹತ್ತಿದರು. ಒಂದು ಹಿಡಿದು ಅನಂತ ಕಂಡರು. ಅನಂತ ಹಿಡಿದು ಒಂದು ಕಂಡರು. ಹಗಲು ರಾತ್ರಿ ಸಂಬಂಧವೇ ತಪ್ಪಿಹೋಯಿತು. ಕಗ್ಗತ್ತಲೆಯೂ ಪರಶಿವನ ಪ್ರಚಂಡ ಪ್ರಕಾಶದ ಇನ್ನೊಂದು ರೂಪವೆಂದೆ ಅವರಿಗೆ ತೋರಹತ್ತಿತು. ಹಸಿವೆ-ತೃಷೆ-ಆಸೆ–ಆಮಿಷ ಎಂದೊ ಓಡಿಹೋಗಿದ್ದವು. ಈಗೀಗ ಕೈವಲ್ಯವೇ ಅವರಾದರು. ಅವರನ್ನುಳಿದು ಬೇರೆ ಮುಕ್ತಿ. ಬೇರೆ ಮೋಕ್ಷವೆಂಬುದು ಇಲ್ಲವೆ ಇಲ್ಲವಾಯಿತು. ಶಿವಯೋಗಿಗಳು ಜೀವಂತ ಶಿವಯೋಗವಾದರು. ಉಸಿರಾಡಿಸುವ ಅದ್ವೈತವಾದರು. ನಗುವ ನಿರ್ವಿಕಾರವಾದರು. ನುಡಿವ ನಿರಾಕಾರವಾದರು.

ಈಗಿನ ಶ್ರೀಗಳು ಅಶಕ್ತರಾದರು. ಬಡವರ ಭಕ್ತರ ಕಷ್ಟಕಾರ್ಪಣ್ಯಗಳನ್ನೆಲ್ಲ ಕೇಳಿದರು. ಆದರೆ ತಮ್ಮ ದೇಹದ ಸುಖ-ದುಃಖಗಳನ್ನೇ ವಿಚಾರಿಸಲಿಲ್ಲ. ಅತ್ಯುಗ್ರವಾದ ಯೋಗ ವ್ರತಗಳಿಂದ, ಕಠಿಣವಾದ ಆಚರಣೆಗಳಿಂದ ಅವರ ದೇಹ ಜೀವಾವಧಿ ಶಿಕ್ಷೆಯನ್ನು ಅನುಭವಿಸಿದ ಅಪರಾಧಿಯಂತಾಯಿತು. ಉಣ್ಣಲೂ ಬಿಡುವಿಲ್ಲ. ವಿಶ್ರಾಂತಿಗೂ ಬಿಡುವಿಲ್ಲ. ನಿದ್ರಿಸಲೂ ಬಿಡುವಿಲ್ಲ. ಅಂದ ಮೇಲೆ ಎಷ್ಟೆಂದು ತಾಳೀತು? ಅದಕ್ಕೂ ಕೂಡ ಒಂದು ಮಿತಿ ಇದೆಯಲ್ಲವೆ?

ಅರುವತ್ತೊಂದು ವರುಷದ ತುಂಬು ಜೀವನದಲ್ಲಿ ಆರು ನೂರು ವರ್ಷ ಬಾಳಿದ ತಪಸ್ವಿಯಂತಾದರು. ಹಿಮಾಲಯದ ಬರ್ಫದ ಗವಿಗಳಿಂದ ಹೊರ ಬಿದ್ದ ಪುರಾತನ ಯೋಗಿಗಳಂತೆ ಕಾಣಹತ್ತಿದರು. ಕಾರಣ ದೀರ್ಘ ಕಾಲದಲ್ಲಿ ಶ್ರಮಿಸಬೇಕಾದದ್ದನ್ನೆಲ್ಲ ಅಲ್ಪ ಕಾಲದಲ್ಲೇ ಗಳಿಸಿಬಿಟ್ಟಿದ್ದರು. ಈಗ ಮಾತ್ರ ಅವರ ಶರೀರ ಮಾತು ಕೇಳದಾಯಿತು. ಹಣ್ಣಾದ ಕಜೂರದಂತೆ ತೊಗಲು ಮಿದುವಾಯಿತು. ರಟ್ಟೆಗಳು ಕೌದಿಯಂತೆ ಹಗುರಾದವು. ತೊಡೆಗಳು ಕಾಲೂರಿದರೆ ನಡುಗುವಷ್ಟು ಗೀಳು ಸ್ಥಿತಿಗೆ ಇಳಿದವು. ಹತ್ತು ಹೆಜ್ಜೆ ನಡೆದರೆ ಆಯಾಸ ಬರತೊಡಗಿತು. ಬೆತ್ತದ ಆಸರೆಯಿಂದ ಏಳುವದೂ ಕಷ್ಟವಾಯಿತು. ಸೇವಕರ

ಆಸರೆಯಿಲ್ಲದೆ ಏಳುವ ಕೂಡ್ರುವ ಸ್ವಾತಂತ್ರ್ಯ ಹೋಗಿಬಿಟ್ಟಿತು. 'ಇನ್ನು ಈ ದೇಹಕ್ಕೆ ಹೆಚ್ಚು ಕಷ್ಟ ಏನು ಕೊಡಲಿ ? ಇವನ್ನು ಇದರ ಮಟ್ಟಿಗೆ ಚಲ್ಲಿ ಬಿಡುವದೆ ಲೇಸು' ಎಂದು ಮನದಲ್ಲೇ ನೆನೆದರೆಂದು ಕಾಣುತ್ತದೆ.

ಎಷ್ಟಾದರೂ ಸ್ವಯಂಪಾಕ ಶಿವಯೋಗಿಗೆ ಹೇಗೆ ಸಾಧ್ಯ? ತಾಯಂದಿರು ಮಾಡಿಕೊಟ್ಟಂತೆ ಹಿತವಾಗಬಲ್ಲದೆ ? ಶರೀರದ ಮೇಲೆಯೇ ಅಭಿಮಾನವಿಲ್ಲದ ಈ ಯೋಗಿ, ತನಗಾಗಿ ಅಡಿಗೆಯನ್ನು ಸರಿಯಾಗಿ ಕುಚ್ಚಿಕೊಳ್ಳಬಲ್ಲನೆ ? ಅಡುಗೆ ಮಾಡುವಾಗಲೂ ಶಿವಧ್ಯಾನದಲ್ಲೇ ಮೈಮರವಾಗುತ್ತಿತ್ತು. ಅನೇಕ ಸಲ ಕಾಯಲು ಇಟ್ಟ ಆಕಳ ಹಾಲು ಉಕ್ಕಿ ಬಂದು ಒಲೆಯ ಕೆಂಡದ ಮೇಲೆಯೆ ಅಭಿಷೇಕ ಮಾಡಿ ಆರಿಸುತ್ತಿತ್ತು. ಅಡುಗೆಯ ಕಡೆಗೆ ಪೂರಾ ಅಲಕ್ಷ್ಯ ಉಂಟಾಯಿತು. ಹೀಗಾಗಿ ಒಮ್ಮೆ ಹೊತ್ತಿದ ಅಡುಗೆ ಉಂಡರೆ ಇನ್ನೊಮ್ಮೆ ಹಸಿಬಿಸಿ ಪ್ರಸಾದ ಸೇವಿಸಬೇಕಾಗುತ್ತಿತ್ತು. ಅನ್ನದ ಸ್ಥಿತಿಯಂತೂ ಬೇಡವೇ ಬೇಡ. ಹಂಜಕ್ಕಿಯಾದ ಅನ್ನವನ್ನುಂಡದ್ದೇ ಹೆಚ್ಚು. ಅಷ್ಟೇ ಅಲ್ಲ; ಅಡುಗೆ ಎಷ್ಟೆಷ್ಟು ಕೆಡುತ್ತಿತ್ತೊ ಅಷ್ಟಷ್ಟು ಆನಂದವೇ ಆಗುತ್ತಿತ್ತಂತೆ ಶಿವಯೋಗಿಗೆ ! ಹೀಗಿರುವಾಗ ಮುಪ್ಪಿನ ಹೊಟ್ಟೆ ಹೇಗೆ ತಡೆದೀತು ? ಹಣ್ಣಾದ ಕರುಳುಗಳು ಹೇಗೆ ತಾನೆ ಸಹಿಸಿಯಾವು ? ಶಿವಯೋಗಿ ನಾಲಗೆಯನ್ನು ಮುರಿಯಲು ಹೋಗಿ ಹೊಟ್ಟೆಯನ್ನು ಕುಟ್ಟಿದ.

ಆದರೆ ಅವರ ಕರುಣ ಕಥೆ ಇಲ್ಲಿಗೇ ನಿಲ್ಲಲಿಲ್ಲ. ರಾಮುಗಡ್ಡಿ ಮಠದ ಧೂರ್ತ ವಟು ಸಾರಿನಲ್ಲಿ ಬೆರೆಸಿ ನೀಡಿದ ಭಯಂಕರವಾದ ಪ್ರಾಣನಾಶಕ ವಿಷವನ್ನು ಅವರು ತಮ್ಮ ಯೋಗಬಲದಿಂದ ತಡೆದಿದ್ದರು. ಪೂಜಾಬಲದಿಂದ ಪ್ರಾಣವನ್ನು ಗೆದ್ದಿದ್ದರು. ಪ್ರಸಾದವನ್ನು ಅಮೃತವೆಂದು ಭಾವಿಸಿ ಸೇವಿಸಿದ್ದರಿಂದ ಯಾವುದೇ ವೈದ್ಯರಿಗೆ ತೋರಿಸಲಿಲ್ಲ. ಅವರ ಪ್ರಖರ ತಪೋಬಲದ ಎದುರು ಆ ವಿಷದ ಚಿನ್ನಾಟ ನಡೆಯಲಿಲ್ಲವಾದರೂ ಅದು ಅವರ ಕರುಳ ಮೊಗ್ಗೆಯಲ್ಲಿ ಆಳವಾಗಿ ಅಡಗಿ ಕುಳಿತಿತ್ತು. ಅವರ ದೇಹ ಸಂಪೂರ್ಣ ಹಣ್ಣಾಗಲವಾದಾಗ ಅದು ಪರೆ ಬಿಚ್ಚಿದ ಹಾವಿನಂತೆ ತನ್ನ ಪರಿಣಾಮ ಬೀರ ಹತ್ತಿತು. ಕೆಲಕಾಲದಲ್ಲೇ ಕರುಳಿನಲ್ಲಿ ಗಂಟುಗಳಾಗಿ, ಅನ್ನಕೋಶ ಉಬ್ಬಿ, ಸಹಿಸಲಸಾಧ್ಯವಾದ ಭಾರೀ ವೇದನೆ ಸುರುವಾಯಿತು.ಮೊದಲೆ ಅಶಕ್ತಿ ಮೇಲೆ ಕರುಣಾಹೀನ ಬೇನೆಯ ಕಾಟ. ಒಂದೊಂದು ಸಲವಂತೂ ಉದರಶೂಲೆಯು

ಅತೀವ ವೇದನೆಯಿಂದ ಕೋಣೆಯತುಂಬ ಗಡಗಡನೆ ಉರುಳಾಡುತ್ತಿದ್ದರಂತೆ. ಆದರೂ ಹಕೀಮರಿಗೆ ತೋರಿಸಲೇ ಇಲ್ಲ. ಎಲ್ಲದಕ್ಕೂ 'ಶಿವನಿಚ್ಛೆ ಶಿವನಿಚ್ಛೆ' ಎಂದೆ ಅನುಭವಿಸತೊಡಗಿದರು. ಬರಬರುತ್ತ ಅನ್ನ ಕಟ್ಟತೊಡಗಿ ಕೊನೆಕೊನೆಗೆ ಪೂರಾ ಕಟ್ಟಿತು. ಒಂದು ತುತ್ತು ಹೊಟ್ಟೆಗೆ ಹಾಕಿದರೆ ಕರುಳುಗಳನ್ನು ಆರಿವೆ ಹಿಡಿದಂತಾಗುತ್ತಿತ್ತು. ಆಕಳ ಹಾಲು ಕೂಡ ದಕ್ಕದಂತಾಯಿತು.

ಆಗಲೆ ಶಿವಯೋಗಿಗಳಿಗೆ ತಮ್ಮ ಅಂತ್ಯ ಸೂಚನೆ ಹೊಳೆದು ಬಿಟ್ಟಿತೆಂದು ಕಾಣುತ್ತದೆ. ಮಾತಾಡಿಸಲು ಬಂದ ಭಕ್ತರು ಔಷಧ ಸೇವಿಸಲು ಒತ್ತಾಯ ಮಾಡತೊಡಗಿದರು. ಅವರಿಗೆ ತಮ್ಮ ದೇಹದ ಕಡಗೆ ಬಟ್ಟುಮಾಡಿ ತೋರಿಸುತ್ತ—

'ಇವನು ಹೊರಟು ನಿಂತಾನ್ರೆಪಾ. ಅದಕ್ಕs ಹಟಾ ಹಿಡಿದಾನು. ಹೋಗುವವನನ್ನ ನಿಲ್ಲಿಸಬಾರ್ದ್ರೆಪಾ. ಇವ ಹೋಗಲಿ, ಹೋಗಲಿ' ಎಂದು ಅನ್ನತೊಡಗಿದರು. ಕೆಲವರು ಹೊಟ್ಟೆಯ ಮಕ್ಕಳಂತೆ ಕಸವಿಸಿಗೊಂಡು ಕಂಗಾಲಾಗಿ ಕೇಳಿದರು—

'ಅಪ್ಪಾ, ಅವ ಯಾಕ ಹಟಾ ಹಿಡಿತಾನು ? ಇದೆಲ್ಲಾ ನಿಮ್ಮ ಹಟಾ. ಸಾವಿರ ಮಂದಿನ್ನ ಗುಣಮಾಡಿರಿ. ಇವನ್ನೊಬ್ಬನ್ನ ಗುಣಾ ಮಾಡಲಾರಿರಾ?'

'ಥೇ ಹುಚ್ಚ ಮಗನೆ. ಸಾವಿರ ಮಂದಿನ್ನ ಗುಣಾ ಮಾಡಿದವಾ ನಾ ಅಂತ ತಿಳಿದೀಯಾ ? ಅಲ್ಲೇ ತಪ್ಪೇ ನೋಡು. ನಾ ಅಲ್ಲಪಾ ನಾ ಅಲ್ಲಾ. ಆ ಶಿವಾ. ಅವನೇ ಮಾಡಿದ್ದು ಈ ಎಲ್ಲಾ ಲೀಲಾ !'

'ಬುದ್ಧಿ, ಆ ಶಿವ ನಿಮ್ಮ ದೇಹ ವಿಷದ ಜಡ್ಡಿನಿಂದ ಹಾಳಾಗಲೆಂದು ಲೀಲಾ ಮಾಡ್ತಾನೆಯೋ ?'

'ಮಾಡೋದ್ಯಾಕ, ಮಾಡಿಬಿಟ್ಟಾನು. ಅವನ ಗುಣಾನ ಹಂಗ ಐತೆಪಾ ಅದಕ್ಕ ಯಾರೇನು ಮಾಡ್ಯಾರು ?'

ಅಂತೂ ಶಿವಯೋಗಿಗಳಿಗೆ ಯಾರ ಮಾತೂ ನಾಟಲಿಲ್ಲ. ಅವರ ಉದರ ವ್ಯಾಧಿ ದಿನೇ ದಿನೇ ಉಲ್ಬಣವಾಗತೊಡಗಿತು, ಏಳುವ ಶಕ್ತಿಯು ಹೋಗಿ ಬಿಟ್ಟಿತು. ಹಾಸಿಗೆಯಲ್ಲಿ ಬಿಗಿದುಕಟ್ಟಿದಂತೆ ಅವರ ಅಮೃತ ದೇಹ ಒರಗಿಕೊಂಡಿತು. ಸ್ನಾನ ಪೂಜೆಗಳು ನಿಂತುಬಿಟ್ಟವು.

ಈ ವಾರ್ತೆ ಶಿವಯೋಗ ಮಂದಿರಕ್ಕೂ ಹೋಯಿತು. ಹಾನಗಲ್ಲ ಶ್ರೀಗಳು ಬಿಡುವಿಲ್ಲದ ಕಾರ್ಯದಲ್ಲಿ ತೊಡಗಿದ್ದರು. ಆದರೂ ಕೆಲವರು ಭಕ್ತರನ್ನು ಇಲಕಲ್ಲಿಗೆ ಓಡಿಸಿ, ಶಿವಯೋಗಿಗಳಿಗೆ ಹವೆ ಬದಲು ಮಾಡಿಕೊಳ್ಳಲು ಕಲಾದಗಿಯ ಕಡೆಗೆ ಹೋಗಬೇಕೆಂದೂ, ಅಲ್ಲಿ ಸಾವಳಿಗೆಯ ಪ್ರಖ್ಯಾತ ವೈದ್ಯನ ಹತ್ತಿರ ತೋರಿಸಿ ಔಷಧ ಸೇವಿಸಬೇಕೆಂದೂ ಕಟ್ಟಪ್ಪಣೆ ಮಾಡಿ ಹೇಳಿ ಕಳಿಸಿದರು. ಹಾನಗಲ್ಲ ಶ್ರೀಗಳ ಶಿಷ್ಯರು ಇಲಕಲ್ಲಿಗೆ ಬಂದು ಒತ್ತಾಯದ ಬೇಡಿಕೆಯನ್ನು ಶಿವಯೋಗಿಗಳ ಮುಂದೆ ಇಟ್ಟರು. ಆ ಮಾತು ಕೇಳಿ ಶಿವಯೋಗಿಗಳು-

'ಏನಪಾ.... ಹಾನಗಲ್ಲ ಕುಮಾರಪ್ಪಾ ಕಳಿಸಿದ್ಾ ನಿಮ್ಮನ್ನ? ಅವನಿಗೆ ಹೋಗಿ ಹೇಳ್ರಿ ನನ್ನ ಅಂತ್ಯ ಯಾತ್ರಾಕ ಮನೀದ ಐಾ ಅಂತ.'

ಎಂದರು. ಈ ಮಾತು ಕೇಳಿದ ಇಲಕಲ್ಲ ಭಕ್ತರು—

'ಬುದ್ಧೀ, ಇಂಥಾ ಮಾತು ಆಡಬೇಡಿರಿ. ನಮ್ಮನ್ನು ಜೀವದರ್ಶಲೆ ಕೊಲ್ಲಬೇಡಿರಿ. ಹಾನಗಲ್ಲ ತಾತಾ ಹೇಳಿದ್ದು ಪಾಲಿಸ್ರಿ. ಅದು ಶಿವನ ಆಜ್ಞೆ ಐತಿ. ಕೈಬಿಡಬ್ಯಾಡ್ರಿ.'

ಎಂದು ಮೊರೆಹೊಕ್ಕರು. ಆದರೆ ವಿಜಯ ಮಹಾಂತ ಶ್ರೀಗಳ ಮನೋಸಂಕಲ್ಪವನ್ನು ಅಲುಗಾಡಿಸಲು ಯಾರಿಂದಲೂ ಸಾಧ್ಯವಾಗಲಿಲ್ಲ.

ಈ ಸಲ ಹಾನಗಲ್ಲ ಶ್ರೀಗಳು ಹಾಗೂ ಹಾವೇರಿ ಶಿವಬಸವ ಸ್ವಾಮಿಗಳು ವಿಜಯ ಮಹಾಂತ ಶಿವಯೋಗಿಗಳಿಗಾಗಿ ಸಾವಳಗಿ ಸೀಮೆಯಲ್ಲಿ ಎಲ್ಲ ವ್ಯವಸ್ಥೆ ಮಾಡಿ, ಅಲ್ಲಿ ಹೋಗಲೇಬೇಕಕ್ಕದ್ದೆಂದು ಇಲಕಲ್ಲಿಗೆ ಎತ್ತಿನ ಬಂಡಿಕೊಟ್ಟು ಕಳಿಸಿದರು. ಕೊನೆಗೆ ಶಿವಯೋಗಿಗಳು ಮಠದಲ್ಲಿ ತಮ್ಮ ಶಿವಯೋಗ ಮಂಟಪದ ಸುತ್ತ ಕೂಡಿದ ಭಕ್ತರಿಗೆ ಹೇಳಿದರು—

'ಆಗಲಿ. ಅವನದೂ ಇಚ್ಛೆ ತೀರಿಯೇ ಬಿಡಲಿ. ಅವನು ಗೆಲ್ಲುತ್ತಾನೊ ನಾನು ಗೆಲ್ಲುತ್ತೇನೊ ನೋಡೋಣ. ಸಾಯುಮುಂದ ಅವನ ಹರಕೀ ಹೊತ್ತು ಯಾಕ ಹೋಗಲಿ. ಆಗಲಿ ನಡೀರೆಪಾ ಎತ್ತಿನ ಕೊಳ್ಳು ಕಟ್ರಿ'

ಎಂದರು. ಶಿವಯೋಗಿಗಳು ಏನೋ ಯಾಕೆ ಅನ್ನಲಿ ಹೊರಡಲು ತಯಾರಾದರೆಂದು ಇಲಕಲ್ಲ ಸದ್ಭಕ್ತರು ಹಿರಿಹಿರಿ ಹಿಗ್ಗಿದರು. ಹುನಗುಂದ, ಅಮೀನಗಡ, ಚಿತ್ತರಗಿ, ಬಾಗಲಕೋಟ ಮೊದಲಾದ ಭಾಗಗಳಿಂದ ಮಾತಾಡಿಸಲು ಬಂದ ಭಕ್ತರು ಪ್ರವಾಸದಲ್ಲಿ ಎಲ್ಲ ಅನುಕೂಲ ಮಾಡಿಕೊಡುವ ಹೊಣೆ

ಹೊತ್ತರು. ಅದೇ ಅವಸರದಲ್ಲಿ ಇಲಕಲ್ಲಿನ ಕಂಠಿ ರುದ್ರಪ್ಪನವರು ಈ ವಾರ್ತೆಯನ್ನು ಕೇಳಿ ಮೆಲ್ಲನೆ ಶಿವಯೋಗಿಗಳ ಬಳಿಗೆ ಬಂದು, ಒಂದು ಮಾತು ಹೇಳಿದರು.

'ಬುದ್ಧೀ, ಸಾವಳಗಿತನಾ ಬಂಡಿಯಾತ್ರಾ ಅಂದ್ರ ತ್ರಾಸ ಆಗತದ. ನಾವೇ ಸಾವಳಗಿಗೆ ಹೋಗಿ ಆ ವೈದ್ಯನನ್ನು ಇಲ್ಲಿಗೇ ಕರಕೊಂಡು ಬರತೀವಿ'

'ಛೇ ಬೇಡಪಾ. ಹಾನಗಲ್ಲಪ್ಪಾ ಹಟಾ ಹಿಡಿದಾನು. ಅದಕ್ಕೇ ಹೊರಟೇನಿ. ಅಲ್ಲದೆ ಆ ಸಾವಳಗಿ ವೈದ್ಯನ ನಸೀಬದಾಗ ನನ್ನನ್ನು ನೋಡೋದು ಇಲ್ಲಾ. ಅವನು ಅಲ್ಲೇ ನಾನು ಇಲ್ಲೇ. ಅಂದ ಮ್ಯಾಲೆ ಅವನ್ನ ಕರಸೂದು ಬ್ಯಾಡಾ. ಕರಸೀದ್ರೂ ಅವಾ ಬರೂದಿಲ್ಲಾ. ನಾನೇ ಹೋಗತೇನಿ'

ಕಂಠಿ ಯಜಮಾನರಿಗೆ ಶಿವಯೋಗಿಗಳ ಗೂಢೋಕ್ತಿ ಅರ್ಥವಾಯಿತು. ಆದರೆ ತುಟಿಬಿಚ್ಚಿ ಆಡಲಿಲ್ಲ.

ಮಠದ ಮಹಾದ್ವಾರದಲ್ಲಿ ಕಮಾನ ಗಾಡಿ ಸಿದ್ಧವಾಗಿ ನಿಂತಿತು. ದಣಿಯಲಾರದೆ ಓಡುವ ಎರಡು ಸೀಮಿ ಎತ್ತುಗಳನ್ನು ಅದಕ್ಕೆ ಹೂಡಿದ್ದರು. ಅದರ ಹಿಂದೆ ಕೆಲವು ಆಪ್ತ ಭಕ್ತರೂ ಸೇವಕರೂ ಶಿವಯೋಗಿಗಳ ಜೊತೆಗೆ ಹೋಗಲು ಇನ್ನೆರಡು ಬಂಡಿಗಳು ಸಿದ್ಧವಾದವು. ಇಬ್ಬರು ಅಂಗರಕ್ಷಕರಾದ ಕುದುರೆ ಸವಾರರು ಕುದುರೆಗಳನ್ನು ಏರಿ ಸಿದ್ಧವಾದರು. ಇನ್ನೇನು ಶಿವಯೋಗಿಗಳು ಹೊರಡುವ ಹೊತ್ತು. ಇಡೀ ಮಠದಲ್ಲೆಲ್ಲಾ ಗಂಭೀರ ಭೀಕರ ಮೌನ ಆವರಿಸಿತು. ಉಸಿರು ಬಿಟ್ಟರೆ ಎಲ್ಲಿ ಶಿವಯೋಗಿಗಳಿಗೆ ತ್ರಾಸಾಗುವದೋ ಎಂದು ಭಕ್ತರು ಸ್ತಬ್ಧರಾದರು. ಸುದ್ದಿ ಇಡೀ ಊರಿಗೇ ವ್ಯಾಪಿಸಿತು. ಒಮ್ಮೆಲೇ ಎಲ್ಲ ಸ್ತ್ರೀ–ಪುರುಷರು ಕೈಯಲ್ಲಿದ್ದ ಕೆಲಸ ಅಲ್ಲೇ ಒಗೆದು ಮಠಕ್ಕೆ ಓಡಿಬಂದರು. ಅವರೆಲ್ಲ ಮಠಕ್ಕೆ ಬಂದು ನೋಡುತ್ತಾರೆ; ಇಬ್ಬರು ಭಕ್ತರು ಶಿವಯೋಗಿಗಳನ್ನು ಬಗಲ ಆಸರೆಯ ಮೇಲೆ ಹೊತ್ತುಕೊಂಡು ಹೊರಗೆ ಬರುತ್ತಿದ್ದಾರೆ. ಕಾಲಮೇಲೆ ಕುಣಿಯುತ್ತ ನಡೆಯುವ ಶಿವಯೋಗಿ, ಕುದುರೆಯ ಮೇಲೆ ಕುಕ್ಕುಲೋಟದಿಂದ ಓಡುವ ಶಿವಯೋಗಿ ಇಂದು ಹಿಂಡಿ ಹಿಪ್ಪೆಯಾದ ಜೋಳದ ಪೆಂಡೆಯಂತೆ ಇಬ್ಬರ ರಟ್ಟೆಯ ಮೇಲೆ ಹಸುಗೂಸು ಒರಗಿದಂತೆ ಒರಗಿ ಬರುತ್ತಿದ್ದಾನೆ! ಹಿಂದೆ ಐದಾರು

ಜನ ಆಸರೆ ನೀಡಿದ್ದಾರೆ. ಕೆಲವರು 'ಸರಿಯಿರಿ ಸರಿಯಿರಿ' ಎಂದು ಗುಂಪು ಗೂಡಿದ ನೂರಾರು ಜನರನ್ನು ಪಕ್ಕಕ್ಕೆ ಸರಿಸುತ್ತಿದ್ದಾರೆ.

ಶ್ರೀಗಳು ಮೆಲ್ಲನೇ ಬಂಡಿಯ ಮೇಲೆ ಕುಳಿತುಕೊಳ್ಳುವ ಹೊತ್ತಿಗೆ– 'ಅಂಬೇ....ಅಂಬೇ....ಅಂಬೇ....ಅಂಬೇ....' ಎಂಬ ಆಕ್ರಂದನ ಕೇಳಿ ಬಂತು. ತಿರುಗಿ ನೋಡುತ್ತಾರೆ; ಮಠದ ಗೋಶಾಲೆಯಿಂದ ಮಾಂತಮ್ಮ ಕೊರಳಿಗೆ ಕಟ್ಟಿದ ಹಗ್ಗ ಹರಿದು ಓಡಿಬರುತ್ತಿದ್ದಾಳೆ! ಮಕ್ಕಳನ್ನು ಅಪಹರಿಸಿಕೊಂಡು ಹೋಗುವಾಗ ತಾಯಿ ಅರಚುವಂತೆ ಆಕ್ರಂದಿಸುತ್ತಾಳೆ. ಆ ಕರುಳು ಕತ್ತರಿಸುವ ಕಿರುಚನ್ನು ಕೇಳಿ ಊರಿನ ಜನರೆಲ್ಲ ಭೋ ಎಂದು ಅಳತೊಡಗಿದರು. ಹೌಹಾರಿದ ಹೆಣ್ಣುಮಕ್ಕಳು ಸೆರಗು ಮುಚ್ಚಿ— 'ನಮ್ಮ ತಂದಿ ನಮ್ಮನ್ನ ಮಣ್ಣಾಗ ಬಿಸಾಕಿ ಹೊರಟಾ' ಎಂದು ಒಬ್ಬರನ್ನೊಬ್ಬರು ಅಪ್ಪಿ ರೋದಿಸ ತೊಡಗಿದರು. ಊರಿನ ಹಿರಿಯರು, ಮುದುಕರು ಕೂಸುಗಳಂತೆ— 'ಅಪ್ಪಾ ನಮ್ಮನ್ನು ಬಿಟ್ಟುಹೋಗುತ್ತೀಯಾ? ನಮ್ಮ ಮೇಲೆ ಸಿಟ್ಟು ಬಂದಿತೇ ನಿಮಗೆ? ನಾವೇನು ಅಪರಾಧ ಮಾಡಿದೆವು? ಎಂದು ಗೋಳಾಡಿ ಅಳತೊಡಗಿದರು. ಮಠಕ್ಕೆ ಮಠವೇ– 'ಹೋಗಬೇಡ....ಹೋಗಬೇಡ....ಹೋಗಬೇಡ' ಎಂದು ಚೀರಿದಂತಾಯಿತು. ಮಠದ ಗೋಡೆಗಳು ಕೂಡ ಜೀವ ಬಂದ ದೇವತೆಗಳಂತೆ ಎದೆಯೊಡೆದು ಕೂಗಹತ್ತಿದವು. ಅಲ್ಲಿಯ ಪ್ರತಿಯೊಂದು ಕಲ್ಲುಗಳ ಸಹ 'ಅಜ್ಜಾ... ಅಜ್ಜಾ....ಅಜ್ಜಾ....ದಮ್ಮಯ್ಯ ಹೋಗಬೇಡ' ಎಂದು ಚಿಟ್ಟನೆ ಚೀರಹತ್ತಿದವು. ಶಿವಯೋಗಿಯ ಪಾದದಿಂದ ಪುನೀತಳಾದ ಮಠದ ಭೂಮಿ ತಾಯಿ ಸೆರಗು ಹಾಸಿ— 'ಬೇಡ ಅಪಯ್ಯ........ ಇದನ್ನು ನಾನು ಕಣ್ಣಿಂದ ನೋಡಲಾರೆ. ಈ ಕಷ್ಟ ತಾಳಲಾರೆ........' ಎಂದು ಬೇಡಿದಂತಾಯಿತು.

ಮಾಂತಮ್ಮನ ಕರುಣೆಯ ಕೂಗಂತೂ ಕಣ್ಣೀರಿಗೆ ಕಳಸವಿಟ್ಟಿತು. ಓಡಿಬಂದವಳೇ ಶಿವಯೋಗಿಯ ಪಾದವನ್ನು ನೆಕ್ಕಹತ್ತಿದಳು. ಪ್ರತಿಸಲವೂ ದೂರದ ಪ್ರವಾಸಕ್ಕೆ ನಡೆದಾಗ— 'ಏನಮ್ಮಾ ಮಾಂತಮ್ಮಾ, ನಿನ್ನ ಅಪ್ಪಣೆಯೆ?'' ಎಂದು ಶಿವಯೋಗಿಗಳು ಅವಳ ಅನುಮತಿ ಕೇಳುತ್ತಿದ್ದರು. ಅವಳು ಗೋಣುಹಾಕಿ ಒಪ್ಪಿಗೆ ನೀಡಿದಾಗಲೆ ಮುಂದೆ ಸಾಗುತ್ತಿದ್ದರು. ಈ ಸಲ ಅವರು ಮರೆತರೂ ಮಾಂತಮ್ಮ ಮರೆಯಲಿಲ್ಲ. ಶಿವಯೋಗಿ

ಗಳು ಅಷ್ಟೊಂದು ಕಷ್ಟದಲ್ಲಿಯೂ ಅವಳ ಗಂಗೆದೊಗಲಿನ ಮೇಲೆ ಕೈಯಾಡಿಸಿ—

'ಯಾಕೆ ಅಳುವಿ ಮಾಂತವ್ವಾ? ಸುಮ್ಮನಾಗಬಾರದೇ? ನಾನೇನು ಅತ್ತೇ ಹೋಗುತ್ತೇನೆಯೆ? ಬೇಗ ಬರುತ್ತೇನೆ ತಾಯಿ, ಹುಂ....ನನಗೆ ಶುಭ ದಿಂದ ಬೀಳ್ಕೊಡು. ಏನವ್ವಾ, ಈ ಯಾತ್ರೆಗೆ ನಿನ್ನ ಅಪ್ಪಣೆ ಇದೆಯೆ?'

ಎಂದು ಕೇಳಿದರು ಪ್ರತಿಸಲ ಗೋಣುಹಾಕಿ ಒಪ್ಪಿಗೆ ನೀಡುತ್ತಿದ್ದ ಮಾಂತಮ್ಮ ಈ ಸಲ ನೆಲಕೆ ತಲೆಬಾಗಿಸಿ ನಿಂತುಬಿಟ್ಟಳು. ಶಿವಯೋಗಿಗಳಿಗೆ ಥಟ್ಟನೆ ಶಿವನ ಇಚ್ಛೆ ಏನೆಂಬುದು ತಿಳಿದುಬಿಟ್ಟಿತು. ಆದರೂ ಗತ್ಯಂತರವಿಲ್ಲ. ಅವರೂ ಮೆಲ್ಲನೆ—

'ಆಗಲವ್ವಾ ತಾಯಿ. ತಿಳಿಯಿತು. ಹೋಗಿಬರುತ್ತೇನೆ.'

ಎಂದು ನಡೆದರು.

ಬಂಡಿ ಹೊರಟಿತು. ಅದರೊಂದಿಗೆ ಊರಿನ ಕಣ್ಣೀರ ಕೋಡಿಯೂ ಹರಿಯಿತು. ಮಠ ಬರಿದಾಯಿತು. ದಾರಿಯಲ್ಲಿ ಹೆಜ್ಜೆ ಹೆಜ್ಜೆಗೂ ಮುತ್ತೈದೆ ಯರು ಆರತಿ ಮಾಡಿದರು— 'ತಂದೇ ಗುಣಾ ಆಗಿ ಬಾ ತಂದೇ. ಕರುಳು ಹರಕೊಂಡು ಹೋಗಬ್ಯಾಡಾ' ಎಂದು ಅಂಗಲಾಚಿ ಬೇಡಿದರು. ಇನ್ನು ಕೆಲವರು ತಮ್ಮ ಕೂಸುಗಳಿಗೆ ಶಿವಯೋಗಿಯ ಪಾದದರ್ಶನವನ್ನು ಮಾಡಿಸಿ— 'ಇದೇ ಕಡೆ ದರ್ಶನ ಮಾಡಬೇಡ ಅಪ್ಪಾ' ಎಂದರು.

ಬಂಡಿ ಊರಹೊರಗಿನ ಅಗಸೆಗೆ ಬಂದಿತು. ಶಿವಯೋಗಿಗಳು ಎಲ್ಲರಿಗೆ ಅಪ್ಪಣೆ ಮಾಡಿದರು—

'ಎಲ್ಲರೂ ನಿಲ್ಲಿರಿ. ಅಂಜಬೇಡಿರಿ. ಈ ದೇಹ ಇಲ್ಲಿಗೇ ಬರುತ್ತದೆ'

ಇಲಕಲ್ಲಿನ ತಂದೆಯನ್ನು ಹೊತ್ತುಕೊಂಡು ಬಂಡಿಯವ ಎತ್ತುಗಳನ್ನು ಓಡಿಸಿದ. ಅದು ದೂರ ದೂರ ಮರೆಯಾಗುವವರೆಗೆ ಜನರೆಲ್ಲಾ ನಿಂತು ನೋಡಿದರು. — 'ಅಯ್ಯೋ ಬಡವರ ತಂದೆ ಹೊರಟಾ, ಗುಣಾ ಆಗಿ ಬರಲಿ ಶಿವನೇ' ಎಂದು ಅನಾಥರು ಯಾಚಿಸಿದರು. ಹೆಂಗಳೆಯರು ಎದೆಯುಕ್ಕಿ ಕಂಠ ಬಿಗಿದು ಬಿಕ್ಕಿ ಬಿಕ್ಕಿ ಅತ್ತರು— 'ನಮ್ಮಪ್ಪಗ ಆ ಶಿವಾ ಇಂಥಾದ್ದು ಯಾಕರೆ ತಂದಿದ್ದಾನವ್ವಾ' ಎಂದು ಗೋಳಿಟ್ಟರು. ಇನ್ನು ಕೆಲ

ವರು — 'ಆ ಮಾರಾಯಾ ನಮ್ಮನ್ನ ಪರದೇಶಿ ಮಾಡಬಾರ್‍ದು. ಇನ್ನೂ ನಾವು ನೆತ್ತಿ ಬಲಿಯದ ಕೂಸುಗಳು' ಎಂದರು.

ಇಲಕಲ್ಲಿನ ಎತ್ತರದ ಅಗಸೆಯ ಬಾಗಿಲವೂ ಮೂಕವಾಗಿ ನಿಂತಿತು, ಪುರದೇವಿ ಬನಶಂಕರಿ ತನ್ನ ನತ್ತೊಡೆದು ರೋದಿಸುತ್ತ, ಕೈಯೆತ್ತಿ– 'ಹೋಗಿ ಬಾ ಶಿವಯೋಗಿ' ಎಂದು ಬೀಳ್ಕೊಟ್ಟಳು.

ಆಗ ಹಕ್ಕಿಗಳು ಶೋಕಗೀತೆ ಹಾಡಿದವು. ಮೋಡಗಳು ಕಣ್ಣೀರು ಸುರಿಸಿದವು. ಮಂದಮಾರುತ ಉಸಿರು ಕಟ್ಟಿನಿಂತ. ಮರ–ಬಳ್ಳಿ–ಹೂ–ಹಣ್ಣು – ನೆಲ – ಹೊಲ – ಜಲ – ಆಕಾಶ–ಪಕ್ಷಿ – ಪ್ರಾಣಿಗಳೆಲ್ಲ ಮೂಕವಾಗಿ ಪ್ರಲಾಪಿಸಿದವು.

ದಾರಿಯಲ್ಲಿ ಬಂಡಿಯನ್ನು ಎಷ್ಟೊಂದು ಗುಪ್ತವಾಗಿ ಸಾಗಿಸಿದರೂ ಹಳ್ಳಿಗರು ಪತ್ತೇ ಹಚ್ಚಿ ಬಂದು ಪಾದದರ್ಶನ ಪಡೆದರು. ಹಲವರು ದರ್ಶನ ದೊರೆಯದೆ ಆ ಚಕ್ಕಡಿಗೇ ಸಾಷ್ಟಾಂಗ ಹಾಕಿದರು. ಹುನಗುಂದ, ಅಮೀನಗಡ, ಚಿತ್ತರಗಿಯ ಭಕ್ತರು 'ಇದೇನು ವಿಚಿತ್ರ'ವೆನ್ನುತ್ತ ದಂಗಾಗಿ ಬಂದರು. ಎಲ್ಲರಿಗೂ ದರ್ಶನ ನೀಡುವದು ಸಾಧ್ಯವೇ ಇರಲಿಲ್ಲ. ಬಂಡಿ ಹಾಗೇ ದಾಟಿ ಹೋಯಿತು. ಭಕ್ತರೆಲ್ಲ ಚಾಚಿದ ಕೈಗಳಿಂದ, ತೆರೆದ ಬಾಯಿಂದ ಬಿರಿದ ಕಣ್ಣುಗಳಿಂದ ನೋಡುತ್ತ ನಿಂತರು.

ಮರುದಿನ ಸಂಜೆ ಕಲಾದಗಿಯಲ್ಲಿ ವಸತಿ ಮಾಡಬೇಕಾಯಿತು. ಒಂದು ರಾತ್ರಿ ಕಳೆಯುವದೆಂದರೆ ಯಮಯಾತನೆ ಎನಿಸಿತು. ಹೊಟ್ಟೆಯಲ್ಲಿ ಬೆಂಕಿಯ ಕೆಂಡ ಸುರುವಿ ಕಡಗೋಲಿನಿಂದ ಮೊಗಚಿದಂತೆ ನೋವು ಅನ್ನಿಸಿತು. ದೇಹವೆಲ್ಲ ಉರಿ ಆಯಿತು. ಆದರೂ ಶಿವಯೋಗಿ ಪಂಚಾಗ್ನಿಗಳ ಮಧ್ಯದಲ್ಲಿ ಕುಳಿತ ತಪಸ್ವಿಯಂತೆ ಎಲ್ಲವನ್ನೂ ತಾಳಿಕೊಂಡ. ನಡುನಡುವೆ— 'ಶಿವನೇ ನಿನ್ನ ಇಚ್ಛಾ....ನಿನ್ನ ಇಚ್ಛಾ' ಎಂದು ಉದ್ಗಾರ ತೆಗೆಯುತ್ತಿದ್ದರು. ಒಮ್ಮೊಮ್ಮೆ—'ತಂದೆ ನಿನಗೆ ಆನಂದವಾಯಿತೆ ?' ಎಂದು ಅನ್ನುತ್ತಿದ್ದರು. ಇನ್ನೂ ಗಾಢವಾದ ಕತ್ತಲೆ ಇದ್ದಾಗಲೇ ಸೇವಕರನ್ನು ಕರೆದು— 'ಎಲ್ಲಾ ಕಡೆ ಬಿಸಿಲು ಬಿದ್ದೈತಲ್ಲೋ. ಬಂಡಿ ಹೂಡಿರಿ' ಎಂದರು. ಆಗ ಆತ ಮೆಲ್ಲಗೆ— 'ಇಲ್ರಿ ಬುದ್ಧೀ....ಇನ್ನೂ ಕತ್ತಲ ಐತಿ.... .... ಮಲಗಿಕೊಳ್ರಿ' ಎಂದನು. ಅದಕ್ಕೆ ಶಿವಯೋಗಿಗಳು— 'ಎಲ್ಲಾ ಕಡೆ ಬೆಳಕ ಐತಲ್ಲಪಾ. ಬರೀ ಬೆಳಕ

ಕಾಣತೈತಿ. ಆದ್ಯಾಂಗ ನಿನಗ ಕಾಣೂದಿಲ್ಲ' ಎಂದರು. ಇಡೀ ರಾತ್ರಿ ಭಕ್ತರೆಲ್ಲ ಕಣ್ಣು ಮಿಳುಕಿಸದೆ ಶಿವಯೋಗಿಗಳ ಶರೀರವನ್ನು ಕಾಯ ಬೇಕಾಯಿತು. ಅವರ ಸ್ಮರಣಶಕ್ತಿ ಮೆಲ್ಲನೆ ಜಾರುತ್ತಿರುವದು ಕಂಡು ಬಂದಿತು. ಮುಖಚರ್ಯೆ ಪಲ್ಲಟವಾದಂತೆ ಭಾಸವಾಯಿತು. ಒಂದು ರಾತ್ರಿ ಕಳೆಯುವದೆಂದರೆ ಒಂದು ಯುಗವಾಗಿ ಪರಿಣಮಿಸಿತು. ಕೊನೆಗೆ ಸೂಜಿಯ ಮೇಲೆ ತಪಕ್ಕೆ ಕುಳಿತಂತೆ ರಾತ್ರಿ ಹೇಗೋ ಸರಿದು ಹೋಯಿತು.

# ಲಿಂಗೈಕ್ಯ !

ಮರುದಿನ ಮತ್ತೆ ಬಂಡಿ ಹೂಡಿ ಪ್ರಯಾಣ ಪ್ರಾರಂಭವಾಯಿತು. ಮಾರ್ಗದಲ್ಲಿ ಘಟಪ್ರಭಾ ನದಿಯನ್ನು ದಾಟಬೇಕಾಯಿತು. ಬಂಡಿಯವನು ಕೆಳಗಿಳಿದು, ಎತ್ತುಗಳನ್ನು ಸಾವರಿಸುತ್ತ ಚಕ್ಕಡಿಯನ್ನು ನದಿಗೆ ಇಳಿಸಿದನು. ಶಿವಯೋಗಿಗಳು ಕೇಳಿದರು—

'ಏನಪಾ, ಶಿವಯೋಗಮಂದಿರ ಬಂತೇನು ?'

ಪಕ್ಕದಲ್ಲಿ ಕುಳಿತ ಭಕ್ತ ಆಚ್ಚರಿಯಿಂದ ಹೇಳಿದ— 'ಇಲ್ಲ ಬುದ್ಧೀ, ನಾವು ಶಿವಯೋಗಮಂದಿರಕ್ಕೆ ಹೊರಟಿಲ್ಲ. ಸಾವಳಿಗಿಗೆ ಹೊರಟೇವಿ'

ಅದಕ್ಕೆ ಶ್ರೀಗಳು—

'ಬೇಡಪ್ಪಾ, ಸಾವಳಿಗಿ ಅಂದರೆ ಸಾವು. ಸಾವಿಗ್ಯಾಕ ಕರಕೊಂಡು ಹೊರಟಿ ? ಶಿವಯೋಗಕ್ಕೆ ಒಯ್ಯಪಾ'

ಎಂದರು. ಭಕ್ತ ಸಮಾಧಾನಕ್ಕೆಂದು ಹೇಳಿದ— 'ಆಗಲಿ ಬುದ್ಧೀ, ಸಾವಳಿಗಿಗೆ ಬೇಡಾ, ಶಿವಯೋಗಮಂದಿರಕ್ಕೆ ಹೋಗೂನು'

ಮತ್ತೆ ಶ್ರೀಗಳು ಕೇಳಿದರು— 'ಏನೋ.... ಕೆಳಗೆ ಜುಳು ಜುಳು ಜುಳು ಅಂತ ಸಪ್ಪಳ ಬರಲೈತಲ್ಲಾ ? ಏನದು ?'

'ಇದು ಘಟಪ್ರಭಾ ನದಿ ಬುದ್ಧೀ. ನಾವು ಈಗ ನದೀಮ್ಯಾಲೆ ಆದೇವಿ. ಅದನ್ನ ದಾಟಾಕ ಹತ್ತೇವಿ'

'ಆಂ....? ಯಾವ ನದಿ ಅಂದಿ ?'

'ಘಟಪ್ರಭಾ ನದಿ ಬುದ್ಧೀ'

'ಲೇ ಹುಚ್ಚಾ. ಇದು ಘಟಪ್ರಭಾ ಆಲ್ಲೋ.... .... ಮಲಪ್ರಭಾ. ಶಿವಯೋಗಮಂದಿರಕ್ಕೆ ಹೊರಟೇವಿ ಘಟಪ್ರಭಾ ಹೆಂಗ ಹತ್ತತದೋ ?'

ಮತ್ತೆ ಸೇವಕ ಅವರ ಸಮಾಧಾನಕ್ಕೆ ಹೇಳಿದ— 'ಹೌದು ಬುದ್ಧಿ ಇದು ಮಲಪ್ರಭಾ'

ಒಂದು ನಿಮಿಷ ಶಾಂತವಾಗಿ ಕಳೆಯಿತು. ಆಗ ಮಲಗಿದ ಶಿವಯೋಗಿಗಳು ಒಮ್ಮೆಲೆ ಥಟ್ಟನೇ ಎದ್ದು ಕುಳಿತರು. ಅಲ್ಲಾಡಲು ಕೂಡ ಶಕ್ತಿ ಇಲ್ಲದವರು ಹೀಗೇಕೆ ಎದ್ದು ಕುಳಿತರೆಂದು ಸೇವಕ ಅಂಜಿ ಕೇಳಿದ—

'ಬುದ್ಧೀ ಬುದ್ಧೀ ಮಲಗಿರಿ, ಮಲಗಿರಿ. ಯಾಕೆ ಎದ್ದು ಕುಳಿತಿರಿ?'

ಶ್ರೀಗಳು ಹೇಳಿದರು—

'ಮಲಪ್ರಭಾ ಕರ್‍ಯಾಕತ್ತಾಳಪಾ. ಆಕೀಗೆ ಭೆಟ್ಟಿಕೊಡದ ಶಿವಯೋಗಕ್ಕ ಹ್ಯಾಂಗ ಹೋಗೂದು?'

ಸೇವಕ ಆಶ್ಚರ್‍ಯಗೊಂಡ. ಸುಮ್ಮನೇ ಕೈಮುಗಿದು ಕುಳಿತ. ಆಗ ಮತ್ತೆ ಶ್ರೀಗಳೇ ಹೇಳಿದರು—

'ಬಂಡಿ ನಿಲ್ಲಿಸಲೇ.... ಬಂಡಿ ನಿಲ್ಲಿಸು. ಇಲ್ಲಿ ನಮ್ಮ ಪೂಜಾ ಆದ ಇವತ್ತ. ಲಿಂಗಪೂಜಾದ ವ್ಯಾಳೇ ಆಗೈತಿ, ಹಾಗೇ ಹೊರಟಿಯಲ್ಲಾ' ಎಂದರು.

ಸೇವಕ ಬಂಡಿಯವನನ್ನು ಕೂಗಿ ನಿಲ್ಲಿಸಿದ. ಆಗಲೆ ಬಂಡಿ ನದಿಯ ಇನ್ನೊಂದು ದಡಕ್ಕೆ ಬಂದು ಪಾದ ಮುಳುಗುವಷ್ಟು ನೀರಲ್ಲಿ ನಿಂತಿತ್ತು. ಶಿವಯೋಗಿಗಳು ಯಾರ ಆಶ್ರಯವನ್ನೂ ಕೇಳದೆ ಇಳಿಯಲಿಕ್ಕೆ ಹೊರಟರು. ಆಗ ಸೇವಕ ಅವರನ್ನು ತಡೆದು—

'ಬುದ್ಧೀ....ಬುದ್ಧೀ...ಕೈ ಮುಗಿತೇನಿ. ಸುಮ್ಮನ ಮಲಕೊಳ್ರಿ. ಇದು ನದಿ ಐತಿ' ಎಂದ.

ಅದಕ್ಕೆ ಶ್ರೀಗಳು—

'ಲೇ ಸರಿಯೋ, ನದಿ ಐತಿ ಅಂದ ಮ್ಯಾಲೆ ನಮ್ಮ ಲಿಂಗಪೂಜಾ ಆಗಬೇಕು'

ಎಂದು ಬಂಡಿಯ ಹಿಂಗಡೆಯ ತೋಳಗಳನ್ನು ಹಿಡಿದು, ಉದ್ದಿಗೆಯ ತುದಿಗೆ ಬರಹತ್ತಿದರು. ಅವರ ದೇಹದಲ್ಲಿ ಸಂಚಾರವಾದ ಅಗಾಧ ಶಕ್ತಿಯನ್ನು ಕಂಡು ಸೇವಕ ತಬ್ಬಿಬ್ಬಾಗಿ ಹೋದ. ಶಿವಯೋಗಿಗಳ ಆಶ್ರಯಕ್ಕೆ ಹಿಂದಿನ ಬಂಡಿಯವರನ್ನೂ ಕರೆದ. ಅವರೂ ಓಡಿ ಬಂದರು. ಅವರ ಜೊತೆಗೆ ಹಡಗಲಿ ಮಠದ ಅಯ್ಯಪ್ಪಯ್ಯನೆಂಬ ಭಕ್ತನೂ ಬಂದಿದ್ದ. ಎಲ್ಲರೂ ಕೂಡಿ ಶಿವಯೋಗಿಗಳಿಗೆ ವಿಶ್ರಾಂತಿ ಮಾಡಲು ಹೇಳಿದರು. ಯಾವುದಕ್ಕೂ ಶಿವಯೋಗಿಗಳು ಸರಿಯಲಿಲ್ಲ. ಎಲ್ಲರೂ ಮುಗಿದು—

'ಬೇಡ ಬುದ್ಧಿ ಇಳಿಯಬೇಡಿರಿ. ಈಗ ನಿಮಗೆ ಬಹಳ ಜಡ್ಡು ಇದೆ. ಸ್ನಾನ ಮಾಡಬಾರದು' ಎಂದರು.

ಅದಕ್ಕೆ--

'ಲೇ....ನನಗೆಲ್ಲಿದೆಯೋ ಜಡ್ಡು? ಈಗ ಆರಾಮ ಆಗೇನಿ. ಬಹಾಳ ಆರಾಮ ಆಗೇನಿ. ಸರಿ ಸರಿ'

ಎಂದು ಎಲ್ಲರನ್ನು ಕಸುವಿನಿಂದಲೆ ಸರಿಸಿ ಇಳಿಯಹೋದರು. ಯಾರು ಏನು ಅಂದರೂ ಕೇಳಲಿಲ್ಲ. ಹಿಂದಿನ ಬಂಡೆಯಲ್ಲಿ ಬಂದ ಭಕ್ತರು, ಕಾವಲಿನ ಕುದುರೆ ಸವಾರರು ಅವಕ್ಕಾಗಿ ನಿಂತರು. ಶಿವಯೋಗಿಗಳು ಯಾರಿಗೂ ಮಿಸುಗ ಲಿಲ್ಲ. ಅವರ ಶರೀರದಲ್ಲಿ ಯಾವುದೊ ಅಕಲ್ಪಿತ ಶಕ್ತಿಯೊಂದು ಕಾರ್ಯ ಮಾಡುತ್ತಿದ್ದಂತೆ ತೋರಿತು. ಆಗ ಅವರು ಚಕ್ಕಡಿಯ ಹಿಂದಿನ ಉದ್ದಿಗೆ ಯಿಂದ ನದಿಗೆ ಇಳಿದೇ ಬಿಟ್ಟರು. ಏಳಲು ಶಕ್ತಿ ಇಲ್ಲದವರು ನದಿಗೆ ಇಳಿದದ್ದನ್ನು ಕಂಡು ಎಲ್ಲೂರ— 'ಇವರಿಗೆ ಈಗ ಗುಣವಾಗಿಯೇ ಬಿಟ್ಟಿತು' ಎಂದು ಕ್ಷಣ ಕಾಲ ಭಾಪಿಸಬೇಕಾಯಿತು. ಶಿವಯೋಗಿಗಳು ನೀರಿಗೆ ಇಳಿದು ಎರಡು ಹೆಜ್ಜೆ ನಡೆದರು. ಆಗ ಸೇವಕರು ರಟ್ಟೆಯಲ್ಲಿ ಆಸರೆಗೆ ಕೈಹಾಕಿ--

'ಬುದ್ಧೀ ಈಗ ನಿಮ್ಮ ಸ್ನಾನ ಆತು. ಏಳಿರಿ'

ಎಂದರು. ಶಿವಯೋಗಿಗಳು ಅವರ ಮಾತಿಗೆ ಸೊಪ್ಪು ಹಾಕಲಿಲ್ಲ, ತಮ್ಮ ರಟ್ಟೆ ಹಿಡಿದು ಆಶ್ರಯ ನೀಡಿದವರನ್ನೆಲ್ಲ ಕಸುವಿನಿಂದ ಸರಿಸಿದರು. ನದಿಯಲ್ಲಿ ಮತ್ತೆ ಮತ್ತೆ ಮುಂದೆ ನಡೆದರು. ಕಂಗೆಟ್ಟ ಭಕ್ತರು--

'ಅಪ್ಪಾ.... ಇಲ್ಲಿ ತಿರುಗಣಿ ಮಡು ಇದೆ. ಬೇಡ, ಬೇಡ' ಎಂದರು. ಆದರೂ ಶ್ರೀಗಳು ಮತ್ತೆ ಎರಡು ಹೆಜ್ಜೆ ನಡೆದೇ ಬಿಟ್ಟರು. ಎರಡು ತಿಂಗಳು ಗಳಿಂದ ಅನ್ನ ಇಲ್ಲದವರು ನಗುನಗುತ್ತಲೆ ನಡೆದರು. ನೀರು ಮೊಣಕಾಲಿನ ವರೆಗೆ ಬಂತು. ಅಲ್ಲಿಯೇ-- 'ತಾಯಿ...ತಾಯಿ... ನಿನ್ನ ಮಗನವಾ ನಾನು ಶಿವಯೋಗಮಂದಿರಕ್ಕೆ ಹೊರಟೇನಿ' ಎಂದು ಅನ್ನುತ್ತ ಒಂದು ಸಲ ನೀರಲ್ಲಿ ಮುಳುಗು ಹಾಕಿದರು. ಮೇಲೆದ್ದರು. 'ಶಿವಶಿವಾ ನಿಂದಪಾ....ನಿಂದಪಾ....' ಎನ್ನುತ್ತ ಮತ್ತೊಮ್ಮೆ ಮುಳುಗಿದರು. ಅವರ ದೇಹ ಎಷ್ಟೆಂದು ತಡೆದೀತು? ಮುಳುಗಿದಂತೆಯೇ ಮೂರ್ಛೆ ಹೋಗಿ ಬಿದ್ದರು! ಪಕ್ಕದಲ್ಲಿದ್ದ ಕುದುರೆ ಸವಾರರು, ಅಂಗರಕ್ಷಕರು, ಸೇವಕರು, ಬಂಡಿಯವರು, ಭಕ್ತರು ಮುಗಿಬಿದ್ದು ಹೋಗಿ ಶಿವಯೋಗಿಗಳನ್ನು ಎತ್ತಿಕೊಂಡು ಬಂದರು. ತೊಯ್ದು ತಪ್ಪಡಿಯಾ ಗಿದ್ದ ಅವರ ದೇಹ ಚಳಿಯಿಂದ ಸೆಟೆಯುತ್ತಿತ್ತು. ಎಲ್ಲರೂ ಗಾಬರಿಯಾಗಿ

ದಂಡೆಗೆ ತಂದು ಉಪಚರಿಸಿದರು. ಬಟ್ಟೆ ಬದಲಿಸಿದರು. ಅಂಗಾಂಗಗಳೆಲ್ಲ ತಿಕ್ಕಿದರು. ಆದರೆ ಹೋದ ಮೂರ್ಛೆ ಹೊರಳಿ ಬರಲಿಲ್ಲ. ಶಿವಯೋಗಿಗಳು ಪ್ರಜ್ಞಾಹೀನ ಸ್ಥಿತಿಯಲ್ಲೇ ಬಿದ್ದುಬಿಟ್ಟರು. ಸೇವಕರು ಮೈ ಕೈ ಕಾಸಿದರು. ಕೂಗಿದರು. ಆದರೆ ಅವರ ಮೂರ್ಛೆ ಸರಿಯಲಿಲ್ಲ. ಮಾಡಬೇಕಾದ ಎಲ್ಲ ಪ್ರಯತ್ನಗಳನ್ನೂ ಮಾಡಿಯಾಯಿತು. ಶಿವಯೋಗಿ ಕಣ್ತೆರೆಯಲಿಲ್ಲ ! ಉತ್ತರ ನೀಡಲಿಲ್ಲ !! ಬಲ್ಲವರೂ ಅವರ ನಾಡಿಗಳನ್ನು ಹಿಡಿದು ನೋಡಿದರು. ನಾಡಿ ಮಿಡಿತ ಇತ್ತು. ಆದರೆ ಎಚ್ಚರವಾಗುವಂತೆ ತೋರಲಿಲ್ಲ.

ತಕ್ಷಣವೆ ಹತ್ತಿರದಲ್ಲಿದ್ದ ಹಡಗಲಿಮಠದ ಅಯ್ಯಪ್ಪಯ್ಯ ಬೆದರಿ ಹೌಹಾರಿ ಕಲಾದಗಿಗೆ ಓಡಿ ಹೋದ. ಬಾಗಿಲಕೋಟೆ ಹಾಗೂ ಇಲಕಲ್ಲಿನ ಭಕ್ತರಿಗೆ ತಾರು ಮಾಡಿದ. ಶಿವಯೋಗಿಗಳನ್ನು ಚಕ್ಕಡಿಯಲ್ಲಿ ಹಾಕಿ ಹೊರಳಿ ಕಲಾದಗಿಗೆ ಸಾಗಿಸಲಾಯಿತು. ಕಲಾದಗಿಯ ಪಟ್ಟಾಧ್ಯಕ್ಷ ಸ್ವಾಮಿಗಳು ಶ್ರೀಗಳ ಸೇವೆಗೆ ನಿಂತರು. ಆ ಊರಿನ ಅನೇಕ ವೈದ್ಯರನ್ನು ಬರಮಾಡಿಕೊಂಡರು. ಎಲ್ಲರೂ ಎಷ್ಟು ಪ್ರಯತ್ನಿಸಿದರೂ ಶಿವಯೋಗಿಗಳಿಗೆ ಮರುಸ್ಮೃತಿ ಬರಲೇ ಇಲ್ಲ. 'ಇನ್ನು ಇದು ಶಿವನ ಕೈಯಲ್ಲಿದೆ' ಎಂದು ಅವರೂ ನುಡಿದುಬಿಟ್ಟರು. ಕಲಾದಗಿಯ ಜನರಿಗೆ ಶಿವಯೋಗಿಯ ಸ್ಥಿತಿ ಕಂಡು ಮಹಾ ಕಳವಳವಾಯಿತು. ಇದು ಅವರ ಅಂತ್ಯಾವಸ್ಥೆಯೇ ಎಂದು ಅವರಿಗೆ ಭರವಸೆಯಾಗಲು ಬಹುಕಾಲ ಹತ್ತಲಿಲ್ಲ, ಅವರ ದಿವ್ಯ ಸಮಾಧಿಯನ್ನು ತಮ್ಮ ಊರಲ್ಲೆ ಮಾಡಬೇಕೆಂದು ನಿಶ್ಚಯಿಸಿದರು. ಆ ರೀತಿಯಾಗಿ ತಯಾರಿಯನ್ನೂ ನಡೆಸಿದರು.

ಇತ್ತ ತಾರಿನ ಮೇಲೆ ತಾರು, ದೇಶದ ತುಂಬ ಓಡಾಡಿದವು. ಆಗಲೇ ವಾರ್ತೆ ಇಲಕಲ್ಲು, ಹುನಗುಂದ, ಅಮೀನಗಡ, ಚಿತ್ತರಗಿ, ಬಾಗಲಕೋಟೆ, ಬದಾಮಿ, ಶಿವಯೋಗಮಂದಿರ, ಗದಗ, ಹುಬ್ಬಳ್ಳಿ,ಸೊಲ್ಲಾಪೂರ, ಬಳ್ಳಾರಿ, ರಾಯಚೂರಗಳ ವರೆಗೆ ಹೇಗೆ ಹೋಗಿತ್ತೋ ಹೋಗಿಬಿಟ್ಟಿತ್ತು. ಇಲಕಲ್ಲ, ಬಾಗಿಲುಕೋಟೆಯ ಭಕ್ತರು ಅವಸರದಿಂದಲೆ ಕಲಾದಗಿಗೆ ಬಂದರು. ಯಾವ ಕ್ಷಣಕ್ಕೆ ಏನು ಮಾಡಬೇಕೆಂಬುದೆ ಅವರಿಗೆ ತಿಳಿಯಲಿಲ್ಲ. ಕಲಾದಗಿಗೆ ಬಂದ ಮೇಲೆ ಅವರು ತುಂಬ ನಿರಾಶರಾದರು. ಶಿವಯೋಗಿಗಳು ಉಳಿಯುವ ಯಾವ ಸೂಚನೆಯೂ ತೋರಲಿಲ್ಲ. ಅವರು ಶಿವಾಧೀನರಾಗುವ ಒಳಗಾಗಿ

ಇಲಕಲ್ಲು ತಲುಪಬೇಕೆಂದು ನಿರ್ಧರಿಸಿದರು. ಆದರೆ ಕಲಾದಗಿಯ ಭಕ್ತರು ಅದಕ್ಕೆ ಒಪ್ಪಲಿಲ್ಲ. ತಮ್ಮಲ್ಲಿಯೆ ಸಮಾಧಿಯಾಗಲೆಂದು ಪಟ್ಟು ಹಿಡಿದರು. ಇಲಕಲ್ಲ, ಬಾಗಿಲುಕೋಟೆಯ ಹಿರಿಯರು— 'ಇಲಕಲ್ಲಲ್ಲೇ ಸಮಾಧಿಯಾಗಲೆಂದು ಶಿವಯೋಗಿಗಳ ಪೂರ್ವ ಸಂಕಲ್ಪವಿದೆ. ಅದಕ್ಕೆ ತಾವು ಅಡ್ಡ ಬರಬಾರದು. ಈ ಕಾರ್ಯಕ್ಕೆ ಅನುಕೂಲ ಮಾಡಿಕೊಡಬೇಕು' ಎಂದು ವಿನಯದಿಂದ ಕೇಳಿಕೊಂಡ ಮೇಲೆ ಅವರೆಲ್ಲ ಸುಮ್ಮನಾಗಬೇಕಾಯಿತು.

ಶಿವಯೋಗಿಗಳ ಬಂಡಿ ಇಲಕಲ್ಲಿಗೆ ಮರಳಿ ನಡೆಯಿತು. ಭಕ್ತರ ಹತ್ತಾರು ಚಕ್ಕಡಿಗಳು ಹಿಂಬಾಲಿಸಿದವು. ಅಂಗರಕ್ಷಕರಾದ ಕುದುರೆ ಸವಾರರು ಪಕ್ಕ ಪಕ್ಕಕ್ಕೆ ನಡೆದರು. ಆದರೆ ನಡುವೆ ಬಾಗಿಲುಕೋಟೆಯ ಭಕ್ತರು ಬಂಡಿಯನ್ನು ತರುಬಿ ಶಿವಯೋಗಿಗಳ ದರ್ಶನಾರ್ಥಿಗಳಾಗಿ ಬಂದರು. ಎಲ್ಲರೂ ಕೊನೆಯದಾಗಿ ಪಾದಕ್ಕೆ ಹಣೆ ಹಚ್ಚಿದರು. ಆದರೆ ಅಲ್ಲಿ ಕೂಡಿದ ಸಾವಿರಾರು ಜನರಿಗೂ ದರ್ಶನ ನೀಡುವದು ಸಾಧ್ಯವೆ ಇರಲಿಲ್ಲ. ಎಲ್ಲರೂ ಬಂಡಿಗೇ ನಮಸ್ಕರಿಸಿದರು. ಅನೇಕರು ತಾವು ತಂದ ಹಣ್ಣು-ಕಾಯಿ-ಹೂ-ಹಾರಗಳನ್ನು ಎತ್ತಿನ ಮುಂದೆ ಅರ್ಪಿಸಿದರು. ಅಕಸ್ಮಿಕವಾಗಿ ಬಾಗಿಲು-ಕೋಟೆಗೆ ಬಂದ ಚಿತ್ರದುರ್ಗದ ಜಗದ್ಗುರು ಮುರುಘಾರಾಜೇಂದ್ರ ಮಹಾಸ್ವಾಮಿಗಳು ಅತ್ಯವಸರದಿಂದ ಬಂದು ಬಂಡಿಯನ್ನೇರಿ ಶ್ರೀಗಳ ದರ್ಶನ ಪಡೆದರು. ತಮ್ಮ ಕೈಗಳಿಂದ ಶಿವಯೋಗಿಗಳ ತಲೆಯನ್ನು ಮೆಲ್ಲನೆ ಎತ್ತಿ ತೊಡೆಯ ಮೇಲೆ ಹಾಕಿಕೊಂಡರು—

'ಅಪ್ಪಾಜಿ, ನಾನು ಯಾರು ಗೊತ್ತೇ ? ನಿಮ್ಮ ಮುರುಘಾಸ್ವಾಮಿ ಬಂದಿದ್ದೇನೆ. ನನ್ನನ್ನು ಮಾತಾಡಿಸುವದಿಲ್ಲವೆ ? .... .... ಮಾತಾಡಿಸುವದಿಲ್ಲವೆ ?'

ಎಂದು ಕೇಳಿದರು. ಆದರೆ ಶಿವಯೋಗಿಗಳು ಮಾತಿನಾಚೆಯ ಮೌನಕ್ಕೆ ಏರಿಬಿಟ್ಟಿದ್ದರು. ಅವರಿಗೆ ಪ್ರಜ್ಞೆ ಬರಲೇ ಇಲ್ಲ.

ಜಗದ್ಗುರುಗಳು ಮೆಲ್ಲನೆ ಬಂಡಿಯಿಂದ ಇಳಿದರು. ಸುತ್ತಲೂ ಕೂಡಿದ ಭಕ್ತರನ್ನು ಕರೆದು—'ಶಿವಯೋಗಿಗಳಿಗೆ ಹೊರಗಿನ ಅರಿವು ಇಲ್ಲ. ಆದ್ದರಿಂದ ಬಂಡಿಯನ್ನು ಸಾವಧಾನವಾಗಿ ಒಯ್ಯಿರಿ. ತ್ರಾಸು ಮಾಡಬೇಡಿರಿ' ಎಂದು

ಹೇಳಿದರು. ಅಲ್ಲದೆ ಶ್ರೀಗಳ ಬೆಂಗಾವಲಿಗೆ ತಮ್ಮ ಕುಮಾರೆಗಳನ್ನು ಕೊಟ್ಟು ಕಳಿಸಿದರು.

ಬಾಗಿಲುಕೋಟೆಯಿಂದ ಭಕ್ತರ ಹತ್ತಾರು ಬಂಡೆಗಳು ಹೊರಟವು. ಅಲ್ಲಿಯ ಅಸಂಖ್ಯ ಸದ್ಭಕ್ತರು ಊರ ಕೊನೆ ಬರುವವರೆಗೆ ಶಿವಯೋಗಿಗಳ ಹಿಂಬಾಲಕರಾಗಿ ಬಂದರು. 'ಅಪ್ಪಾಜಿ....ನಮ್ಮ ಊರಿಗೆ ಇದು ನಿಮ್ಮ ಕಡೇ ಭೆಟ್ಟಿಯೆ ?' ಎಂದು ಕೆಲವರು ಕೇಳಿದರು. 'ನಿಮ್ಮ ಮಕ್ಕಳನ್ನು ಮರೆಯ ಬೇಡಿರಿ ತಂದೆ' —ಎಂದು ಅನೇಕ ಹೆಣ್ಣುಮಕ್ಕಳು ಸೆರಗು ಹಾಸಿ ಅಳ ತೊಡಗಿದರು.

ಬಂಡಿಗಳು ಹಾಗೆಯೆ ಹೊರಟವು. ದಾರಿಯಲ್ಲಿ ಹಳ್ಳಿಹಳ್ಳಿಗೂ ಭಕ್ತರು ಬಂದು ಬಂಡಿಯನ್ನು ತರುಬಿ, ಹೂಮಾಲೆ ಹಾಕಿ, ಫಲ-ಪುಷ್ಪ ಅರ್ಪಿಸಿದರು. ಹೊಲ-ಮನೆಯ ಕೆಲಸ ಇದ್ದಲ್ಲಿಯೆ ಮರೆತರು ! ಅನೇಕರು ತಮ್ಮ ಬಂಡಿ ಗಳನ್ನು ಹೂಡಿಕೊಂಡು ನಡೆದರು. ಶಿವಯೋಗಿಗಳ ಹಿಂದೆ ಒಂದು ಬಂಡಿಗೆ ನೂರು ಬಂಡಿಗಳು ಸೇರಿದವು.

ಮುಂದೆ ಒಂದೊಂದು ಊರನ್ನು ದಾಟುವದೆಂದರೆ ಕಣ್ಣೀರಿನ ಸಮುದ್ರ ವನ್ನೇ ಈಜಿ ಹೋದಷ್ಟು ಬಂಡಿಯವರಿಗೆ ತ್ರಾಸಾಯಿತು. ಮಾರ್ಗದಲ್ಲಿ ಚಿತ್ತ ರಗಿ ಪತ್ತರಿಸಿ ಹೋಯಿತು. ತನ್ನ ಮಹಾಪೀಠಾಚಾರ್ಯನೊಬ್ಬ ತನ್ನ ಮಹಾಯಾತ್ರೆ ಕೈಕೊಂಡನೆಂದು ಆ ಊರಿನ ಭಕ್ತರು ಕಂಗೆಟ್ಟು ಹೋದರು. 'ಮಠ ಕಟ್ಟಿದ, ಮನೆ ಕಟ್ಟಿದ, ಭಕ್ತರ ಕಟ್ಟಿದ, ಪ್ರೀತಿ ಕಟ್ಟಿದ, ಎಲ್ಲವನ್ನೂ ಕಟ್ಟಿದ; ಆದರೆ ತಾನೆ ಬಿಟ್ಟು ಹೊರಟ' ಎಂದು ಅವರು ಹಾಡಿ ಅಳುವಾಗ ಯಾರಿಗೆ ತಾನೆ ದುಃಖ ಉಕ್ಕಿ ಬರಲಿಕ್ಕಿಲ್ಲ ? ಇಡೀ ಚಿತ್ತರಗಿಯೇ ಕಣ್ಣೀರಿನ ಕಡಲಾಯಿತು. ದೂರದಿಂದ ಚಿತ್ತರಗಿ ಮಠವು ತನ್ನ ಮುದ್ದು ಮಗನನ್ನು ಕೈಬೀಸಿ ಕರೆಯಿತು. 'ಕುಮಾರಾ....ಓ ನನ್ನ ಶಿವಯೋಗಿ....ಓ....ಓ....ಓ.... ನನ್ನ ವಿಜಯೇಶಾ....ಇಲ್ಲಿ ಬಾ....ಇಲ್ಲಿ ಬಾ........ಇಲ್ಲಿ ಬಾ........' ಎಂದು ಒಕ್ಕೊರಲಿನಿಂದ ಕೂಗಿ ಕರೆಯಿತು. ಆದರೆ ಈಗ ಆತ ಬರುವಂತಿಲ್ಲ ! 'ನನ್ನ ಚಿತ್ತರಗಿ....ನನ್ನ ಭಕ್ತರು !' ಎಂದು ಇನ್ನುಮೇಲೆ ಅನ್ನುವಂತಿಲ್ಲ. ಆತ ಗಾವುದ ಗಾವುದ ದೂರ ನಡೆದು ಹೋಗುತ್ತಿದ್ದಾನೆ. ದೂರ ದೂರ ಸಾಗುತ್ತಿದ್ದಾನೆ, ಯಾರ ಕೂಗೂ ಕೇಳದೆ ಆಚೆಗೆ ಹೊರಟುಬಿಟ್ಟಿದ್ದಾನೆ.

ಚಿತ್ತರಗಿ ಹೌಹಾರಿತು. ಬಡವಾಯಿತು. ಅನಾಥವಾಯಿತು. 'ಇನ್ನೇನು ಗತಿ ?' ಎಂದು ಹಂಬಲಿಸಿತು. ಶಿವಯೋಗಿಯು ಕರುಳ ಬಳ್ಳಿಯ ಕಾಯಿಗಳಂತಿದ್ದ ಚಿತ್ತರಗಿಯ ಭಕ್ತರು ಇಂದು ಆ ಬಳ್ಳಿಯನ್ನು ನಮ್ಮದೆಂದು ಅನ್ನುವಂತಿಲ್ಲ, ಶಿವಯೋಗಿಯನ್ನು ನೋಡುವಂತಿಲ್ಲ, ನುಡಿಸುವಂತಿಲ್ಲ, ಆಡಿಸುವಂತಿಲ್ಲ, ಕಾಡಿಸುವಂತಿಲ್ಲ, ಹಾಸಿ ಹೊಚ್ಚಿ ಬೇಡುವಂತಿಲ್ಲ !

ಬಂಡಿ ಹೊರಟಿತು. ಚಿತ್ತರಗಿಯ ನೂರಾರು ಬಂಡಿಗಳು ಶಿವಯೋಗಿಯ ಅಂತಿಮಯಾತ್ರೆಗೆ ನಡೆದವು. ಬಂಡಿ ಇಲ್ಲದ ಸಾವಿರಾರು ಜನರು ಬರಿಗಾಲಿನಿಂದಲೆ ಸಾಗಿದರು. ದಾರಿಯಲ್ಲಿ ಹುನಗುಂದ ಹತ್ತಿತು. ಎದುರು ಬರುತ್ತಿರುವ ಶಿವಯೋಗಿಗಳ ಬಂಡಿಗೆ ಕಣ್ಣೀರನ್ನೆ ಚಳಿಹೊಡೆದು ಆ ಭಕ್ತರು ನಿಂತಿದ್ದಾರೆ. ಆರತಿಯನ್ನು ಹಿಡಿದ ಮುತ್ತೈದೆಯರು ಒಂದೇಸವನೆ ಅಳುತ್ತಿದ್ದುದರಿಂದ ಅವರ ಆರತಿಗಳು ಕಣ್ಣೀರಿನ ಆರತಿಗಳಾಗಿವೆ. ಶಿವಯೋಗಿಗಳ ಕರುಣೆಯ ಕಂದರಾದ ನಾಗರಾಳ ದೊಡ್ಡಪ್ಪನವರು ಗದ್ಗದನೆ ನಡುಗುತ್ತ, ಕಣ್ಣೀರನ್ನು ಸುರಿಸುತ್ತ ಚಿಕ್ಕ ಕೂಸು ಅತ್ತಂತೆ ಅಳುತ್ತಿದ್ದಾರೆ ! ಊರಿನ ಹಿರಿಕಿರಿಯರೆಲ್ಲರೂ ಕಣ್ಣೀರಿನಲ್ಲಿ ಒಂದಾಗಿದ್ದಾರೆ. 'ಇಂಥ ಕಾಲ ನಾವು ನೋಡಬಾರದಿತ್ತು' ಎಂದು ಮುದುಕರು ರೋದಿಸುತ್ತಿದ್ದಾರೆ. ಹಾಲು ಕುಡಿವ ಮೊಲೆ ಕೂಸುಗಳು ಕೂಡ, ತಮ್ಮ ತಾಯಿ ಬಿಕ್ಕಿ ಬಿಕ್ಕಿ ಅಳುವವನ್ನು ಕಂಡು ತಾವೂ 'ಅವ್ವಾ....ಅಜ್ಜಾ ಎಲ್ಲಿ ಹೋಗತಾನು ?' ಎಂದು ಕೇಳಿದವು. ತಾಯಂದಿರು ಆ ಮಕ್ಕಳ ಕಣ್ಣೀರನ್ನು ಒರೆಸುತ್ತ... 'ಆತ ದೂರ ಹೋಗತಾನು. ಶಿವನ ಹತ್ತರ ಹೋಗತಾನು' ಎಂದು ಹೇಳಿದರು. ಸಮಾಧಾನವಾಗದ ಆ ಹಸುಗೂಸುಗಳು – 'ಶಿವನ ಹತ್ತರ ಹೋಗತಾನೇನು ? ಇನ್ನು ಹೊರಳಿ ಬರೂದಿಲ್ಲಾ ?' ಎಂದು ಕೇಳಿದವು. 'ಇಲ್ಲ ಮಗೂ....ಇನ್ನು ಬರೂದಿಲ್ಲ....' ಎಂದು ಹೇಳಿ, ಮತ್ತೆ ಅಳುತ್ತಿರುವ ತಾಯನ್ನು ನೋಡಿ, ಆ ಮಕ್ಕಳು ಏನೂ ತಿಳಿಯದೆ, ತಾವೂ ಒಂದೇಸವನೆ ಅಳಹತ್ತಿದವು.

ಬಂಡಿ ಇಲಕಲ್ಲಿಗೆ ಸಮೀಪಿಸಿತು. ಇಡೀ ಇಲಕಲ್ಲಿಗೆ ಇಲಕಲ್ಲೇ ಹೌಹಾರಿ ಎದೆ ಹರಿದು ಓಡಿಬರುತ್ತಿದೆ ! ಇನ್ನೂ ಅಗಸೆ ಮೂರು ಮೈಲು ದೂರ ಇದೆ. ಆದರೆ ಕಾಲಿಡಲು ತೆರಪಿಲ್ಲದಷ್ಟು ಜನರು ಇದಿರುಗೊಳ್ಳಲು ಬರುತ್ತಿದ್ದಾರೆ. ಪ್ರತಿಯೊಬ್ಬರೂ ಹೌಹಾರಿದ್ದಾರೆ. ಕಣ್ಣೀರು ಕಾರಂಜಿ ಅವರ ಎದೆಯನ್ನು

ಒಡೆದು ಪುಟಿಯುತ್ತಿವೆ. 'ಗುಣವಾಗಿ ಬಾರೆಂದು ಕಳಿಸಿದರೆ ಋಣತೀರಿಸಲು ಬಂದೆಯಾ ?' ಎಂದು ರೋದಿಸತೊಡಗಿದ್ದಾರೆ. ಅನೇಕ ಹೆಣ್ಣುಮಕ್ಕಳು 'ಮಕ್ಕಳ ಕಷ್ಟ ನೋಡಿ ನಗಲಿಕ್ಕೆ ಬಂದೆಯಾ ತಂದೆ ? ನಮ್ಮ ಕಣ್ಣೀರು ಕಂಡು ಹಿಗ್ಗಲಿಕ್ಕೆ ಬಂದೆಯಾ ತಂದೆ ?' ಎಂದು ಪ್ರಲಾಪಿಸಿದರು. ಕಣ್ಣೀರಿನಲ್ಲಿ ಇಲಕಲ್ಲು-ಹುನಗುಂದ-ಚಿತ್ತರಗಿ-ಬಾಗಿಲುಕೋಟೆ ಒಂದಾದವು. ನೂರಾರು ಗ್ರಾಮ ನಗರಗಳ ಜನಸ್ತೋಮ ಒಂದಾಯಿತು. ಶಿವಯೋಗಿಯ ಹೊರತು ಯಾರಿಗೂ ಏನೂ ಕಾಣಲಿಲ್ಲ.

ಬಂಡಿ ಅಗಸೆಗೆ ಬಂತು. ಬನಶಂಕರಿದೇವಿ ಹರಿತ ಪೀತಾಂಬರವನ್ನುಟ್ಟು ಹೂ ಮುಡಿದು, ನತ್ತಿಟ್ಟುಕೊಂಡು, ಲಿಂಗ-ಭಸ್ಮ-ರುದ್ರಾಕ್ಷಿ ಮಾಲಾ ಧರಿತಳಾಗಿ ಬಂದಳು; ತುಂಬಿದ ಆರತಿಯನ್ನು ಭಕ್ತಿ ತುಂಬಿ ಬೆಳಗಿದಳು. ಆದರೆ ಅವಳ ಮಂದಹಾಸದ ತುಟಿಗಳ ಮೇಲೆ ಕಣ್ಣೀರಿನ ಹನಿಗಳು ಕಸುವಿನಿಂದ ಸುರಿದು ಬರಹತ್ತಿದುವು; ಸೆರಗು ಮುಚ್ಚಿಕೊಂಡು ಅಳತೊಡಗಿದಳು. — 'ನಾನೊಂದು ಸಸಿ ಊರಿದೆ. ನೀರು ಉಣಿಸಿದೆ. ಬೆಳಸಿದೆ. ಸಸಿ ಮರವಾಯಿತು. ಕಳೆದುಂಬಿತು. ಹೂ ಕೊಟ್ಟಿತು. ಕೊನೆಗೆ ಸೋತು ಹೋಯಿತು' ಎಂದು ಆ ತಾಯಿ ಶೋಕಿಸುತ್ತಲೆ ತನ್ನ ಮಂದಿರಕ್ಕೆ ತೆರಳಿದಳು.

ಬಂಡಿ ಮಠ ಮುಟ್ಟಬೇಕಾದರೆ ಏಳೂ ಎಪ್ಪತ್ತಾಯಿತು! ಜನಸಾಗರ ಕರುಣಾಸಾಗರವಾಗಿ ಕೂಗಿದರೂ ಶಿವಯೋಗಿಗೆ ಹೋದ ಪ್ರಜ್ಞೆ ಮರಳಲಿಲ್ಲ. ಪ್ರಜ್ಞಾಹೀನ ಸ್ಥಿತಿಯಲ್ಲಿ ತಮ್ಮಲ್ಲಿ ತಾವಾಗಿ ಬೆರೆತುಬಿಟ್ಟಿದ್ದರು. 'ಏನು ಕಳಿಸಿ ಏನು ಬರಮಾಡಿಕೊಂಡೆವು' ಎಂದು ಹಿರಿಯರು ದುಃಖಿಸಿದರು. ಕಂಠಿ ರುದ್ರಪ್ಪನವರು ಮಠದ ಮಹಾದ್ವಾರದಲ್ಲಿ ಶೋಕದ ಪ್ರತಿಬಿಂಬ ನಿಂತಂತೆ ನಿಂತಿದ್ದರು.

ಈಗ ಬಂಡಿ ಮಹಾದ್ವಾರದ ಅಡ್ಡ ಕಟ್ಟಿಗೆ ಬಂದು ನಿಂತಿತು. ರುದ್ರಪ್ಪನವರು ಬಂಡಿ ಹತ್ತಿ ಬಂದು — 'ಬುದ್ಧೀ....ಬುದ್ಧೀ....ಎಚ್ಚರಾಗಿರಿ. ನಿಮ್ಮ ಇಲಕಲ್ಲು ಬಂತು. ನಿಮ್ಮ ಇಲಕಲ್ಲ ಭಕ್ತರು ನಾವು. ಏಳಿರಿ ಬುದ್ಧೀ ಏಳಿರಿ' ಎಂದು ಕಿವಿಯಲ್ಲಿ ಕೂಗಿದರು. ಆದರೆ ಭೌತಿಕ ಕಿವಿಗಳಿಗೂ ಶಿವಯೋಗಿಗೂ ಸಂಬಂಧವೆ ಇರಲಿಲ್ಲ. ಆತನ ಪಂಚೇಂದ್ರಿಯಗಳೂ ಪರಮಾತ್ಮನ ಸೊತ್ತಾಗಿದ್ದವು. ಹತ್ತಾರು ಜನ ಭಕ್ತರು ಮೆಲ್ಲನೆ ಶಿವಯೋಗಿಗಳ ದೇಹವನ್ನು ತಮ್ಮ

ಕೈಗಳ ಮೇಲೆ ತೆಗೆದುಕೊಂಡರು. ಮೃದುವಾಗಿ ಬಂಡಿಯಿಂದ ಇಳಿಸಿ ಮಹಾ ದ್ವಾರದ ಒಳಗೆ ಬಂದರು.

ಶಿವಯೋಗಿಗಳು ಬಂಡಿಯಿಂದ ಇಳಿದು ಬಂದಾಗೊಮ್ಮೆ ಮಾಂತಮ್ಮ ಗೋಶಾಲೆಯಿಂದ ಓಡಿಬಂದು ಪಾದನೆಕ್ಕುತ್ತಿದ್ದಳು. ಶಿವಯೋಗಿಗಳು ಅವಳ ಮೇಲೆ ಕೈಯಾಡಿಸಿ, ಭಕ್ತರು ಕೊಟ್ಟ ಹಣ್ಣುಗಳನ್ನು ತಿನ್ನಿಸುತ್ತಿದ್ದರು. ಬಂಡಿಯ ಶಬ್ದ ಕೇಳಿ ಈ ಸಲವೂ ಮಾಂತಮ್ಮ ಓಡಿಬಂದಳು. ನೋಡು ತ್ತಾಳೆ, ಶಿವಯೋಗಿಗಳನ್ನು ಹತ್ತು ಜನ ಹೊತ್ತು ಮಠದ ಒಳಗೆ ತರುತ್ತಿ ದ್ದಾರೆ! 'ಅಂಬೇ....ಅಂಬೇ....' ಎಂಬ ಅವಳ ಆಳಲು ಕಂಡು ಭಕ್ತರ ಎದೆ ಬಿರಿಯಿತು. ತಕ್ಷಣವೆ ಎಲ್ಲರೂ ನಿಂತರು. ಆ ಗೋಮಾತೆ ಬಂದು ಶಿವಯೋಗಿ ಗಳ ಕಲ್ಲ-ಗವಿಗಳನ್ನು ನೆಕ್ಕಿದಳು. ಅವರಿಂದ ಅವಳಿಗೆ ಯಾವ ಉತ್ತರವೂ ಬರಲಿಲ್ಲ. ಪ್ರತಿಸಲ ಸಿಗುವ ಹಣ್ಣುಹಂಪಲ ದೊರೆಯಲಿಲ್ಲ. ಪ್ರಿಯ ಮಾತು ಗಳು ಕೇಳಲಿಲ್ಲ. ಆ ತಾಯಿ ಮೂಢಳಾಗಿ ನಿಂತುಬಿಟ್ಟಳು. ತನ್ನ ಕರುಳನ್ನೇ ಯಾರೋ ಕಿತ್ತುಕೊಂಡಂತೆ ಕಣ್ಣೀರು ಆ ಗೋದೇವತೆಯ ಕಣ್ಣಲ್ಲೂ ಸುರಿ ದವು. ಶಿವಯೋಗಿಗಳನ್ನು ಹೊತ್ತವರಲ್ಲಿ ಒಬ್ಬನು ಹೇಳಿದ— 'ಇನ್ನು ನಿನ್ನ ಮಗನ ಆಶೆ ಬಿಟ್ಟು ಬಿಡು ತಾಯಿ. ಆತ ಇನ್ನು ಇಲ್ಲಿಯವನಲ್ಲ, ಅಲ್ಲಿಯ ವನು. ಅಳಬೇಡ ತಾಯಿ....ಅಳಬೇಡ ಅವ್ವಾ....ನಗುತ್ತಲೇ ನಿನ್ನ ಮಗನನ್ನು ಕಳಿಸಿಕೊಡು....'

ಮಾಂತಮ್ಮ ಕಣ್ಣೀರು ಸುರಿಸುತ್ತ ತಬ್ಬಲಿಯಾಗಿ ನಿಂತುಬಿಟ್ಟಳು ! ಶಿವಯೋಗಿಗಳ ಶರೀರ ಮಠದ ಒಳಗೆ ಸಾಗಿತು.

* * * *

ಶಿವಯೋಗ ಮಂದಿರದಲ್ಲಿ ವಟುಗಳು ಯೋಗಾಸನಗಳನ್ನು ಹಾಕುತ್ತ ಕುಳಿತಿದ್ದಾರೆ. ಹಾನಗಲ್ಲ ಕುಮಾರಸ್ವಾಮಿಗಳು ನಿರೀಕ್ಷಣೆ ಮಾಡುತ್ತಿದ್ದಾರೆ. ಸೋಮನಾಥಶಾಸ್ತ್ರಿಗಳು ಸಾಧಕರಿಗೆ ಲತಾಮಂಟಪದಲ್ಲಿ ಸಂಸ್ಕೃತ ಪಾಠ ಗಳನ್ನು ಹೇಳಿಕೊಡುತ್ತಿದ್ದಾರೆ. ಬಾಗಿಲುಕೋಟೆಯ ಮುಪ್ಪಿನ ಶಾಂತವೀರ ಸ್ವಾಮಿಗಳು ಅದೇ ಆಗ ಪೂಜಾ ಪ್ರಸಾದ ಸೇವಿಸಿ ನದೀದಡಕ್ಕೆ ಬಂದಿದ್ದಾರೆ.

ಒಮ್ಮೆಲೇ ಸುದ್ದಿ ಬಂತು! ವಿಜಯ ಮಹಾಂತ ಶ್ರೀಗಳಿಗೆ ಅಂತ್ಯಾವಸ್ಥೆ ಸಮೀಪಿಸಿದೆಯೆಂದೂ, ಅವರನ್ನು ಕಲಾದಗಿಗೆ ಒಯ್ಯಲಾಗಿತ್ತೆಂದೂ, ಈಗ ಇಲಕಲ್ಲಿಗೆ ಹೊರಳಿ ಸಾಗಿಸಿದ್ದಾರೆಂದೂ ಗೊತ್ತಾಯಿತು.

ಶಿವಯೋಗಮಂದಿರವೆ ಗಡಗುಟ್ಟಿ ನಡುಗಿತು ! ಲತಾಮಂಟಪ ತಾಪ– ಮಂಟಪವಾಯಿತು !! ಮಲಾಪಹಾರಿ ಶೋಕಮಯಿಯಾದಳು !!! ಹಾನಗಲ್ಲ ಶಿವಯೋಗಿಗಳಿಗಂತೂ ತಮ್ಮ ಇಷ್ಟಲಿಂಗವನ್ನೆ ಕಳಕೊಂಡಂತಾಯಿತು. ಕ್ಷಣಕಾಲ ದಿಗ್ಭ್ರಮಿತರಾಗಿ ಕುಳಿತುಬಿಟ್ಟರು. ಬಾಯಿ ತೆರೆಯಲಿಲ್ಲ. ಕಣ್ಣು ಅಲುಗಿಸಲಿಲ್ಲ ಏನೂ ತೋಚಲಿಲ್ಲ. ಆಕಾಶವೇ ಹರಿದುಕೊಂಡು ಶಿವಯೋಗ ಮಂದಿರದ ಮೇಲೆ ಕುಪ್ಪಳಿಸಿ ಉರುಳಿದಂತಾಯಿತು. ಶಿವಯೋಗಮಂದಿರದ ತಾಯಿ ಬೇರಿಗೆ ಕೊಡಲಿಯ ಏಟು ಬಿದ್ದಂತಾಯಿತು.

ಒಂದೆರಡು ಕ್ಷಣ ಹೀಗೆಯೆ ಜಾರಿದವು. ನಂತರ ಭಾರವಾದ ಎದೆಯಿಂದ ಹಾನಗಲ್ಲ ಶ್ರೀಗಳು 'ಶಿವಶಿವಾ' ಎಂದರು. ಕಣ್ಣೀರುಗಳು ಕಪೋಲಕ್ಕೆ ಬಂದವು. 'ನಾನು ಲಿಂಗವನ್ನು ಬೇಡಿದೆ. ಲಿಂಗವನ್ನು ಕಂಡೆ. ಲಿಂಗದಲ್ಲಿ ನೆಲೆ- ಸಿದೆ. ಇಂದು ಲಿಂಗವನ್ನೆ ಕಳೆದುಕೊಂಡೆ' ಎಂದು ಅವರ ಹೃದಯ ಸಂಕಟ ದ್ರಿಂದ ಒರಲಿತು. ಸೋಮನಾಥ ಶಾಸ್ತ್ರಿಗಳನ್ನು ಕರೆಯಲು ವಟುಗಳನ್ನು ಕಳಿಸಿದರು. ಅಷ್ಟರಲ್ಲಿ ಶಾಸ್ತ್ರಿಯವರೂ ಶಾಂತವೀರಸ್ವಾಮಿಗಳೂ ಧಾವಿಸಿ ಬಂದರು. ಅವರಿಗೆ— 'ನಡೆಯಿರಿ ಇಲಕಲ್ಲಿಗೆ ಹೋಗೋಣ' ಎಂದಿಷ್ಟೇ ನುಡಿದರು. ಮುಂದೆ ಏನು ಹೇಳುವವರಿದ್ದರೋ ಏನೋ; ಅವರ ಕಂಠ ಒತ್ತರಿಸಿ ಬಂತು. ಕಣ್ಣೀರು ಮಾತನ್ನು ಮುಚ್ಚಿಬಿಟ್ಟವು.

ಹಾನಗಲ್ಲ ಶಿವಯೋಗಿಗಳು ಅರ್ಧ ಗಂಟೆಯಲ್ಲೇ ಸೋಮನಾಥ ಶಾಸ್ತ್ರಿಗಳನ್ನು, ಶಾಂತವೀರ ಸ್ವಾಮಿಗಳನ್ನು, ಸಾಧಕರನ್ನು ವಟುಗಳನ್ನು ಕರೆದುಕೊಂಡು ನಾಲ್ಕೈದು ಬಂಡಿಗಳನ್ನು ಹೂಡಿ ಇಲಕಲ್ಲಿಗೆ ನಡೆದುಬಿಟ್ಟರು. ಮಾರ್ಗದಲ್ಲಿ ಆ ಗಾಡಿಗಳನ್ನು ಎಲ್ಲಿಯೂ ತರುಬದೆ ನೇರವಾಗಿ ಇಲಕಲ್ಲು ತಲುಪಿದರು.

ಇಲಕಲ್ಲಿನ ಅಗಸೆಗೆ ಬಂದು ನೋಡುತ್ತಾರೆ, ಎಲ್ಲಿ ನೋಡಿದಲ್ಲೆಲ್ಲ ಬಂಡಿಗಳೇ ಬಂಡಿಗಳು. ಕಣ್ಣು ಹಾಯಿಸಿದಲ್ಲೆಲ್ಲ ಇರಿವೆಯ ಹುತ್ತಿನಂತೆ ಜನ ಮುತ್ತಿಬಿಟ್ಟಿದೆ. ಅವರ ಬಂಡಿಗಳು ಜನರನ್ನು ಸರಿಸಿ ಮಠ ಮುಟ್ಟಬೇಕಾದರೆ ಸಾಕುಬೇಕಾಗಿ ಹೋಯಿತು.

'ಹಾನಗಲ್ಲ ಶ್ರೀಗಳು ಬಂದರು....ಹಾನಗಲ್ಲ ಅಪ್ಪನವರು ಬಂದರು....' ಎಂದು ಕ್ಷಣಾರ್ಧದಲ್ಲಿ ಮಠದ ತುಂಬ ವಾರ್ತೆ ಹರಡಿ ಗಡಿಬಿಡಿ ಇನ್ನೂ ಹೆಚ್ಚಾಯಿತು. ಅಲ್ಲಿ ಕೂಡಿದ ಜನಸಂದಣಿಯನ್ನು ಯಾವ ಶಕ್ತಿಯಿಂದಲೂ ಸರಿಸುವದು ಸಾಧ್ಯವಿರಲಿಲ್ಲ. ಹಾನಗಲ್ಲ ಶ್ರೀಗಳು ತಮ್ಮೊಂದಿಗೆ ಬಂದ ಉಭಯ ಸ್ವಾಮಿಗಳೊಂದಿಗೆ ಮೆಲ್ಲನೆ ದಾರಿ ಮಾಡಿಕೊಂಡು ಮಠದೊಳಗೆ ಹೋದರು. ಆಗಲೆ ಅಲ್ಲಿ ಅನುಷ್ಠಾನ ಮೂರ್ತಿಗಳಾದ ಹಾವೇರಿ ಶಿವಬಸವ ಸ್ವಾಮಿಗಳು ಬಂದು ಬಿಟ್ಟಿದ್ದರು. ಎಲ್ಲರೂ ಮಹಾಮೌನದಿಂದ ಶಿವಯೋಗಿ ಗಳನ್ನು ಮಲಗಿಸಿದ್ದ ಏಕಾಂತ ಕೋಣೆಯಲ್ಲಿ ಪ್ರವೇಶಿಸಿದರು. ಅಲ್ಲಿ ಕೆಲವೆ ಜನ ಪುರ ಪ್ರಮುಖರು ಕಾಲಪುರುಷನನ್ನು ಆಳೆಯುತ್ತ ಕುಳಿತಿದ್ದಾರೆ. ಪಲ್ಲಂಗದ ಮೇಲೆ ಶಿವಯೋಗಿಗಳ ಶರೀರ ಮಲ್ಲಿಗೆ ಹೂವಿನಂತೆ ಮಲಗಿದೆ. ಮುಖದಲ್ಲಿ ಮಂದಹಾಸವಿದೆ. ಅನಂತ ಶಾಂತಿಯ ಜಲ್ಲಾಟವಿದೆ. ಯಾವದೊ ಅಪೂರ್ವ ಕನಸನ್ನು ಕಾಣುತ್ತಿರುವ ಯೋಗನಿದ್ರೆಯಂತಿದೆ. ಅವರ ಮಂಚವೇ ಒಂದು ಮಹಾ ನಿರ್ವಿಕಲ್ಪ ಸಮಾಧಿಯಂತೆ ಪ್ರಶಾಂತ ಮೌನದಲ್ಲಿ ತೇಲಿದೆ. 'ಕೈವಲ್ಯವೆಂದರೆ ಇದೇ' ಎಂದು ಹೇಳುವಂತೆ ಇಲ್ಲಿಯ ವಾತಾವರಣ ಅಮರ ಗೀತೆಯನ್ನು ಹಾಡುತ್ತಿದೆ. ಲಿಂಗೈಕ್ಯವೇ ಮಲಗಿದಂತೆ, ಅದ್ವೈತವೆ ನಿದ್ರಿಸಿ ದಂತೆ, ಶಿವಯೋಗವೆ ಒರಗಿದಂತೆ ಶಿವಯೋಗಿಗಳು ಕೊನೆಯ ನಿದ್ರೆಯಲ್ಲಿ ಮಲಗಿಬಿಟ್ಟಿದ್ದಾರೆ.

ಹಾನಗಲ್ಲ ಶ್ರೀಗಳು ಮೆಲ್ಲನೆ ಅವರ ಪಾದದ ಬಳಿ ಕುಳಿತು, ಪಾದವನ್ನು ಒತ್ತುತ್ತ—"ಅಪ್ಪಾ....ನಿನ್ನ ಮಗ ಬಂದಿದ್ದೇನೆ....ಹಾನಗಲ್ಲ ಕುಮಾರ ಬಂದಿ ದ್ದೇನೆ. ಕಣ್ಣು ತೆರೆ....ಕಣ್ಣು ತೆರೆ...." ಎಂದು ಕೇಳುತ್ತಲೆ ಕಂಬನಿಗಳನ್ನು ಕರೆದರು. 'ಹೌದೆ ? ಬಂದೆಯಾ ? ಬಾ. ಇಲ್ಲಿ ಕೂತುಕೊ. ನಿನ್ನ ದಾರಿಯನ್ನೆ ನೋಡುತ್ತಿದ್ದೆ. ಆರಾಮ ಇದ್ದೀಯಾ ?' ಎಂದು ಶಿವಯೋಗಿಗಳು ಕೇಳು ತ್ತಿದ್ದರೊ ಎಂಬಂತೆ ಅವರ ಮುಖ ಮಂದಹಾಸದಿಂದ ಕೂಡಿದೆ. ಆದರೆ ಮಾತಿಲ್ಲ ಮರಹಿಲ್ಲ. ಮೌನದಾಚೆಯ ಮೌನಕ್ಕೆ, ಶಬ್ದದಾಚೆಯ ಶಬ್ದಕ್ಕೆ, ಶೂನ್ಯದಾಚೆಯ ಶೂನ್ಯಕ್ಕೆ ಶಿವಯೋಗಿಗಳು ಮೆಲ್ಲಮೆಲ್ಲನೆ ಹೋಗುತ್ತಿದ್ದಾರೆ. ಆ ಮಹಾ ಮುಕ್ತಿಸಾಗರದ ಇನ್ನೊಂದು ದಂಡೆಗೆ ನಿಂತು ಹಾನಗಲ್ಲ ಶ್ರೀಗಳು ಕೂಗುತ್ತಿದ್ದಾರೆ. ಆ ಕೂಗು ಶಿವಯೋಗಿಗಳಿಗೆ ತಲುಪಿತೋ ಇಲ್ಲವೋ ? ಆದರೆ ಮಾತಿಲ್ಲ !!

ಕೊನೆಗೆ ಹಾನಗಲ್ಲ ಶ್ರೀಗಳು ಒಂದು ಅಪೂರ್ವ ಜಾಣತನ ಮಾಡಿದರು. ಅಲ್ಲಿ ಕೂಡಿದ ಭಕ್ತರಿಗೆ, ಶಿವಯೋಗ ಮಂದಿರದ ಸಾಧಕರಿಗೆ ಶಿವವಾಣಿಯನ್ನು ನುಡಿದು ಜಯಜಯಕಾರ ಮಾಡಲು ಹೇಳಿದರು. ಅವರು—

ಶಿವಯೋಗಿಗೆ....ಜಯವಾಗಲಿ....

ಶಿವಯೋಗಕ್ಕೆ....ಜಯವಾಗಲಿ....

ಗುರುಲಿಂಗ ಜಂಗಮಕ್ಕೆ....ಜಯವಾಗಲಿ....

ಕಾಯಕಕ್ಕೆ....ಜಯವಾಗಲಿ....

ಭಕ್ತಿಗೆ....ಜಯವಾಗಲಿ....

ಮುಕ್ತಿಗೆ....ಜಯವಾಗಲಿ....

ಎಂದು ಉದ್ಘೋಷ ಮಾಡತೊಡಗಿದರು. ಆ ಘೋಷ ಕೇಳಿದೊಡನೆಯೆ, ಎರಡುದಿನ ಪ್ರಜ್ಞಾಹೀನ ಸ್ಥಿತಿಯಲ್ಲಿದ್ದ ವಿಜಯಮಹಾಂತ ಶಿವಯೋಗಿಗಳ ದೇಹ ಮೆಲ್ಲಗೆ ಕಂಪಿಸಿತು. ಹಾನಗಲ್ಲ ಶ್ರೀಗಳು ವಿಜಯ ಮಹಾಂತ ಶಿವಯೋಗಿಗಳ ಕಿವಿಯಲ್ಲಿ ಪ್ರಣವ ಸಹಿತ ಪಂಚಾಕ್ಷರಿ ಮಂತ್ರವನ್ನುಚ್ಚರಿಸಿ ಪದ್ಧತಿಯಂತೆ ಮತ್ತೊಮ್ಮೆ ನೆನಪು ಮಾಡಿಕೊಟ್ಟರು. ಅದೇ ಧ್ಯಾನದಲ್ಲಿದ್ದ ವಿಜಯ ಮಹಾಂತ ಶಿವಯೋಗಿಗಳ ಹಣೆಯಲ್ಲಿ ಬೆವರಾಡಿತು. ತುಟಿ ಅಲುಗಾಡಿದವು. ಕಣ್ಣುಗಳು ಅಷ್ಟಮಿಯ ಚಂದ್ರೋದಯದಂತೆ ಮೆಲ್ಲಗೆ ತೆರೆದವು! ಎದುರು ನಿಂತ ಹಾನಗಲ್ಲ ಶಿವಯೋಗಿಗಳನ್ನೊಮ್ಮೆ ದಿಟ್ಟಿಸಿ ನೋಡಿದರು. ಅವರ ಪರಿಚಯ ಹತ್ತಿದಂತೆ ಆಯಿತು. ಏನನ್ನೋ ಹೇಳಬೇಕೆಂದು ಹವಣಿಸಿದರು. ಮಾತು ಬರಲಿಲ್ಲ. ಕಣ್ಣಿನಿಂದಲೇ ಹೇಳಿದರು. ಕಣ್ಣಿಂದಲೇ ಮಾತಾಡಿದರು. ಹಾನಗಲ್ಲ ಶ್ರೀಗಳು—

'ಅಪ್ಪಾಜಿ, ನಾವೆಲ್ಲಾ ನಿಮ್ಮ ಮಕ್ಕಳು. ನೀವು ಕರುಣಿಸಿಕೊಟ್ಟ ಶಿವಯೋಗ ಮಂದಿರವನ್ನು ಚೆನ್ನಾಗಿ ನಡೆಸಿದ್ದೇವೆ. ನಿಶ್ಚಿಂತರಾಗಿರಿ. ನಿಶ್ಚಿಂತರಾಗಿರಿ. ನಿಮ್ಮ ಆಶೀರ್ವಾದ ಶಿವಯೋಗ ಮಂದಿರದ ಮೇಲೆ ಸದಾ ಇರಲಿ'.

ಎಂದು ಕೂಗಿ ಹೇಳಿದರು. ಈ ಮಾತು ಕೇಳಿ ಶಿವಯೋಗಿಗಳ ಮುಖ ಹುಣ್ಣಿವೆಯ ಚಂದ್ರನಕ್ಕಂತೆ ಮಂದಸ್ಮಿತವಾಯಿತು. ಶಾಂತಸರೋವರದ ಕಮಲ ಪ್ರಫುಲ್ಲಿತವಾಗಿ ಅರಳಿದಂತೆ ಅಗಲವಾಯಿತು. ಅವರ ಅಂತರಾಳದಿಂದ ಏನೋ ಒಂದು ಮಾತು ಹೊರಬರಲು ಹವಣಿಸಿತು. ಆದರೆ ಗಂಟಲಕ್ಕೇ ನಿಂತುಬಿಟ್ಟಿತು.

ಮುಪ್ಪಿನ ಶಾಂತವೀರ ಸ್ವಾಮಿಗಳು ಸೋಮನಾಥ ಶಾಸ್ತ್ರಿಗಳಿಗೆ ಸೂಚಿಸಿ ಸ್ವಲ್ಪ ಮಡಿನೀರು ತರಿಸಿದರು. ಶಾಸ್ತ್ರಿಗಳು ಅದನ್ನು ಶಾಂತವೀರ ಸ್ವಾಮಿಗಳ

ಪಾದಕ್ಕೆ ಎರೆದು ಪಾದೋದಕ ಮಾಡಿದರು. ಹಾನಗಲ್ಲ ಶ್ರೀಗಳ ಕೈಯಲ್ಲಿ ಕೊಟ್ಟರು. ಹಾನಗಲ್ಲ ಶ್ರೀಗಳು ಶಿವಯೋಗಿಗಳಿಗೆ ಭಸ್ಮಸ್ನಾನ ಮಾಡಿಸಿ, ಅವರ ಆರಳಿದ ಬಾಯಲ್ಲಿ ಪಾದೋದಕ ಹಾಕಿದರು. ಉಳಿದವರೂ ತಮ್ಮ ಪಾಲಿನ ಮಹಾಭಾಗ್ಯವೆಂದು ಹನಿಹನಿಯಾಗಿ ಪಾದೋದಕ ಹನಿಸಿದರು.

ಆ ಜಂಗಮ ಪಾದೋದಕದಿಂದ ಶಿವಯೋಗಿಗಳ ಜರ್ಜರಿತ ಶರೀರಕ್ಕೆ ಪ್ರಚಂಡ ಶಕ್ತಿ ಧುಮುಕಿ ಬಂದಂತಾಯಿತು. ಕಂಠದಲ್ಲಿ ಕಸುವು ಸಂಚರಿಸಿದಂತಾಯಿತು. ಬಹು ಪ್ರಯಾಸದಿಂದ ಮೆಲ್ಲನೆ ಒಂದೊಂದಕ್ಷರಗಳನ್ನೇ ಪಠಿಸತೊಡಗಿದರು.

'ಚಿ....ವ....ಚಿ....ವ....ಶಿ....'

'ಶಿವ' ಶಬ್ದವು, ಅವರ ಗಂಟಲು ಕಟ್ಟಿ ಒಣಗಿದ್ದರಿಂದ, 'ಚಿವ' ಎಂದು ಸ್ಪಂದಿಸತೊಡಗಿತು. ಮೊದಮೊದಲು ಅತಿ ಮಂದವಾಗಿ ಆರಂಭವಾದ ಆ ವಾಣಿ; ಆತ್ಮದ ಅಗ್ನಿಕುಂಡದಿಂದ ಕೆಂಡ ಕಿಡಿಯಾಗಿ ಭೋರ್ ಜೋರೆನೆ ಕೇಳ ಕೇಳತೊಡಗಿತು. ಮತ್ತೆ ಮತ್ತೆ ಧ್ವನಿಯು ಕಂಪನ ಜೋರಾಗತೊಡಗಿತು.

'ಚಿವ....ಶಿವ....ಶಿವ....ಶಿವ....ಶಿವ....'

ಸುತ್ತಲೂ ನಿಂತವರಿಗೆ ನಡುಗು ಹುಟ್ಟಿತು. ಶಿವಯೋಗಿಗಳು ಈ ಮಂತ್ರವಾಣಿಯಲ್ಲೇ ಮತ್ತೆ ಹುಟ್ಟಿಬರುವರೊ ಎಂಬಂತೆ ಆ ಧ್ವನಿ ಇನ್ನೂ ಇನ್ನೂ ಜೋರಾಯಿತು. ಮಿಂಚಿನ ವೇಗದಿಂದ, ಸಿಡಿಲಿನ ಆರ್ಭಟೆಯಿಂದ, ರುದ್ರನ ತಾಂಡವದ ಡಮರುಗದ ಢಂಕಾರದಂತೆ ಭಯಂಕರವಾಗಿ ಕೇಳತೊಡಗಿತು——

'ಚಿವ...ಶಿವ....ಚಿವ....ಶಿವ....ಚಿವ....'

ಯೋಗಮಂಚದ ಸುತ್ತಲೂ ನೆರೆದ ಭಕ್ತರು ನಡುಗುವದು ಮಾತ್ರವಲ್ಲ ಬೆವರು ಸುರಿಸಹತ್ತಿದರು! ಅದರ ವೇಗ-ಬಿರುಸು-ಉತ್ಕಂಠತೆ ಇನ್ನೂ ಇನ್ನೂ ಹೆಚ್ಚಾದವು!! ಕೂಗು ಇನ್ನೂ ಇನ್ನೂ ಅಧಿಕವಾಯಿತು !!!

ಚ್ಹಿವ್ಹ....ಚ್ಹಿವ....ಚ್ಹಿವ....ಚ್ಹಿವ....ಶಿವ....ಓಮ್.... ಕೇಳಹತ್ತಿತು !! ಇಡೀ ಮಠಕ್ಕೆ ಮಠವೇ ಕಂಪನ ಹಿಡಿದಂತೆ ಭಂವ್‌ಗುಟ್ಟಿ ಭೋರ್ಗರೆಯತೊಡಗಿತು——

''ಚ್ಹಿವ್ಹ....ಶ್ಹಿವ್ಹ....ಶ್ಹಿವ್ಹ....ಓ....ಮ್....ಓಮ್....ಓಮ್.'

ನೋಡನೋಡುವಷ್ಟರಲ್ಲೇ ಆ ಪ್ರಚಂಡ ಧ್ವನಿ ಮೆಲ್ಲನಾಗುತ್ತ.... ಇನ್ನೂ ಮೆಲ್ಲನಾಗುತ್ತ....ಇನ್ನೂ ಇನ್ನೂ ಮೆಲ್ಲನಾಗುತ್ತ.... ಕೊನೆಕೊನೆಗೆ

ತೀರ ನಿಶ್ಶಬ್ದವಾಗುತ್ತ....ಕಟ್ಟಕಡೆಗೆ ಶಾಂತಿಯಲ್ಲಿ ತೇಲಿಹೋಯಿತು! ಶೂನ್ಯದಲ್ಲಿ ಸಾರಿಹೋಯಿತು!! ಅನಂತತೆಯಲ್ಲಿ ವಿಲೀನವಾಯಿತು!!!

ನಗುನಗುತ್ತಲೇ ಶಿವಯೋಗಿಯ ಕಣ್ಣುಗಳು ಮುಚ್ಚಿದವು!

ಪ್ರಾಣಪಕ್ಕಿ........ಹಾರಿತು........!!

ದೇಹಗೂಡು........ಬಿದ್ದಿತು........!!!

ಲಿಂಗದಲ್ಲಿ ಲಿಂಗ ಬೆರೆಯಿತು........ಲಿಂಗೈಕ್ಯವಾಯಿತು!!!!

ಶಿವಯೋಗಿಗಳು ಲಿಂಗೈಕ್ಯರಾದ ಕೋಣೆಯಿಂದ ಹಾನಗಲ್ಲ ಶ್ರೀಗಳು ಭಾರವಾದ ಎದೆಯಿಂದ ಹೊರಬಂದರು. ಅವರನ್ನು ಕಂಡು ಅಲ್ಲಿ ಕಿಕ್ಕಿರಿದ ಜನರ ದುಃಖ ಇನ್ನೂ ಹೆಚ್ಚಾಯಿತು. ಅದನ್ನು ತಾಳಲಾರದೆ ಹಾನಗಲ್ಲ ಶ್ರೀಗಳು ಮಠದ ಎತ್ತರದ ಪಡಸಾಲೆಯ ಕಟ್ಟೆಯ ಮೇಲೆ ನಿಂತು ಜನಸ್ತೋಮಕ್ಕೆ ಕೈಯೆತ್ತಿ ಗಟ್ಟಿಯಾಗಿ ಕೂಗಿ ಹೇಳತೊಡಗಿದರು--

'ಕೇಳಿರಿ....ಕೇಳಿರಿ.... ನೀವೆಲ್ಲರೂ ಕೇಳಿರಿ. ಶಿವಯೋಗಿಗಳು ಲಿಂಗೈಕ್ಯರಾಗಿದ್ದಾರೆ! ಶಿವಯೋಗಿಗಳು ಲಿಂಗೈಕ್ಯರಾಗಿದ್ದಾರೆ!! ಶಿವಯೋಗಿಗಳು ಲಿಂಗೈಕ್ಯರಾಗಿದ್ದಾರೆ!!! ಇವತ್ತಿನ ದಿನ ಮಹಾಮಂಗಳದ ದಿನ. ಇವತ್ತಿನ ದಿನ ಮಹಾಶುಭದಿನ. ಆದ್ದರಿಂದ ನೀವು ಯಾರೂ ಅಳಬಾರದು.... ಯಾರೂ ಅಳಬಾರದು....ಯಾರೂ ಅಳಬಾರದು....ಎಲ್ಲರೂ ಸುಮ್ಮನಾಗಿರಿ....ಎಲ್ಲರೂ ಶಾಂತರಾಗಿರಿ....'

--ಎಂದು ಕೂಗಿ ಕೂಗಿ ಹೇಳುತ್ತ ತಾವೇ ಅಳತೊಡಗಿದರು! ಅದನ್ನು ನೋಡಿದ ಜನತೆ ಮತ್ತೂ ಜೋರಾಗಿ ಅಳತೊಡಗಿದರು!! ಅವರ ದುಃಖ ಒಂದಕ್ಕೆ ಹತ್ತುಪಟ್ಟಾಗಿ ಬೆಳೆಯಿತು!!!

ಇಡೀ ಇಲಕಲ್ಲು ದುಃಖದ ಮಹಾಪೂರದಿಂದ ತುಂಬಿಬಿಟ್ಟಿತು. ಅಂಗಡಿಗಳು ಧಡಾರನೆ ಮುಚ್ಚಿದವು. ಉದ್ಯೋಗ ವ್ಯವಸಾಯಗಳು ನಿಂತವು. ಎಲ್ಲರೂ ಮಠಕ್ಕೆ ನಡೆದರು. ಕಾಲಿಡಲು ತೆರಪಿಲ್ಲದ ಸ್ಥಾನದಲ್ಲಿ ಸಾವಿರ ಜನರು ನುಗ್ಗಿ ಬಂದರು. ಮಠದ ಮುಂದಿನ ರಾಜಬೀದಿ ಜೇನಿನ ಹುಟ್ಟಾಯಿತು. ಅನೇಕರು ಪಕ್ಕದ ಓಣಿಯ ಮಾಳಿಗೆ ಏರಿಬಂದರು. ಇನ್ನು ಕೆಲವರು ಮಹಾದ್ವಾರವನ್ನೇ ಏರಿದರು. ಕೆಲವರು ಒಬ್ಬರ ಮೇಲೆ ಒಬ್ಬರು ನಿಂತು ಮಠದ ಗೋಡೆ ಏರಿದರು

ಆ ದಿನ ಶಾಲಿವಾಹನ ಶಕೆ-೧೮೩೩, ವಿರೋಧಿಕೃತ ಸಂವತ್ಸರ, ಕಾರ್ತಿಕ

ಶುದ್ಧ ಪಂಚಮಿ, ಶುಕ್ರವಾರ. ಕ್ರಿಸ್ತಾಬ್ದ-೧೯೦೧. ಶಿವಯೋಗಿಗಳು ಶಿವಯೋಗವಾದ ಶಿವಮುಹೂರ್ತ. ದೇಶದ ತುಂಬ ತಾರುಗಳು, ಫೋನುಗಳು ತೆರಪಿಲ್ಲದೇ ಓಡಾಡಿದವು. ಸಾವಿರ ಊರಿಗೆ ಸುದ್ದಿ ಮುಟ್ಟಿತು. ಲಕ್ಷಾವಧಿ ಭಕ್ತಸಮೂಹ ಕೇಳಬಾರದ ಸುದ್ದಿ ಕೇಳಿ ತಬ್ಬಿಬ್ಬಾದರು. ಇಡೀ ದೇಶದ ಮುಖವೆ ಇಲಕಲ್ಲಿಗೆ ತಿರುಗತೊಡಗಿತು.

*  *  *  *  *

ಇತ್ತ ಮಠದ ಒಳಗೆ ಭವ್ಯ ಸಿದ್ಧತೆಯೆ ನಡೆದುಬಿಟ್ಟಿತು. ಮಠದ ಮೇಲಂಕಣದ ನಡುವಿನ ಛಾವಣಿಯಲ್ಲಿ ಶಿವಯೋಗಿಗಳ ಸಮಾಧಿ ಶರೀರವನ್ನು ಕೂಡ್ರಿಸಲು ಭವ್ಯಗಾತ್ರದ ವೈಭವದ ಮಂಟಪವನ್ನೇ ಸಿದ್ಧಪಡಿಸಿದರು. ಸಿಂಹಾಸನವನ್ನು ಅಳವಡಿಸಿದರು. ಅಡ್ಡಪಲ್ಲಕ್ಕಿಯಲ್ಲಿ ಕಟ್ಟುವ ಬಂಗಾರದ ರಾಜಗೊಂಡೆಯನ್ನು ಮೇಲೆ ತೂಗುಬಿಟ್ಟರು. ಬೆಳ್ಳಿ-ಬಂಗಾರದ ಪೀಠಮಾನ್ಯ ಉಪಕರಣಗಳನ್ನು ಅಳವಡಿಸಿದರು. ಚೌರಿಯವರು-ಚಾಮರದವರು-ಅಂಗರಕ್ಷಕರು ದೀವಟಿಗೆಯವರು ಸಾಲಂಕೃತರಾಗಿ ನಿಂತರು.

ಅತ್ತ ಹಾನಗಲ್ಲ ಶ್ರೀಗಳು ಹಾಗೂ ಹಾವೇರಿ ಶಿವಬಸವಸ್ವಾಮಿಗಳು ವಿಜಯ ಮಹಾಂತ ಶಿವಯೋಗಿಗಳ ಪಾರ್ಥಿವ ಶರೀರದ ಮಜ್ಜನಕಾರ್ಯಕ್ಕೆ ಅಣಿ ಮಾಡಿದರು. ಚಿತ್ತರಗಿಯ ಒಂಟಿ ಭಕ್ತರು ಶುದ್ಧಮಡಿಯಿಂದ ಬಂದು ಶಿವಯೋಗಿಗಳ ಲಿಂಗೈಕ್ಯ ಕೋಣೆಯನ್ನು ಪ್ರವೇಶಿಸಿದರು. ಎಲ್ಲರೂ ಹಣೆ ಹಚ್ಚಿ ವಂದಿಸಿ, ಶ್ರೀಗಳ ಶರೀರವನ್ನು ಮೆಲ್ಲನೆ ಹೂವಿನಂತೆ ಹೊತ್ತುಕೊಂಡು ಮಠದ ಸ್ನಾನಗೃಹಕ್ಕೆ ತಂದರು. ಅಲ್ಲಿ ಮಜ್ಜನಬಾವಿಯ ನೀರನ್ನು ಕಾಯಿಸಿ ಇಡಲಾಗಿತ್ತು. ಆ ಶುದ್ಧೋದಕದಿಂದ ಶಿವಯೋಗಿಗಳ ಶರೀರಕ್ಕೆ ಕಟ್ಟಕಡೆಯ ಸ್ನಾನ ಮಾಡಿಸಲಾಯಿತು! ಮಡಿಯ ಕಫನಿಯನ್ನು ಉಡಿಸಿ, ತಲೆಗೆ ಕಾವಿಯ ಪೇಟ ಸುತ್ತಿದರು. ಅನೇಕ ಭಸ್ಮದ ಉಂಡೆಗಳನ್ನು ಒಡೆದು, ಭಸ್ಮ ಶರೀರಿಯ ಮೈಗೆ ಭಸ್ಮ ಲೇಪಿಸಿದರು.

ಆಗಲೇ ಮಜ್ಜನಕೋಣೆಯಿಂದ ಶಿವಬಸವಸ್ವಾಮಿಗಳು ಶಿವಯೋಗಿಗಳನ್ನು ಕೂಡ್ರಿಸುವ ಮಂಟಪ ಸಿದ್ಧವಾಗಿದೆಯೋ ಇಲ್ಲವೋ ಎಂದು ನೋಡಲು ಹೊರಗೆಬಂದವರು. ಆ ಮಂಟಪವನ್ನು ನೋಡಿದ್ದೇ ತಡ ದಂಗಾಗಿ ಹೋದರು. ಚಿತ್ತರಗಿ ಪೀಠದ ರಾಜಮಾನ್ಯ ಭವ್ಯ ಶ್ರೀಮಂತಿಕೆಯೆಲ್ಲ ಅಲ್ಲೇ

ಬೀಡಾರ ಬಿಟ್ಟಂತೆ ಸಾಲಂಕೃತ ವೈಭವದಿಂದ ಕಂಗೊಳಿಸುತ್ತಿತ್ತು. ಪ್ರಕಾಶದ ಪ್ರಚಂಡ ಬೆಳಕಿನಲ್ಲಿ ಪೀಠ ಜಾಜ್ವಲ್ಯಮಾನವಾಗಿ ಹೊಳೆಯುತ್ತಿತ್ತು. ಎದುರಿಗೆ ಕೆಳ ಅಂಕಣದಲ್ಲಿ ಹಾಗೂ ಅದರ ಮುಂದಿನ ವಿಶಾಲವಾದ ಪಟಾಂಗಣದಲ್ಲಿ ಪೌಳಿಯ ಪಾರ್ಶ್ವಗಳಲ್ಲಿ, ಮಹಾದ್ವಾರದಲ್ಲಿ, ಹೊರಗಿನ ಅಂಗಣದಲ್ಲಿ, ರಾಜ ಬೀದಿಯಲ್ಲಿ ಜನರು ಗಡಚಿಕ್ಕಿ ಕೂಡಿದ್ದರು. ಇನ್ನೂ ಯಾರಿಗೂ ಶಿವಯೋಗಿ ಗಳ ದರ್ಶನವೇ ಆಗಿರಲಿಲ್ಲ. ಆತುರದಿಂದ ಹಾತೊರೆದು ಹಂಬಲಿಸಿ ಅವರು ಬಿಟ್ಟಗಣ್ಣಿನ ನೆಟ್ಟನೋಟದಿಂದ ಪೀಠದ ಸಿಂಹಾಸನವನ್ನೇ ನೋಡುತ್ತಿದ್ದರು. ಶಿವಯೋಗಿ ಇವತ್ತು ಅದರ ಮೇಲೆ ಕೊನೆಯ ಬಾರಿಗೆ ಏರಲಿದ್ದಾನೆ. ಕೊನೆಯ ದರ್ಶನವನ್ನು ನೀಡಲಿದ್ದಾನೆಂದು ನಿಂತಿದ್ದಾರೆ. ಅವರಿಗೆಲ್ಲ ಒಂದೊಂದು ಕ್ಷಣವೂ ಒಂದೊಂದು ಯುಗವಾಗಿ ಕಾಡುತ್ತಿತ್ತು. ತಂದೆಯನ್ನು ಕಾಣುವ ಕಾತರ ಅಂತರಂಗವನ್ನೇ ಸುಡುತ್ತಿತ್ತು.

ಹಾವೇರಿ ಶ್ರೀಗಳು ಒಳಗೆ ಬಂದು, ಸಕಲ ಪೀಠ ಸನ್ನಾಹದಿಂದ ಸಿಂಹಾ ಸನ ಸುಸಜ್ಜಿತವಾದ ವರದಿಯನ್ನು ಹಾನಗಲ್ಲ ಶ್ರೀಗಳಿಗೆ ತಲುಪಿಸಿದರು. ಅಪ್ಪ ಣೆಗೆ ಕಾಯುತ್ತ ನಿಂತ ಹುರಿಮೀಸೆಯ ಕಟ್ಟಾಳುಗಳಾದ ಚಿತ್ತರಗಿಯ ಭಕ್ತರು ಹಾನಗಲ್ಲ ಶ್ರೀಗಳ ಮುಖವನ್ನೇ ನೋಡುತ್ತಿದ್ದರು. ಶ್ರೀಗಳು ಅವರಿಗೆ ಅಪ್ಪಣೆ ನೀಡಿದ್ದೇ ತಡ, ಪದ್ಮಾಸನ ಮಡಿಸಿದ ಶಿವಯೋಗಿಗಳ ಅಮೃತ ಶರೀರವನ್ನು ಮೆಲ್ಲನೆ ತಮ್ಮ ಅಡ್ಡಗತ್ತರಿ ಹಾಕಿದ ರಟ್ಟೆಗಳಲ್ಲಿ ಮಲಗಿಸಿಕೊಂಡು — 'ಓಂ ಜಯಾ ಜಯ ನಮಃ ಪರಾಪತೇ ಹರಹರ ಹರಹರ ಮಹಾದೇವ....' ಎಂದು ಉದ್ಘೋಷಿಸುತ್ತ ಹೊರಗೆ ಬಂದರು! ಅಂತ್ಯಯಾತ್ರೆಯ ನಿಮಿತ್ತ ನಿರ್ಮಿಸಿದ ಮೆರವಣಿಗೆ ಮಂಟಪದಲ್ಲಿ ವಿಜಯ ಮಹಾಂತ ಶಿವಯೋಗಿಗಳ ಶರೀರವನ್ನು ಇರಿಸಿದರು. ಶಿವಯೋಗಿಗಳ ಶರೀರವನ್ನು ಮೊದಲ ಬಾರಿ ಕಂಡ ಭಕ್ತರು, ಜಯಜಯಕಾರದ ಧ್ವನಿಗೆ ತಮ್ಮ ಧ್ವನಿಯನ್ನೂ ಕೂಡಿಸಿ — 'ಓಂ ಜಯಾಜಯನಮಃ ಪರಾಪತೇ ಹರಹರ ಹರಹರ ಮಹಾದೇವ....' ಎನ್ನುತ್ತ ಸಾಗರವು ಉಕ್ಕೇರಿದಂತೆ ಉಕ್ಕೇರಿದರು. ಈಗಂತೂ ದುಃಖ ಇಮ್ಮಡಿ ಮುಮ್ಮಡಿಯಾಗಿ ಏರಿಬಂತು. ಶಿವಯೋಗಿಗಳ ಕಣ್ಣುಮುಚ್ಚಿದ ಶರೀರವನ್ನು ಕಂಡು ಭಕ್ತಾದಿಗಳು ಕಂಠಹರಿದು ಚೀರಿದರು. ಘೋರಾಡಿ ಅತ್ತರು.

*  *  *  *  *

ಮಧ್ಯರಾತ್ರಿಯಾದರೂ ಕತ್ತಲು ಮಾತ್ರ ಆಗಲಿಲ್ಲ! ಎಲ್ಲಿ ನೋಡಿದಲ್ಲೆಲ್ಲ ದೀಪದ ಬೆಳಕುಗಳು. ಎಲ್ಲಿ ನೋಡಿದಲ್ಲೆಲ್ಲ ಜನರ ಹಿಂಡು. ಎಲ್ಲಿ ನೋಡಿದಲ್ಲೆಲ್ಲ ಭಜನೆಯ ಮೇಳಗಳು. ಎಲ್ಲಿ ನೋಡಿದಲ್ಲೆಲ್ಲ ಕಾಳಿ-ಕರಡಿಮಜಲು ಡೋಲು–ಸನಾದಿ ಮೊದಲಾದ ವಾದ್ಯಸಂಗೀತ. ಇಲಕಲ್ಲಿಗೆ ಬರುವ ಎಲ್ಲ ದಾರಿಗಳ ಮೇಲೂ ಇಡೀ ರಾತ್ರಿ ಸಾವಿರಾರು ಚಕ್ಕಡಿಗಳು ಬಂದವು. ಅಸಂಖ್ಯ ಜನರು ನಡೆಯುತ್ತಲೇ ಬಂದರು. ಒಂದು ಶೋಕ ಸಾಗರಕ್ಕೆ ನೂರು ಶೋಕ ಸಾಗರಗಳು ಕೂಡಿದಂತೆ ಮಹಾಶೋಕಸಮ್ಮೇಲನವೇ ಆಯಿತು. ಅನೇಕ ಊರುಗಳ ಪುರಪ್ರಮುಖರು ವಿಶೇಷ ವಾಹನಗಳಲ್ಲಿ ಭರ್ರನೇ ಬಂದರು. ಹುನಗುಂದ, ಅಮೀನಗಡ, ಚಿತ್ತರಗಿ, ಬಾಗಿಲುಕೋಟೆ, ಗುಳೇದಗುಡ್ಡ, ಬದಾಮಿ, ಸಂಗಮ, ಕಂದಗಲ್ಲ, ಕುಷ್ಟಗಿ, ಮುದಗಲ್ಲ, ಲಿಂಗಸೂರು, ಭಾವಣಿ, ಕರ್ಡಕಲ್, ಹೂಲಗೇರಿ, ಹಡಗಲಿ, ಬಾದವಾಡಗಿ, ಹಿರಿಯಬಾದವಾಡಿಗಿ, ಓತಗೇರಿ, ಹಿರಿಯಓತಗೇರಿ, ಕೆಲೂರ, ಚಿಕ್ಕಮಾಗಿ, ಗೊರಬಾಳ, ಗೊರಜನಾಳ, ನಾಗೂರ, ತಾಳೀಕೊಟೆ, ಡೋಟಿರಾಳ, ಸೂಳಿಬಾವಿ, ಶಿರೂರ, ವಜ್ಜಲ, ಇಸಲಾಂಪೂರ, ರಾಮಗಡ್ಡಿ, ತುಂಬಾಪೂರ, ಮೇಗೇರಿ, ಎಡಹಳ್ಳಿ, ಇಂಗಳಗಿ, ಬಿಂಜವಾಡಗಿ, ಬೆನಕನಾಳ, ಬೆಳಕಲ್ಲ, ಕರಡಿ, ಕೊಡಗಲಿ, ವೀರಾಪೂರ, ಗದಗ, ಧಾರವಾಡ, ಗಜೇಂದ್ರಗಡ, ರಾಯಚೂರ, ಬಳ್ಳಾರಿ, ಬೆಳಗಾಂವಿ, ಹಾವೇರಿ, ಹುಬ್ಬಳ್ಳಿ ಮೊದಲಾದ ಊರುಗಳಿಂದ ಭಕ್ತಮಾಹೇಶ್ವರರು-ಆಚಾರ್ಯರು-ಪಂಡಿತರು ಅಧಿಕಾರಿಗಳು ಉದ್ಯೋಗಸ್ಥರು ವ್ಯಾಪಾರಸ್ಥರು ನೆಗಿಲಯೋಗಿಗಳು ನೌಕರರು ಗೌಡರು ಕುಲಕರ್ಣಿಗಳು ಬಡವರು ಅನಾಥರು ಸಾಹೇಬರು ಸರದಾರರು ದೇಸಾಯರು ಪೀಠಾಧಿಪತಿಗಳು ಸಾಧುಗಳು ಸಂತರು ಸಿದ್ಧರು ಮುನಿಗಳು ಶಿವಯೋಗಿಯ ಐಕ್ಯೋತ್ಸವಕ್ಕೆಂದು ಆತುರಿಸಿ ಬಂದರು. ಹರಗುರುಚರಮೂರ್ತಿಗಳು ತೆಕ್ಕೆಗಟ್ಟಲೆ ಬಂದು ಸೇರಿದರು. ಅವರೆಲ್ಲರೂ ತಮ್ಮ ತಮ್ಮ ವಾಹನ ಸಂಚಾರಗಳನ್ನು ದೂರದ ಹೊಲಗಳಲ್ಲೆ ನಿಲ್ಲಿಸಿ ಊರಲ್ಲಿ ನಡೆದೇ ಬರಬೇಕಾಯಿತು. ರಾತ್ರಿಯಲ್ಲಿ ಇಡೀ ಊರು ಕಣ್ಣಿಗೆ ಕಣ್ಣು ಹಚ್ಚಲಿಲ್ಲ.

ಶಿವಯೋಗಿಯ ಮಹಾಸಮಾಧಿಯೆಂದರೆ ಸಾಮಾನ್ಯವೆ? ಅದೊಂದು ಐಕ್ಯೋತ್ಸವ! ಮರಣವೇ ಮಹಾನವಮಿ ಎಂದು ತಿಳಿದ ಶರಣರಿಗೆ ಸಡಗರದ ಸಂಭ್ರಮೋತ್ಸವ. ಹಕ್ಕಿಗಳು ಪಕ್ಕ ಬಡಿಯುವಷ್ಟು ಸಮಯದೊಳಗೆ ಗೋದಿ

ಅಕ್ಕಿ-ಬೆಲ್ಲ-ಬೇಳೆ-ಕಾಳುಗಳೆಲ್ಲ ಡೊಡ್ಡ ಪ್ರಮಾಣದಲ್ಲಿ ಕೂಡಿಬಿಟ್ಟವು. ಭಾರೀ ಗಾತ್ರದ ದೊಡ್ಡ ಕೊಪ್ಪರಿಗೆಗಳಲ್ಲಿ ಸಜ್ಜಕ ಮಾಡಲಾಯಿತು. ಆಳೆತ್ತರದ ಕೊಳಗಗಳಲ್ಲಿ ಅನ್ನ ಮಾಡಲಾಯಿತು. ಮೂರು ಮಂದಿ ಮುಳುಗುವಷ್ಟು ಹಂಡೆಗಳಲ್ಲಿ ಸಾರು ಕಾಸಲಾಯಿತು. ಚಕ್ಕಡಿಗಟ್ಟಲೆ ಎಲೆಗಳು ಬಂದುಬಿದ್ದವು. ನೂರಾರು ಕುಡಿಯುವ ನೀರಿನ ಡ್ರಮ್ಮುಗಳನ್ನು ಭಕ್ತರು ತಾವೇ ತಂದಿಟ್ಟರು. ಮರುದಿನ ಐವತ್ತು ಸಾವಿರಕ್ಕೂ ಮೇಲ್ಪಟ್ಟು ಜನರಿಗೆ ಅನ್ನಪ್ರಸಾದ ನಡೆಯಿತು! ಶಿವಯೋಗಿ ಬಾಳಿದಾಗಲೂ ಪವಾಡ ಮೆರೆದ! ಐಕ್ಯವಾದಾಗಲೂ ಪವಾಡಮೆರೆದ!!

ಅನೇಕ ಗ್ರಾಮಗಳ ಮರಶಿಲ್ಪ ತಜ್ಞರು ಶಿವಯೋಗಿಗಳ ತೇರು ಕಟ್ಟಲು ನಾಮುಂದೆ ನೀಮುಂದೆ ಎಂದು ಸ್ಪರ್ಧೆಯಿಂದ ಬಂದರು. ತಮ್ಮ ಕಲ್ಪನೆ-ಕಲೆ-ಜಾಣ್ಮೆಗಳನ್ನು ಪಣಕ್ಕೆ ಹಚ್ಚಿ ತೇರಿನ ನಿರ್ಮಾಣ ಕಾರ್ಯ ಆರಂಭಿಸಿದರು. ಅವರ ಕೈಗಳು ಎಂದೂ ಓಡದ ಚುರುಕುಗತಿಯಲ್ಲಿ ಚಲಿಸಿದವು. ಕಣ್ಣುಗಳು ಮೀನಗಳಂತೆ ತೀಕ್ಷ್ಣವಾದವು. ಬುದ್ಧಿಶಕ್ತಿ ಬೆಳೆಯಿತು. ತೂಕ-ತರ್ಕ ಹದಕ್ಕೆ ಹಚ್ಚಿ ತಿಕ್ಕಿ. ವೈಭವದ ಸಾಲಂಕಾರವನ್ನು ಅಣಿಗೊಳಿಸಲು ತೊಡಗಿದರು. ಅವರಿಗೆ ಬೇಕಾದ ಅತ್ಯಂತ ಸುಂದರ ಬೆಲೆಬಾಳುವ ಅಲಂಕಾರ ವಸ್ತುಗಳನ್ನೆಲ್ಲ ಭಕ್ತರಾಗಲೇ ಪೂರೈಸಿಕೊಟ್ಟಿದ್ದರು. ಶಿವಯೋಗಿಯ ಐಕ್ಯೋತ್ಸವದ ತೇರೆಂದರೆ ಸಾಮಾನ್ಯವೇ? ದೇವತೆಗಳೂ ಬಂದು ನೋಡಬೇಕು.

ದರ್ಶನಾರ್ಥಿಗಳ ಸಂಖ್ಯೆ ಪ್ರಚಂಡವಾಯಿತು. ನೂರಾರು ಶಿಸ್ತಿನ ಸರಕಾರಿ ದೂತರು ದಿವಾಳಿ ತೆಗೆದರು. ಯಾರಿಗೂ ನಿಗ್ರಹಿಸುವದು ಆಗಲಿಲ್ಲ. ಹೆಚ್ಚಿನ ರಕ್ಷಣಾ ಪಡೆಗೆ ದೂರದ ಊರುಗಳಿಗೆ ಹೇಳಿಕಳಿಸಬೇಕಾಯಿತು.

ಅಂದು ಇಡೀ ದಿನ ದರ್ಶನಕ್ಕಾಗಿ ಬರುವ ಭಕ್ತರಿಗೆ ತೆರಪಿಲ್ಲದಾಯಿತು. ಅನೇಕ ಪುರಪ್ರಮುಖರು ವ್ಯವಸ್ಥೆಗೆ ನಿಂತರು. ಎಷ್ಟು ಜನರು ಸೇವೆಗೆ ನಿಂತರೂ ಸಾಲದಂತೆ ಸ್ಥಿತಿ ಪ್ರಾಪ್ತವಾಯಿತು. ಅಲ್ಲಿಯ ಕಾರ್ಯಕಲಾಪಗಳಿಗೆ ಯಾವದು ತುದಿ ಯಾವುದು ಮೊದಲು ಗೊತ್ತಾಗಲಿಲ್ಲ. ಸಿಂಹಾಸನದ ದರ್ಶನ ಸ್ಥಳದಲ್ಲಿ ವಿಜಯಮಹಾಂತಶಿವಯೋಗಿಗಳಿಗೆ ಇಲಕಲ್ಲಿನ ನಿಕಟವರ್ತಿ ಭಕ್ತರಾಗಿದ್ದ ಕಂಠಿ ರುದ್ರಪ್ಪನವರು, ಸೂಡಿ ಮಹಾಂತಪ್ಪನವರು, ಸಕ್ರಿ ಶಂಕ್ರಪ್ಪನವರು, ಅಕ್ಕಿ ಶಿವಪ್ಪನವರು, ಗೊಂಗಡಶೆಟ್ಟಿ ಶಿವರುದ್ರಪ್ಪನವರು, ಕುಟಗಮರಿ ಮಲ್ಲಪ್ಪನವರು, ಕೊಡಗಲಿ ರುದ್ರಪ್ಪನವರು, ಪಾಟೀಲ ಐಯನಗೌಡರು, ಪಟ್ಟಣಶೆಟ್ಟಿ

ಚೆನ್ನಸಂಗಪ್ಪನವರು ಮೊದಲಾದವರು ನಿಂತು ಗದ್ದಲವಾಗದಂತೆ ದಕ್ಷ ರೀತಿ ಯಿಂದ ನೋಡಿಕೊಂಡರು. ಶಿವಬಲ್ಲ ದೊಡ್ಡಪ್ಪ, ಗೋಸಾಳ ವೀರಪ್ಪ, ಶೆಟ್ಟರ ಚನವೀರಪ್ಪ ಎಂಬ ಹುಡುಗರು ಸರದಿಯ ಮೇಲೆ ಶಿವಯೋಗಿಗಳಿಗೆ ಚೌರಿ ಚಾಮರ ಬೀಸಿದರು.

ದರ್ಶನಾರ್ಥಿಗಳಾಗಿ ಬಂದ ಸಾವಿರಗಟ್ಲೆ ಜನರಿಗೆ ಪ್ರಸಾದ ವ್ಯವಸ್ಥೆ ಯೆಂದರೆ ಸಾಮಾನ್ಯವೆ? ಅದಕ್ಕೆ ಹುನಗುಂದದ ನಾಗರಾಳ ದೊಡ್ಡಪ್ಪನವರೇ ನಿಲ್ಲಬೇಕಾಯಿತು. ಪ್ರಸಾದ ಕಾರ್ಯಕ್ಕೆ ಪ್ರಸಾದಿಗಳೆ ಬೇಕಲ್ಲವೆ? ಅವರೊಂ ದಿಗೆ ಕೆಂದೂರ ಬಸಪ್ಪನವರು, ರಾಜಮನಿ ರಾಚಪ್ಪನವರು, ಕಂಬಾಳಿಮಠ ಗುರುಬಸಯ್ಯನವರು, ಮಠದ ಮುಸಿಯಯ್ಯನವರು ಸಜ್ಜಕ ನೀಡಲು ನಿಂತರು. ಗೊಬ್ಬರದ ರುದ್ರಪ್ಪನವರು, ಬಳೂಟಗಿ ಆಡಿವೆಪ್ಪನವರು, ಪಾಟೀಲ ವೀರನಗೌಡರು, ಅಬ್ಬಿಗೇರಿ ಚನ್ನಬಸಪ್ಪನವರು, ಇಲಕಲ್ಲ ಮಲ್ಲಪ್ಪನವರು, ತ್ಯಾಪಿ ಸಿದ್ಧರಾಮಪ್ಪನವರು ಅನ್ನ ಬಡಿಸಲು ನಿಂತರು. ಹವಾಲದಾರ ಈಶ್ವರ ಪ್ಪನವರು, ಜಮಾದಾರ ಬಸಪ್ಪನವರು ಸಾರು ನೀಡಿದರು. ಭಸ್ಮಧಾರಿಯಾಗಿ, ಲಿಂಗಲೀಲೆಯಲ್ಲಿ ಹೊಳೆಯುತ್ತಿದ್ದ ಬಾಲಕರಾದ ಮಠದ ಗುರುಮೂರ್ತಿ ಗುರು ಬಸವಾರ್ಯರು ಪಂಕ್ತಿಯ ಸಾಲುಗಳಲ್ಲಿ ತುಪ್ಪ ಸಕ್ಕರೆ ನೀಡುತ್ತಿದ್ದರು!

ಇನ್ನು ತೇರಿನ ವ್ಯವಸ್ಥೆಗೆ ಚಿತ್ತರಗಿಯ ಬಂಟ ಭಕ್ತರು ನಿಲ್ಲದೆ ಗತಿ ಇರ ಲಿಲ್ಲ. ಫೌಜದಾರ ಶಿವಸಂಗಪ್ಪನವರು ಅದರ ಮೇಲ್ವಿಚಾರಣೆ ನೋಡಿಕೊಂ ಡರು. ಮಠದ ಸಂಗಯ್ಯನವರು ಕಾರ್ಯ ತ್ವರಿತವಾಗಿ ಸಾಗಲು ಮರಶಿಲ್ಪಿ ಗಳನ್ನು ಪ್ರೋತ್ಸಾಹಿಸಿದರು.

ಅಂತ್ಯಯಾತ್ರೆಯ ಮೆರವಣಿಗೆಯ ಭಾರಿ ವ್ಯವಸ್ಥೆಗೆ ಶ್ರೀಮಂತರಾದ ರಕ್ಕಸಗಿ ಸಂಗಪ್ಪನವರೇ ನಿಲ್ಲಬೇಕಾಯಿತು. ಅವರೊಂದಿಗೆ ಇಂಗಳಗಿಯ ತಿಮ್ಮನಗೌಡರು, ಕೊಡಗಲಿಯ ಅಮೀನಪ್ಪ ದೇಸಾಯಿಯವರು ಸಹಕರಿಸಿ ದರು. ದೂರ ದೂರದ ಊರಿನಿಂದ ಬಂದ ಹರ ಗುರು ಚರಮೂರ್ತಿಗಳ ಪೂಜಾ ವ್ಯವಸ್ಥೆಯನ್ನು ಕಂದಗಲ್ಲ ಪರ್ವತಶಾಸ್ತ್ರಿಗಳು, ಅಮೀನಗಡದ ಗರಡಿ ಶೀಲವಂತಪ್ಪನವರು, ಕೆಲೂರಿನ ನಾಡಗೌಡ ಮಂಟಪ್ಪನವರು, ಹಿರೆಬಾದ ವಾಡಿಗೆಯ ಹಳ್ಳೂರ ಸಂಗಪ್ಪನವರು, ಗುಡೂರಿನ ಪಟ್ಟಣಶೆಟ್ಟಿ ಮಹಾ ಲಿಂಗಪ್ಪನವರು ನೋಡಿಕೊಂಡರು. ಸಮಾಧಿಸ್ಥಾನದ ಸಮಾಧಿ ರಚನೆಯ

ವ್ಯವಸ್ಥೆಯನ್ನು, ಇಲಕಲ್ಲಿನ ಪೂರ್ವಕ್ಕೆ ಜೋಡು ನದಿಗಳು ಕೊಡುವ ಸುಂದರ ವಾದ ಸಂಗಮ ಸ್ಥಳದಲ್ಲಿ; ಸಂಗಮದ ಪಾಟೀಲ ಸಂಗಪ್ಪನವರು, ಕರಡಿ ನಾಡಗೌಡರು, ಕಂದಗಲ್ಲ ನಾಡಗೌಡರು ದಕ್ಷ ರೀತಿಯಿಂದ ನೋಡಿಕೊಂಡರು.

*　*　*　*

ಮರುದಿನ ಬೆಳಗು ಹರಿಯುತ್ತಲೇ ಇಡೀ ಇಳಕಲ್ಲು ಬದಲಾಗಿ ಹೋಗಿತ್ತು! ಹಿಂದಿನ ದಿನದ ಮಹಾಶೋಕ ಇಂದು ಇರಲಿಲ್ಲ. ಕಣ್ಣೀರ ಹೊಳೆ ಇಳಿದುಹೋಗಿತ್ತು. ಒಂದು ಬಗೆಯ ದೈವಿ ಉತ್ಸಾಹ, ಅಪೂರ್ವ ಆನಂದ, ಐಕ್ಯೋತ್ಸವದ ಸಂಭ್ರಮಗಳು ಓಣಿಓಣಿಗಳಲ್ಲಿ ತುಂಬಿಬಿಟ್ಟಿದ್ದವು. ಎಲ್ಲರ ರೋಮರೋಮಗಳಲ್ಲಿ ಹೊಸ ಹಿಗ್ಗು ಸಂಚಾರವಾಗಿತ್ತು. ಶಿವ ಯೋಗಿಯ ತೇರು ಸಾಗುವ ದಾರಿಗಳಲ್ಲೆಲ್ಲ ಮುತ್ತೈದೆಯರು ತಳಿ ಹೊಡೆದು ರಂಗೋಲಿ ಹಾಕಿದ್ದರು, ಹಿರಿಯರು ತಳಿರು ತೋರಣಗಳಿಂದ ಬೀದಿಗಳನ್ನು ಸಾಲಂಕಾರಗೊಳಿಸಿದ್ದರು. ಬಾಳೆಯ ಕಂಬ, ತೆಂಗಿನ ಗರಿಗಳನ್ನು ಅಲ್ಲಲ್ಲಿಗೆ ಅಣಿಮಾಡಿದ್ದರು.

ಆಶ್ಚರ್ಯವೆಂದರೆ ಮಳೆಗಾಲದ ಜಡಿಮಳೆಯಂತೆ ಇನ್ನೂ ಬಂಡಿಗಳು ವಾಹನಗಳು, ಜನರು ಬಂದೇ ಬರುತ್ತಿದ್ದರು. ನೂರಾರು ಭಜನೆಯ ಮೇಳ ಗಳು ಬಂದು ಸೇರತೊಡಗಿದವು.

ಈ ದಿವಸದ ಹೂವಿನ ಸಂಭ್ರಮವನ್ನಂತೂ ಎರಡು ಕಣ್ಣಿನಿಂದ ಕಾಣು ವದು ಸಾಧ್ಯವಿಲ್ಲ. ಜಾಜಿಮಲ್ಲಿಗೆ, ಗುಲಾಬಿ ಮೊದಲಾದವುಗಳ ಸುಮನೋ ಹರ ಪುಷ್ಪಹಾರಗಳನ್ನು ತಂದು ಸಮರ್ಪಿಸಿದರು. ಮಠದಲ್ಲಿ ಎರಡು ಮೂರು ಕೋಣೆಗಳು ಹೂವಿನಹಾರ ಗುಚ್ಛಗಳಿಂದ ತುಂಬಿದ್ದವು.

ನಡುಮಧ್ಯಾಹ್ನವಾಗಲು ಇನ್ನೂ ಒಂದು ತಾಸು ಇತ್ತು. ಆಗ ಯಾರೂ ಎಂದೂ ಕೇಳದ ಎಂದೂ ನೋಡದ ವಿಚಿತ್ರ ಘಟನೆಯೊಂದು ನಡೆಯಿತು. ಆಕಾಶದಲ್ಲಿ ಹಗಲಿನ ಸಮಯದಲ್ಲೇ ಉಜ್ವಲ ಹೊಳಪುಳ್ಳ ಒಂದು ಶುಕ್ರತಾರೆ ಥಳಥಳ ಹೊಳೆಯುತ್ತಿದೆ; ಇದೆಂಥ ವಿಚಿತ್ರ! ಯಾವ ವಿಜ್ಞಾನಿಯೂ ನಂಬ ಲಾರ. ಆದರೆ ಆ ಮಹಾಸತ್ಯ ಕಣ್ಣಾರೆ ಕಂಡಿತು. ಎಲ್ಲರೂ ಈ ಪರಮಾಶ್ಚ ರ್ಯದ ಹಬ್ಬದಲ್ಲಿ ಪಾಲುಗೊಂಡರು. ಸೂರ್ಯ ಕಿರಣಗಳಲ್ಲಿ ಕಣ್ಣುಗಳು ನೋವಾದರೂ ಎವೆಬಡಿಯದೇ ಕಂಡರು. ಕಲ್ಪನೆಗೂ ಅಸಾಧ್ಯವಾದ ಸಂಗತಿ

ಯನ್ನು ಕಣ್ಣಿನಿಂದ ಕಂಡು ದಂಗಬಡಿದುಹೋದರು. ಅವರ ಪ್ರಶ್ನೆಗೆ ವಿಸ್ಮಯವೇ ಉತ್ತರವಾಯಿತು. ಶುಕ್ರತಾರೆ ಕೆಲ ಕಾಲ ರಾರಾಜಿಸಿ ಅನಂತದಲ್ಲಿ ಮತ್ತೆ ಶೂನ್ಯಳಾಗಿ ಸೇರಿದಳು. ವಿಜಯ ಮಹಾಂತೇಶ್ವರ ಯೋಗಿಯು ಶೂನ್ಯವನ್ನು ಸೇರಿದುದಕ್ಕೆ ಮುಕ್ತಿವನಿತೆ ಕೊನೆಯ ಕಣ್ಣನ್ನೇ ಮಾಡಿದಂತೆ ಅದು ಸೂಚಿಸಿತು.

* * * *

ಮಧ್ಯಾಹ್ನ ನಾಲ್ಕು ಘಂಟೆಗೆ ಶಿವಯೋಗಿಗಳ ತೇರು ಮಠದಿಂದ ಹೊರಟಿತು. ಮರಶಿಲ್ಪಿಗಳ ಅಪೂರ್ವ ಕನಸಿನಂತೆ ತೇರು ನಿರ್ಮಿತವಾಗಿತ್ತು. ಶಿವಯೋಗಿಯ ಮಹಾಸಮಾಧಿಗೆ ಇದೊಂದು ಸಾರ್ಥಕ ಶಿವಯೋಗಮಂಟಪ ವೆಂಬಂತೆ ಕಂಗೊಳಿಸುತ್ತಿತ್ತು.

ತೇರು ಮುಂದೆ ಸಾಗಿತು. ಅಸಂಖ್ಯ ಜನಸ್ತೋಮವನ್ನು ಅಳೆಯಲು ಆಕಾಶವೆಂಬ ಅಳತೆ ಪಟ್ಟಿಯೆ ಬೇಕಾಯಿತು. ಹೆಂಗಳೆಯರು ತುಂಬಿದ ತಲೆಗೆ ತುಂಬಿದ ಸೆರಗು ಹೊಚ್ಚಿಕೊಂಡು, ಸೆರಗಿನ ಅಂಚನ್ನು ಕೈಯಲ್ಲಿ ಹಿಡಿದು ಶಿವಯೋಗಿಗೆ ಕೊನೆಯ ವಂದನೆಯನ್ನು ನೀಡಿದರು, ತಮ್ಮ ಟೊಂಕದ ಮೇಲಿನ ಮಕ್ಕಳನ್ನು ಮೇಲೆತ್ತಿ ಅವುಗಳಿಗೆ 'ಅಜ್ಜಯ್ಯ ಹೋಂಟಾನು ಕೈ ಮುಗಿ' ಎಂದು ಮುಗಿಸತೊಡಗಿದರು. ಅವು ಏನೂ ತಿಳಿಯದೆ ತಬ್ಬಿಬ್ಬಾಗಿ ಕೈ ಮುಗಿಯುತ್ತಿದ್ದವು.

ತೇರಿನ ಹಿಂದೆ ಹೊರಟ ಕಳಸಾರತಿಯ ಸಾವಿರಾರು ಮುತ್ತೈದೆಯರನ್ನು ಎಷ್ಟು ವರ್ಣಿಸಿದರೂ ತೀರದು. ವಿಜಯ ಮಹಾಂತೇಶ್ವರನ ಐಕ್ಯೋತ್ಸವಕ್ಕೆಂದು ದೇವಲೋಕದಿಂದ ಇಳಿದುಬಂದ ದೇವಕನ್ನೆಯರಂತೆ ಕಾಣುತ್ತಿದ್ದರು.

ತೇರಿನ ಮುಂಗಡೆಗೆ ಜಯಜಯಕಾರರು, ಉದ್ಘೋಷಕಾರರು, ಅರ್ಚಕರು, ಅರ್ಪಣೆ ನೀಡುವವರು, ಮಾಲಾರ್ಪಣೆಕಾರರು ಕಿಕ್ಕಿರಿದು ನೆರೆದಿದ್ದರು. ಅನೇಕರು ಚೌರಿ ಚಾಮರಗಳನ್ನು ಸ್ಪರ್ಧೆಯಿಂದ ತಿರುವುತ್ತಿದ್ದರು. ಇನ್ನೂ ಮುಂದೆ ವಾದ್ಯಮೇಳಗಳು, ಭಜನಾ ಮೇಳಗಳು, ಕರಡೀ ಮಜಲುಗಳು, ಭಕ್ತಿಕೂಟಗಳು ಒಂದು ಮೈಲು ಪರ್ಯಂತ ವ್ಯಾಪಿಸಿದ್ದವು.

ಈ ಮೆರವಣಿಗೆಯಲ್ಲಿ ಕಿಕ್ಕಿರಿದು ಕೂಡಿದ ಅಸಂಖ್ಯ ಭಕ್ತರು ಶಿವಯೋಗಿಗಳ ತೇರಿಗೆ ಹೂವು–ಪತ್ರಿ–ಬೆಂಡು–ಬೆತ್ತಾಸುಗಳನ್ನು ಮಳೆಗಟ್ಟಲೆ ತೂರಿ

ದರು. ಅವು ದಾರಿಯ ತುಂಬ ನಾಲ್ಕು ಬೆರಳು ದಪ್ಪ ಬಿದ್ದುಬಿಟ್ಟವು. ಇದ್ದುಳ್ಳ ಭಕ್ತರು ಭಾರೀ ಗಾತ್ರದ ರಾಣಿ ರೂಪಾಯಿಗಳನ್ನು ಭಯಭಕ್ತಿಯಿಂದ ತೇರಿಗೆ ತೂರಹತ್ತಿದರು.

ತೇರು ಮುಂದೆ ಸಾಗಿ ಅಗಸೆಯ ಸಮೀಪದ ಬನಶಂಕರಿಯ ಗುಡಿಯ ಹತ್ತಿರ ಬಂದಾಗ ಒಂದು ವಿಶೇಷ ಘಟನೆ ಜರುಗಿತು. ತಮ್ಮ ಜೀವಿತದ ಅವಧಿಯಲ್ಲಿ ಶ್ರೀಗಳು ಯಾರೊಬ್ಬರಿಗೂ ತಮ್ಮ ಫೋಟೋ ತೆಗೆಯಲು ಪರವಾನಿಗೆ ಕೊಟ್ಟಿದ್ದಿಲ್ಲ. ತಲೆಕಟ್ಟಿನ ಸಿದ್ಧಲಿಂಗಯ್ಯ ಎಂಬ ಉತ್ಸಾಹಿ ಭಕ್ತ ಹಿಂದೆ ಒಂದು ಸಲ ಶಿವಯೋಗಿಗಳ ಭೆಟ್ಟಿಯಾಗಿ ಅವರ ಫೋಟೋ ತೆಗೆಯಲು ಕೇಳಿದ್ದ. ಆದರೆ ಅದಕ್ಕೆ ಶ್ರೀಗಳು ಒಪ್ಪಿಗೆ ನೀಡಲಿಲ್ಲ, ತಮ್ಮ ಚಿತ್ರ ತೆಗೆಯಕೂಡದೆಂದು ಕಟ್ಟಪ್ಪಣೆ ಮಾಡಿದ್ದರು. ಆದರೂ ಒಂದು ಸಲ ಕಳ್ಳತನದಿಂದ ಮರೆಗೆ ನಿಂತು ಒಂದು ಫೋಟೋ ಹೊಡೆದಿದ್ದ! ಆದರೆ ಅದರಲ್ಲಿ ಶಿವಯೋಗಿಗಳ ಚಿತ್ರ ಮೂಡಿದ್ದೇ ಇಲ್ಲ! ಶಿವಯೋಗಿಗಳು ಅವನಿಗೆ — 'ಲೇ ಸಿದ್ಧಲಿಂಗಾ....ನನ್ನ ಆತ್ಮದ ಫೋಟೋ ತೆಗೆಯುತ್ತಿದ್ದರೆ ತೆಗೆ, ಬಿದ್ದುಹೋಗುವ ಈ ದೇಹದ ಫೋಟೊ ಯಾಕ ತೆಗೆಯುತ್ತೀ? ತೆಗೆಯಬೇಡ. ತೆಗೆದರೆ ನಿನ್ನ ವಂಶ ನಿರ್ವಂಶವಾಗುತ್ತದೆ' ಎಂದು ಎಚ್ಚರಿಕೆ ನೀಡಿದ್ದರು. ಅವನು ಹೊಟ್ಟೆಸಲುವಾಗಿ ಬಂದಿದ್ದಾನೆಂದು ಮರುಗಿ ಐದು ರೂಪಾಯಿ ಕೊಟ್ಟು ಕಳಿಸಿದ್ದರು. ಕೊನೆಯ ವರೆಗೂ ಶಿವಯೋಗಿಯ ಫೋಟೊ ಆಗಲಿ, ರೇಖಾಚಿತ್ರವಾಗಲಿ ಯಾರೂ ತೆಗೆಯಲು ಅವಕಾಶವೇ ಆಗಲಿಲ್ಲ. ಆದರೆ ಈಗ ಮಾತ್ರ ತಲೆಕಟ್ಟಿನ ಸಿದ್ಧಲಿಂಗಯ್ಯನು, ಇದು ಕೊನೆಯ ಪ್ರಯತ್ನವೆಂದು ಸಕ್ಕರಿಯವರ ಬನಶಂಕರಿ ಗುಡಿಯ ಹತ್ತಿರ, ಶಿವಯೋಗಿಗಳ ಚಿತ್ರ ತೆಗೆಯಲು ತನ್ನ ಕ್ಯಾಮರಾ ಸಿದ್ಧ ಮಾಡಿಕೊಂಡು ನಿಂತೇಬಿಟ್ಟನು. ಇನ್ನೂ ಗೊಂಬಿ ಆಳತೆ ಹೊತ್ತು ಇದ್ದಾಗ ಶ್ರೀಗಳ ತೇರು ಅಲ್ಲಿಗೆ ದಯಮಾಡಿಸಿತು. ಫೋಟೊ ತೆಗೆಯಲು ಅತ್ಯುತ್ತಮ ಸಮಯ! ಶ್ರೀ ಹಾನಗಲ್ಲ ಶಿವಯೋಗಿಗಳ ಆಜ್ಞೆಯ ಮೇರೆಗೆ, ಆತ ತೇರಿಗೆ ಸಮೀಪದಲ್ಲೇ ನಿಂತು ಒಂದು ಫೋಟೊ ಹೊಡೆದುಕೊಂಡೇ ಬಿಟ್ಟ! ಅದೇ ಫೋಟೊ ಮುಂದೆ ಶಿವಯೋಗಿಗಳನ್ನು ಎಂದೂ ನೋಡದ ಭಕ್ತರಿಗೆ ಅವರ ಮುಖವನ್ನು ನೋಡಲು ಕಾಮಧೇನುವಾಯಿತು. ಆ ದಿನ ಆ ಚಿತ್ರ ಆತ ತೆಗೆಯದಿದ್ದರೆ ಲೋಕಕ್ಕೆ ಶಿವಯೋಗಿಗಳ ಮುಖ ಕಾಲ್ಪನಿಕ ಸಂಗತಿಯಾಗಿ ಇರು

ತ್ತಿತ್ತು. ಆದರೇನು, ತಮ್ಮ ಫೋಟೋ ತೆಗೆಯಬಾರದೆಂದು ಶಿವಯೋಗಿಗಳು ಅವನಿಗೆ ಕಟ್ಟಪ್ಪಣೆ ಮಾಡಿರಲಿಲ್ಲವೇ? ಈಗ ಆತ ಅವರ ಆಜ್ಞೆ ಮೀರಿ ಕೆಲಸ ಮಾಡಿದ. ಅದರಿಂದ ಅವನ ವಂಶವೇ ಸತ್ಯಾನಾಶವಾಗಿ ಹೋಯಿತು! ಆತ ಈ ರೀತಿ ತನ್ನ ಆತ್ಮ ಬಲಿದಾನವನ್ನೂ ವಂಶ ಬಲಿದಾನವನ್ನೂ ನೀಡಿ ಶಿವಯೋಗಿಗಳ ಸಂಸ್ಮರಣೆಯನ್ನು ಲೋಕಕ್ಕೆ ಉಳಿಸಿದ ಪುಣ್ಯಾತ್ಮನಾದ!ಹುತಾತ್ಮನಾದ!!

ತೇರು ಇಲಕಲ್ಲ ನಗರದ ಪ್ರಮುಖ ಹೆದ್ದಾರಿಗಳಲ್ಲೆಲ್ಲ ಜನಸಾಗರದ ಮಧ್ಯದಲ್ಲಿ ತೇಲುತ್ತ ಸಾಗಿತು, ದೇಶದ ನಾನಾ ಭಾಗಗಳಿಂದ ಬಂದ ಸಮಸ್ತ ಜನರು ಶಿವಯೋಗಿಗಳ ಅಂತ್ಯ ದರ್ಶನ ಪಡೆದರು.

ಕೊನೆಗೆ ಹಿರಿಯ ಹಳ್ಳವನ್ನು ದಾಟಿ ಸಮಾಧಿ ಸ್ಥಾನಕ್ಕೆ ಬರುವ ಹೊತ್ತಿಗೆ ರಾತ್ರಿ ಹನ್ನೆರಡಾಯಿತು! ಹಾನಗಲ್ಲ ಶ್ರೀಗಳು, ಹಾವೇರಿ ಶಿವಬಸವ ಸ್ವಾಮಿಗಳು, ಇನ್ನೂ ನೂರಾರು ಜನ ಪರಗುರು ಚರಮೂರ್ತಿಗಳು ಶಿವ-ಯೋಗ ಮಂದಿರದ ವಟುಗಳು, ಸಾಧಕರು ಅಲ್ಲಿ ಸುವ್ಯವಸ್ಥಿತವಾಗಿ ನೆರೆದಿದ್ದರು. ಹಿರಿಯ ಹಳ್ಳ - ಎರಿಯ ಹಳ್ಳ ಒಂದನ್ನೊಂದು ಸಂಧಿಸುವ ಸುರ ಸುಂದರ ಸಂಗಮದಲ್ಲಿ, ವಿಜಯಮಹಾಂತ ಶಿವಯೋಗಿಗಳ ಹಿಂದಿನವರಾದ ಗುರು ಮಹಾಂತ ಸ್ವಾಮಿಗಳ ಗದ್ದುಗೆಯೊಂದೇ ಇದ್ದದ್ದು. ಉಳಿದುದೆಲ್ಲ ಅಪಾರ ಪ್ರಕೃತಿಯ ಪಾವನ ವನಶ್ರೀ! ಆತ್ಮ ವಿಲಾಸದ ಸೃಷ್ಟಿಯ ರೂಪಶ್ರೀ!! ಶಿವಯೋಗ ಸಾಮರ್ಥ್ಯದ ಅನಂತ ಯೋಗಶ್ರೀ!!!

ಇಂಥ ಪರಮ ಪವಿತ್ರ ಸ್ಥಾನದಲ್ಲಿ, ಗುರು ಮಹಾಂತಸ್ವಾಮಿಗಳ ಗದ್ದುಗೆಯ ಎಡಭಾಗದಲ್ಲಿ, ನೂತನ ಸಮಾಧಿಯು ಅಪರೂಪವಾಗಿ ವಿರಚಿಸಲ್ಪಟ್ಟಿತ್ತು. ಅಸಂಖ್ಯ ಜನರೆಲ್ಲ ಅಲ್ಲಿ ಕಿಕ್ಕಿರಿದು ಕೂಡಿದರು. ಜನಸಂದಣಿಗೆ ಆ ತಪೋವನ ಸಾಲಲಿಲ್ಲ. ಪಕ್ಕದ ಉಪವನ ಉಳಿಯಲಿಲ್ಲ. ವಿಸ್ತೀರ್ಣವಾದ ಸುವಿಶಾಲ ಹಳ್ಳವೂ ಗಡಚಿಕ್ಕಿ ತುಂಬಿತು. ಹಳ್ಳದ ಉಸುಕಿನಕಿಂತಲೂ ಅವರ ಸಂಖ್ಯೆಯೇ ಹೆಚ್ಚಾದಂತೆ ತೋರಿತು!

ಕೊನೆಗೆ ತೇರು ತನ್ನ ಗುರಿ ತಲುಪಿತು! ಹಾನಗಲ್ಲ ಶ್ರೀಗಳು ಐಕ್ಯೋತ್ಸವವನ್ನು ನೆರವೇರಿಸಲು ನಿಂತರು. ವಿಜಯಮಹಾಂತಶಿವಯೋಗಿಗಳ ಅಮೃತ ಶರೀರ ಸಮಾಧಿಯನ್ನು ಸೇರಿತು! ಅವರ ಆತ್ಮವು ಹೊಂದಿದ್ದ ಚಿರಂತನ ನಿರ್ವಿಕಲ್ಪ ಸಮಾಧಿಯ ಆಳಕ್ಕೆ ತಾನೂ ಧುಮುಕಿತು! ಪೃಥ್ವಿಯ ರಹಸ್ಯ ಗರ್ಭ

ದಲ್ಲಿ ಸೇರಿ ಏಕಮೇವಾದ್ವಿತೀಯವಾಯಿತು!!! ಭಕ್ತರೆಲ್ಲ ತಮ್ಮ ಕೊನೆಯ ಕಾಣಿಕೆಯೆಂದು ಸಮಾಧಿಗೆ ಹೂಪತ್ರಿ ಸುರಿದು, 'ನಮೋನಮೊ' ಎಂದು ಕೈಮುಗಿದು, ಸಮಾಧಿಯ ಮಣ್ಣನ್ನೇ ಅಂಗಾರವಾಗಿ ಹಣೆಗೆ ಹಚ್ಚಿಕೊಂಡು ಮರಳಿದರು! ತಮ್ಮ ಬಾಳಿನೊಂದಿಗೆ ಈ ಅಪೂರ್ವ ಅನುಭವವನ್ನು ತುಂಬಿ ನಡೆದರು!! ಶಿವಯೋಗಿಗಳ ಆತ್ಮದ ಕಿಡಿಯ ಒಂದೊಂದು ಅಣುವಾಗಿ ನಡೆದರು!!!

ಎಲ್ಲರ ಅಂತರಂಗದಲ್ಲೂ ಮಹಾ ಪ್ರಶ್ನೆಯೊಂದು ಮತ್ತೆ ಪೆಡಂಭೂತ ವಾಗೆ ಹೆಡೆ ಎತ್ತಿ ನಿಂತಿತು—

'ಇಂಥ ಶಿವಯೋಗಿ ಚಿತ್ತರಗಿ ಓತಕ್ಕೆ ಮತ್ತೆ ದೊರಕುವನೇ....???'

* * * *

ಶಿವಯೋಗಿಯ ಶರೀರ ಮಣ್ಣೊಳಗೆ ಬೆರೆದರೂ ಚೈತನ್ಯ ವಿಶ್ವವನ್ನೇ ವ್ಯಾಪಿಸಿತು. ಆತನ ಪ್ರೇಮ ಒಂದೇ ಒಂದು ದೇಹದಲ್ಲಿ ಆಶ್ರಯಿಸಿರುವದನ್ನು ಬಿಟ್ಟು, ಸಕಲ ಭಕ್ತರ ಹೃದಯ ಮಂದಿರದಲ್ಲಿಯೂ ವಾಸವಾಗಿಬಿಟ್ಟಿತು.

ಇಲ್ಲಿಯ ವರೆಗೆ ವಿಜಯಮಹಾಂತ ಶಿವಯೋಗಿಗಳು ಮಠದಲ್ಲಿ ಮಾತ್ರ ಇರುತ್ತಿದ್ದರು. ಇನ್ನು ಮೇಲೆ ಭಕ್ತರೆಲ್ಲರ ಮನಮನದಲ್ಲಿ ಮನೆಮನೆಯಲ್ಲಿ, ಸುಖದಲ್ಲಿ ದುಃಖದಲ್ಲಿ, ಆಟದಲ್ಲಿ, ಪಾಠದಲ್ಲಿ, ನ್ಯಾಯದಲ್ಲಿ, ವಿನಯದಲ್ಲಿ, ಊಟದಲ್ಲಿ, ಉಡುಗೆಯಲ್ಲಿ, ಸೋಲಿನಲ್ಲಿ, ಗೆಲುವಿನಲ್ಲಿ ಒಂದಾಗಿ ಸೇರಿಬಿಟ್ಟರು. ಎಲ್ಲಿ ಕರೆದಲ್ಲಿ ಓ ಎಂದು ಓಗೊಡಲು ಅವರು ತಮ್ಮ ಪಾರ್ಥಿವ ಶರೀರವನ್ನು ತೊರೆದರಲ್ಲವೇ?

ಹೌದು........

ಈ ಮಾತು ಸತ್ಯ........

ಮಹಾ ಸತ್ಯ........

ಶಿವಯೋಗಿಗಳು ಅಳಿಯಲಿಲ್ಲ! ಬಾಳಿದರು!! ಬದುಕಿದರು!!!

ಅಗೋ........! ನೋಡಿರಿ........!! ನಿಮ್ಮೆದುರಿನ ಸಕಲ ಚರಾಚರ ವಸ್ತುಗಳಲ್ಲಿಯೂ ವಿಜಯ ಮಹಾಂತ ಶಿವಯೋಗಿಗಳು ಕುಳಿತು ನಿಮ್ಮನ್ನೇ ನೋಡುತ್ತಿದ್ದಾರೆ. ನಿಮ್ಮನ್ನೇ ಕರೆಯುತ್ತಿದ್ದಾರೆ.

ಇಗೋ........! ಇಲ್ಲಿ........ ನಿಮ್ಮಲ್ಲಿ........ ನಿಮ್ಮ ಅಂತರಂಗದಲ್ಲಿ ನೋಡಿರಿ........!! ನಿಮ್ಮ ಹೃದಯ ಮಂದಿರದ ಸಿಂಹಾಸನದ ಮೇಲೆ ನಗು ನಗುತ್ತ ಆರೂಢರಾಗಿದ್ದಾರೆ!!!

ವಿಜಯ ಮಹಾಂತ ಶಿವಯೋಗಿಗಳು ಬಾಳಿದ್ದಾರೆ.
ಹೌದು........ ಈ ಮಾತು ಸತ್ಯ........ಮಹಾ ಸತ್ಯ........
ಇನ್ನೂ ಇದ್ದಾರೆ.
ಇಲ್ಲಿಯೇ ಇದ್ದಾರೆ.
ನಮ್ಮೊಂದಿಗೇ ಇದ್ದಾರೆ.
ನಮ್ಮಲ್ಲಿಯೇ ಇದ್ದಾರೆ.
ಆದ್ದರಿಂದ........
ಎಚ್ಚರಿಕೆ! ಎಚ್ಚರಿಕೆ!! ಎಚ್ಚರಿಕೆ!!!
ಅವರು........ನಮ್ಮೆಲ್ಲರ
ಅನ್ಯಾಯಕ್ಕೆ ಶೂಲವಾಗಿದ್ದಾರೆ!
ಮೋಸಕ್ಕೆ ಕರಗಸವಾಗಿದ್ದಾರೆ!!
ಅನಾಚಾರಕ್ಕೆ ಬೆಂಕಿಯ ಕೆಂಡವಾಗಿದ್ದಾರೆ!!!
ಆದರೆ........
ಸತ್ಯಕ್ಕೆ ಸತ್ಯವಾಗಿದ್ದಾರೆ!
ಪ್ರೇಮಕ್ಕೆ ಪ್ರೇಮವಾಗಿದ್ದಾರೆ!!
ಭಕ್ತಿಗೆ ಭಕ್ತಿಯಾಗಿದ್ದಾರೆ!!!

ಓಂ ಶಾಂತಿಃ ಶಾಂತಿಃ ಶಾಂತಿಃ

# ಪೂಜ್ಯ ಜಗದ್ಗುರುಗಳ ಆಶೀರ್ವಚನದಿಂದ......

"........ಜಿ. ಎಚ್. ಹನ್ನೆರಡುಮಠ ಅವರು ಸಹಜ ಕವಿಗಳು. ಸಾಹಿತಿಗಳು. ಭಾವಜೀವಿಗಳು. ಎಳೆಯ ವಯಸ್ಸಿನಲ್ಲಿಯೇ ಸಾಹಿತ್ಯ ಸರೋವರದಲ್ಲಿ ಈಸುತ್ತ ಬಂದವರು. ಕೇವಲ ಸಾಹಿತಿಗಳು ಅಷ್ಟೇ ಅಲ್ಲ; ಆಧ್ಯಾತ್ಮ ಪ್ರೇಮಿಗಳು. ಅಂತೆಯೇ ಈ ಮಹಾತ್ಮರ ಅಗಾಧ ಶಕ್ತಿಯನ್ನು ಕಂಡುಂಡು ಬರೆದಿದ್ದಾರೆ. ಭಾವಶುದ್ಧಿಯೊಡನೆ ಭಾಷೆಯ ಬಂಧುರತೆಯಲ್ಲಿ ಚರಿತ್ರವನ್ನೂ ಚಿತ್ರಿಸಿದ್ದಾರೆ. ಸಾಮಾನ್ಯರಿಗೂ ಅರ್ಥವಾಗುವಂತೆ, ಹೃದಯ ಪವಿತ್ರವಾಗುವಂತೆ ಚಿತ್ತಾಕರ್ಷಕ ಶೈಲಿಯಲ್ಲಿ ರಚಿಸಿದ್ದಾರೆ. 'ಚಿತ್ತರಗಿ ಚಿಜ್ಜ್ಯೋತಿ'ಯನ್ನು ಓದುತ್ತ ಹೋದಂತೆ ಭಕ್ತಿಯ ಆವೇಶದಲ್ಲಿ ತನ್ಮಯರಾಗಿ ಬರೆದಂತೆ ಭಾಸವಾಗುತ್ತದೆ. ವಿಜಯ ಮಹಾಂತ ಶಿವಯೋಗಿಯ ಕಥೆಯನ್ನು ಅಮೃತ ಗಂಗಾನದಿ ಉಕ್ಕಿ ಹರಿಯುವಂತೆ ಪ್ರಾರಂಭಿಸಿದ್ದಾರೆ. ....ಹೃದಯ ತೆರೆದು ಓದುವ ಸಾಧಕರಿಗೆ ಕಣ್ಣೀರು ಬಾರದೆ ಇರಲಾರವು;.... ವಿಷಯಗಳ ನಿರೂಪಣೆಯ ಶೈಲಿಯನ್ನು ನೋಡಿ ಭಾವುಕರು ತನ್ಮಯವಾಗಿ ಭಾವಾವೇಶದಲ್ಲಿ ಕುಣಿತು ಬಿಡುವಂತಿದೆ. ಹೃದಯದಲ್ಲಿ ಕರುಣೆದುಂಬಿ ಹೊರಸೂಸುವಂತಿದೆ....... ಜಿ. ಎಚ್. ಹನ್ನೆರಡುಮಠ ಅವರು ಸಮಯೋಚಿತವಾಗಿ ಭಾಷೆಯನ್ನು ಬಳಸಿ, ಬೆಳಕಿನಲ್ಲಿ ಮಹಾಬೆಳಕು ಕಾಣುವಂತೆ ಸುಮಧುರ ಶೈಲಿಯಲ್ಲಿ ಬರೆದು ಓದುಗರ ಹೃದಯವನ್ನು ಆಕರ್ಷಿಸಿದ್ದಾರೆ........"